ಶುಭಮಸ್ತು

ಶ್ರೀಮನ್ನಿರಾಭಾರ ವೀರಶೈವಾನ್ವಯ ಕೂಟಸ್ಥ
ಪ್ರಭುದೇವಪರಂಪರಾಗತ ಶ್ರೀ ಮರಿತೋಂಟದಾರ್ಯರಿಂ
ವೇದಾಗಮ ಪುರಾಣೋಪನಿಷದಾದಿ ಪ್ರಮಾಣಗಳತ್ತಣಿಂ
ಸಂಗ್ರಹಿಸಿ
ಕರ್ನಾಟಕ ತಾತ್ಪರ್ಯ ಸಹಿತವಾಗಿ ರಚಿಸಲ್ಪಟ್ಟ

# ವೀರಶೈವ ಪ್ರದೀಪಿಕೆ.

ಎಂಬ ಈ ಗ್ರಂಥವು
ಮಹಾರಾಜಾಕಾಲೇಜ್ ಮುನಿಷಿ
ಪಿ. ಆರ್. ಕರಿಬಸವಶಾಸ್ತ್ರಿಗಳಿಂದ ಕೊಡಲ್ಪಟ್ಟ ವೇದಾಗ
ಮಾರ್ಥೈಕ್ಯಪ್ರಕರಣ, ವೀರಶೈವಪ್ರಶಂಸಾಪ್ರಕರಣ, ಸತ್ಪಾ
ತ್ರದಾನಮಹಿಮ ಪ್ರಕರಣ, ಎಂಬ ಮೂರು ಪ್ರಕರಣಗಳಿಂದ
ಸಹಿತವಾಗಿ

ಈ ಗ್ರಂಥದ ಹಕ್ಕು ಯಾವತ್ತನ್ನೂ ಪಡೆದ,
ಮೈಸೂರು ಪುಸ್ತಕ ವ್ಯಾಪಾರಿ
ರಂಗಯ್ಯಶೆಟ್ಟರ ಕುಮಾರರಾದ
ವೆಂಕಟಾಚಲಂಶೆಟ್ಟರಿಂದ
ಸ್ವಕೀಯ
ಶ್ರೀಕೃಷ್ಣವಿಲಾಸ ಮುದ್ರಾಕ್ಷರಶಾಲೆಯಲ್ಲಿ
ಮುದ್ರಿಸಿ ಪ್ರಕಟಿಸಲ್ಪಟ್ಟಿತು.
ಮೈಸೂರು.
ಕ್ರಯ ೧೨ ಆಣೆ, ಸನ್ ೧೮೯೩.

# ಪೀಠಿಕೆ

ಶ್ರೀಮನ್ನಿರಂಜನ ಗಣೇಂದ್ರಾವತಾರ ಪ್ರಭುದೇವ ಪರಂಪರಾಗತರಾದ ಶ್ರೀಮರಿತೋಂಟದಾರ್ಯರೆಂಬ ಷಟ್ಸ್ಥಲ ಚರಮೂರ್ತಿಗಳು, ತರ್ಕಚಂದ್ರಿಕೆ, ವೀರಶೈವಾನಂದಚಂದ್ರಿಕೆ, ಷಟ್ಸ್ಥಲಚಂದ್ರಿಕೆ, ಕೈವಲ್ಯಸಾರ ಮುಂತಾದ ಗ್ರಂಥಗಳನ್ನು ಸಂಸ್ಕೃತ ಭಾಷೆಯಲ್ಲಿಯೂ, ಸಿದ್ಧೇಶ್ವರಪುರಾಣ, ಷಟ್ಸ್ಥಲತಿಲಕ ಮೊದಲಾದ ಗ್ರಂಥಗಳನ್ನು ಕರ್ಣಾಟಕ ಭಾಷೆಯಲ್ಲಿಯೂ ರಚಿಸಿ, ಕಡೆಯಲ್ಲಿ ವೀರಶೈವಮತ ಸ್ವರೂಪವು ಪಂಡಿತಪಾಮರರಿಗೆಲ್ಲಾ ಸಾಧಾರಣವಾಗಿ ತಿಳಿಯುವಂತೆ ಭಕ್ತಾದಿ ಷಟ್ಸ್ಥಲ ಲಕ್ಷಣ ಅಷ್ಟಾವರಣ ಲಕ್ಷಣಾದಿಗಳನ್ನೂ ವೇದಾಗಮಪುರಾಣಾದಿಗಳಿಂದ ಸಂಗ್ರಹಿಸಿ ತಾತ್ಪರ್ಯವಂ ಬರೆದು, ವೀರಶೈವಪ್ರದೀಪಿಕೆಯೆಂಬ ಪೆಸರನ್ನಿಟ್ಟು ಈ ಗ್ರಂಥವಂ ರಚಿಸಿದರೆಂದು ತೋರುತ್ತೆ. ಈ ಗ್ರಂಥದ ಒಂದೇ ಪ್ರತಿಯು ನಮಗೆ ಸಿಕ್ಕಿತು. ನೋಡುವಲ್ಲಿ ಅದರ ಕೊನೆಯ ಭಾಗವು ಇರಲಿಲ್ಲ. ಆದ್ದರಿಂದ ಆ ಗ್ರಂಥವನ್ನು ೭ ವರ್ಷಗಳಿಂದ ಅಲ್ಲಲ್ಲಿ ವಿಚಾರಿಸಿದಾಗ್ಯೂ ಮತ್ತೊಂದುಪ್ರತಿ ದೊರೆಯಲಿಲ್ಲ. ಈ ಗ್ರಂಥವು ವೀರಶೈವಮತಸ್ಥರಿಗೆ ಬಹು ಅನುಕೂಲವಾಗಿಯೂ, ಅತ್ಯಾವಶ್ಯಕ ವಿಷಯಗಳೊಡನೆ ಕ್ರೋಡೀಕರಿಸಲ್ಪಟ್ಟದ್ದಾಗಿಯೂ, ಇರುವದರಿಂದ ಇರುವಷ್ಟನ್ನೇ ಮುದ್ರಿಸಬೇಕೆಂದು ಪ್ರಯತ್ನಿಸುವಲ್ಲಿ ಪಿ. ಆರ್. ಕರಿಬಸವಶಾಸ್ತ್ರಿಗಳು, ಇನ್ನು ಕೆಲವು ಪ್ರಕರಣಗಳನ್ನು ಸಂಗ್ರಹಿಸಿಕೊಡುತ್ತೇನೆ. ಅದರೊಡನೆ ಮುದ್ರಿಸಿರೆಂದು ಹೇಳಿ, ವೇದಾಗಮಾರ್ಥೈಕ್ಯಪ್ರತಿಪಾದನ, ಶಿವಭಕ್ತಿಮಹಿಮೆ, ಸತ್ಪಾತ್ರದಾನನಿರೂಪಣ, ಎಂಬ ಮೂರು ಪ್ರಕರಣಗಳನ್ನು ಬರೆದುಕೊಟ್ಟರು. ಈ ಮೂರು ಪ್ರಕರಣಗಳನ್ನು ಕಡೆಗೆ ಸೇರಿಸಿ ಮುದ್ರಣವಂ ಮಾಡಿಸಿದೆನು. ಇದರಲ್ಲಿ ಅಕ್ಷರಸ್ಖಾಲಿತ್ಯ, ಅಕ್ಷರ ವ್ಯತ್ಯಾಸ ಮೊದಲಾದದೋಷಗಳು ಇನ್ನೇನಾದರೂ ಇದ್ದಲ್ಲಿ ಇನ್ನೊಂದುಸಾರಿ ಕ್ರಮಪಡಿಸಲಾಗುವದು.

ಸಜ್ಜನ ವಿಧೇಯನಾದ,

ಮೈಸೂರು ಶ್ರೀಕೃಷ್ಣವಿಲಾಸ ಪ್ರೆಸ್ ಪ್ರೊಪ್ರೈಟರ್

 ಎಂ. ಆರ್. ವೆಂಕಟಾಚಲಂಶೆಟ್ಟಿ.

# ವಿಷಯಾನುಕ್ರಮಣಿಕೆ



ವಿಷಯಾನುಕ್ರಮಣಿಕೆ ಸಂಪೂರ್ಣವಾದುದು.



# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೯ | ೨ | ಸ್ವರುಪಂ | ಸ್ವರೂಪಂ |
| ೧೦ | ೨೪ | ಸ್ಥಥಾ | ಸ್ತಥಾ |
| ೧೧ | ೨೯ | ಬುದ್ದಾ | ಬುದ್ಧಾ |
| ೧೨ | ೮ | ಭಕ್ಯಾ | ಭಕ್ತ್ಯಾ |
| ೧೪ | ೧೬ | ವಿಜ್ಜೆ | ವಿಜಿಜ್ಞಾ |
| ೧೯ | ೧೮ | ಜರಸ್ವ | ರಜಸ್ವ |
| ಡಿಟೊ | ೨೩ | ಸ್ಥಾನಿನಿ | ಸ್ಥಾನಾನಿ |
| ೨೦ | ೨೦ | ನೆರೇಷಾಂ | ನೇತರೇಷಾಂ |
| ೨೪ | ೩ | ಸಂಪ್ತಾಪ್ತಿ | ಸಂಪ್ರಾಪ್ತಿ |
| ೨೯ | ೫ | ಶೈಬಲಷ | ಶೈಬಲವ |
| ೩೧ | ೫ | ಲಿಂಗಸ್ಡಾ | ಲಿಂಗಸ್ಥಾ |
| ೩೫ | ೨೨ | ಸ್ಥಿರಾಶಯಿ | ಸ್ಥಿರಾಶಯ |
| ಡಿಟೊ | ಡಿಟೊ | ಶೈವಂ | ಶಿವಂ |
| ೩೯ | ೨೦ | ತಂತತಾ | ತಂತ್ರತಾ |
| ೪೪ | ೧೬ | ಭಾತ್ರಿ | ಭಾತಿ |
| ಡಿಟೊ | ೨೧ | ತೀತ್ರ್ವಾ | ತೀರ್ತ್ವಾ |
| ೪೫ | ೧೪ | ಛ್ಬವಸ್ಯ | ಛಿಬ್ವಸ್ಯ |
| ೪೬ | ೧೮ | ಆಶಿಷ್ಟಾ | ಅಶಿಷ್ಟಾ |
| ೪೭ | ೧೯ | ಕಮ್ಮಾರ್ಗ | ಕವರ್ಗಾ |
| ೫೦ | ೩ | ನೆವೆದ | ನವೆದ |
| ಡಿಟೊ | ೧೨ | ಎಷ | ವಿಷ |
| ೫೧ | ೨೯ | ಶ್ರದ್ದಾ | ಶ್ರದ್ಧಾ |
| ೫೫ | ೧೯ | ಧಾಗಣ | ಧಾರಣ |
| ೫೭ | ೩ | ಸನಾನಂ | ಸದಾನಂ |
| ೬೨ | ೨೨ | ವಿದ್ಯೈತೆ | ವಿದ್ಯತೆ |
| ೬೩ | ೪ | ಸ್ಕಯುಸ್ವಂ | ಸ್ವಯುಸ್ಸಂ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ಡಿಟೊ | ೧೮ | ಸೂಥ್ಕ್ಷ್ಮಂ | ಸೂಕ್ಷ್ಮಂ |
| ೬೪ | ೧೪ | ಶೈವಶ್ಯ | ಶೈವಸ್ಯ |
| ಡಿಟೊ | ೧೬ | ಸ್ಪಂಥ | ಸ್ಕಂಥ |
| ೬೮ | ೪ | ಪತಾನಂ | ಪ[illegible]ನಂ |
| ೭೧ | ೨೧ | ದರಣ್ಯೈ | ದರೆಣ್ಯೈ |
| ೭೪ | ೧೬ | ಪಂಚಕಃ | ಪಂಚಕ್ಯಃ |
| ೭೫ | ೨೧ | ಶರೆಣ್ಯಾಂ | ಶರಣ್ಯಾಂ |
| ೭೬ | ೨೦ | ಕಾಂಂ | ಕಾಂಕಂ |
| ೭೮ | ೨ | ಧವಳೆ | ಧವಳಾ |
| ೮೩ | ೧೧ | ಮೂತ್ರ್ಯ | ಮೂತ್ರ |
| ಡಿಟೊ | ೨೫ | ದೆಶೆ | ದೆಶ |
| ೮೮ | ೨೩ | ದಧ್ಯಾ | ದದ್ಯಾ |
| ೯೦ | ೧೩ | ಸ್ಮೃತಿತೀ | ಸ್ಮೃತೀತಿ |
| ಡಿಟೊ | ಡಿಟೊ | ಧಾರಣೀಯು | ೦ |
| ಡಿಟೊ | ೧೫ | ಸಮಸ್ತಾನಾಂ | ಧಾರಣೀಯಸ್ಸವು |
| ೯೧ | ೪ | ಸ್ನಾಸ್ತಿ ಸ್ನಾನ | [ಸ್ತಾತ್ನಾಂ |
| ಡಿಟೊ | ಡಿಟೊ | ತ್ರಿಪುಂಡ್ರಾ | ಸ್ತ್ರಿಪುಂಡ್ರಾಂ |
| ಡಿಟೊ | ೨೧ | ಲೊಸಾಕ | ಲೊಕ |
| ೯೨ | ೨೯ | ಷಟ್ತ್ರಿಂಶ | ಷಟ್ತ್ರಿಂಶ |
| ೯೪ | ೩ | ಮಧ್ಯೇಪಾ | ಮದ್ಯೇಪಾ |
| ೯೫ | ೧೦ | ದ್ದಿಜೊ | ದ್ವಿಜೊ |
| ೯೬ | ೧೪ | ಅಶೆಷಾ | ಅಶೆಷಾಂ |
| ೯೯ | ೧೮ | ಪ್ರಭು | ಪ್ರಭುಃ |
| ೧೦೦ | ೧೯ | ಜಪ್ಯ್ಯೊ | ಜಪ್ಯೊ |
| ಡಿಟೊ | ೨೦ | ಮೃಗಹಾಂ | ಮೃಗಹಾ |
| ೧೦೧ | ೨೯ | ತೆರ್ಥಂ | ತುರ್ಥಂ |
| ೧೦೨ | ೨೧ | ಕೆವಲಚೆ | ಕೆವಲಂಚೆ |
| ೧೦೪ | ೨೪ | ತ್ರಯು | ತ್ರಯಂ |
| ಡಿಟೊ | ಡಿಟೊ | [illegible] | ಪ್ರ್ಯತ್ತೆರೊ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ಡಿಟೊ | ೨೭ | ನಸ್ಪೃಧೀಃ | ನಸ್ಪೃಧಃ |
| ೧೦೫ | ೧೮ | ಧೆರ | ಧರ |
| ೧೦೬ | ೨೧ | ಜಪ್ಯ | ಜಪ |
| ೧೦೮ | ೩೦ | ಜಪೆ | ಜಪ |
| ೧೧೪ | ೮ | ರಭ್ಯಾ | ಇತ್ಯಾರಭ್ಯ |
| ಡಿಟೊ | ೯ | ನಿರುತರಂ | ನಿರಂತರಂ |
| ೧೧೭ | ೮ | ಸನಾತನಃ | ಸ್ವನಾತ್ರನಃ |
| ಡಿಟೊ | ೧೦ | ಸ್ವಐ | ಸ್ವಪವ |
| ಡಿಟೊ | ೧೪ | ಕ | ಕಾ |
| ೧೨೮ | ೧೮ | ನಹಿಂ | ನಹಿ |
| ೧೩೦ | ೪ | ವಿಭೂಪಾ | ವಿಭೂಷಾ |
| ಡಿಟೊ | ೧೭ | ನಿಷ್ಪಲೊ | ನಿಷ್ಫಲೊ |
| ೧೩೪ | ೧೧ | ಲಿಂಗಾ | ಲ್ಲಿಂಗಾ |
| ಡಿಟೊ | ೧೨ | ವೆಪ | ಲೆಪ |
| ೧೩೯ | ೧೦ | ಪ್ರಭು | ಪ್ರಭು |
| ೧೪೦ | ೩ | ವಿಷ್ಠ್ಯಾಯಾಂ | ವಿಷ್ಟ್ಯಾಯಾಂ |
| ೧೪೭ | ೨೩ | ಲಾಂಕಾಳಂ | ಲಾಕಾಳಂ |
| ೧೪೮ | ೧೧ | ತ್ವೈರ್ಧಂ | ತ್ವೈರ್ಥಂ |
| ಡಿಟೊ | ೨೯ | ನಂತೆ | ನಂತ |
| ೦೫೧ | ೨೨ | ಪ್ರಕ್ಷಾರಿತಂ | ಪ್ರಕ್ಷಾಳಿತಂ |





ಶ್ರೀರೇಣುಕಾಚಾರ್ಯಾಯನಮಃ.



# ವೀರಶೈವಪ್ರದೀಪಿಕಾ.

ಆರಭ್ಯತೇ.



ಮೂ॥ ಋತಂಸತ್ಯಂ ಪರಬ್ರಹ್ಮ ಪುರುಷಂ ಸಾಂಬಮೀಶ್ವರಂ ।
ಊರ್ಧ್ವರೇತಂ ವಿರೂಪಾಕ್ಷಂ ಹೃದಿಧ್ಯಾಯೆಮಹೇಶ್ವರಂ ॥ ೧ ॥
ನಮಶ್ಶ್ರೀ ಶೈಲನಾಥಾಯ ಮಲ್ಲಿಕಾರ್ಜುನ ಮೂರ್ತಯೆ ।
ಅದ್ವಿತೀಯಾಯನಿತ್ಯಾಯ ಶಿವಾಯ ಶಿವದಾಯಿನೆ ॥ ೨ ॥
ಯಸ್ಸಂಸಾರಾನ್ಮಹಾಘೋರಾ ನ್ಮೋಚಯತ್ಯಾಶ್ರಿತಾನ್ಜನಾನ್ ।
ಕೃಪಾಕಟಾಕ್ಷ ಪಾಶೇನ ತಸ್ಮೈಶ್ರೀ ಗುರವೇನಮಃ ॥ ೩ ॥



ಶಿವಭಕ್ತ್ಯಮೃತಾಸ್ವಾದ ಚೇತಸೇ ಶಿವಜನ್ಮನೇ ॥
ನಮಶ್ಶ್ರೀ ನಂದಿನಾಥಾಯ ಶಂಕರಾಪರಮೂರ್ತಯೆ ॥ ೪ ॥
ಸರ್ವಂ ಶಕ್ತ್ಯಾಂ ಶಮುತ್ಸೃಜ್ಯ ಶಿವಮೇಕಮಶಿಶ್ರಿಯತ್ ॥
ಯಸ್ತಸ್ಮೈ ಭೃಂಗಿನಾಥಾಯ ನಮಃಕಲ್ಯಾಣರೂಪಿಣೆ ॥ ೫ ॥
ದಕ್ಷಯಜ್ಞ ಶಿರೊಹರ್ತ್ರೆ ಸುರದರ್ಪಾಪಹಾರಿಣೆ ॥
ವೀರಭದ್ರಾಯ ರೌದ್ರಾಯ ನಮೊವಿಕ್ರಮಶಾಲಿನೆ ॥ ೬ ॥
ಜಗತ್ಸಂಹರಣೊದ್ಯುಕ್ತ ನೃಸಿಂಹಾಜಿನಹಾರಿಣೆ ।
ನಮಶ್ಶ್ರೀಶರಭೇಶಾಯ ಪದಾಷ್ಟಕ ವಿಭೂಸಿನೆ ॥ ೭ ॥
ಏವಮಾದೀನ್ಮಹಾಶೂರಾ ನಸಂಖ್ಯಾತಾ ನ್ಮಹಾಗಣಾನ್ ।
ನಮಾಮಿ ಶಿವಸದ್ಭಕ್ತಿಸಾಗರೆ ಮಗ್ನಮಾನಸಾನ್ ॥ ೮ ॥

ನಮೋ ಬಸವರಾಜಾಯ ವೃಷೇಂದ್ರ ಪರಮೂರ್ತಯೇ ।
ಚರಾರ್ಚನೈಕನಿಷ್ಠಾಯ ಶಿವಾಚಾರಪ್ರವರ್ತಿನೇ ॥ ೯ ॥
ಶಿವತತ್ವಾಮೃತಾಸ್ವಾದ ಚೇತಸೇ ಯೋಗಿನೇ ನಮಃ ॥
ಶ್ರೀಚನ್ನಬಸವೇಶಾಯ ಷಟ್ಸ್ಥಲಬ್ರಹ್ಮವಾದಿನೇ ॥ ೧೦ ॥
ಗಣಾನಾಂ ಬಸವಾದೀನಾಂ ಸರ್ವೇಷಾಂ ಜ್ಞಾನದಾಯಿನೇ ॥
ಯೋಗೀಂದ್ರಾಯ ನಮಸ್ತಸ್ಮೈ ಪ್ರಭವೇ ಶಿವಮೂರ್ತಯೇ ॥ ೧೧ ॥

ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ ಬ್ರಹ್ಮ * ಪ್ರತ್ಯಂಜನಸ್ತಿಷ್ಠತಿ ಸಂಯುಗಸ್ಯಾಂತಕಾಲೇ ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ * ಸರ್ವಂ ಖಲ್ವಿದಂ ಬ್ರಹ್ಮ * ಸರ್ವೋ ವೈ ರುದ್ರಃ * ಸರ್ವೋ ಹ್ಯೇಷ ರುದ್ರಸ್ತಸ್ಮೈ ರುದ್ರಾಯ ನಮೋ ಅಸ್ತು * ತತಃ ಪರಂ ಬ್ರಹ್ಮ ಪರಂ ಬೃಹಂತಂ ಯಥಾಗ್ನಿಕಾಯಂ ಸರ್ವಭೂತೇಷು ಗೂಢಂ । ವಿಶ್ವಸ್ಯೈಕಂ ಪರಿವೇಷ್ಟಿತಾರಮೀಶಂ ಜ್ಞಾತ್ವಾಮೃತಾಸ್ತೇ ಭವಂತಿ * ಅಥ ಕಸ್ಮಾದುಚ್ಯತೇ ಪರಂ ಬ್ರಹ್ಮ ಯಸ್ಮಾದುಚ್ಚಾರ್ಯಮಾಣ ಏವ ಬೃಹತಿ ಬೃಂಹಯತಿ ತಸ್ಮಾದುಚ್ಯತೇ ಪರಂ ಬ್ರಹ್ಮ * ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ ಮಹರ್ಷಿಃ । ಹಿರಣ್ಯಗರ್ಭಂ ಪಶ್ಯತಿ ಜಾಯಮಾನಂ ಸ ನೋ ದೇವಶ್ಶುಭಯಾ ಸ್ಮೃತ್ಯಾ ಸಂಯುನಕ್ತು * ದ್ಯಾವಾಭೂಮೀ ಜನಯನ್ದೇವ ಏಕಃ * ಸ ಐಕ್ಷತ ಲೋಕಾನ್ನು ಸೃಜಾ ಇತಿ * ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ ತದ್ಬ್ರಹ್ಮೇತಿ ವಿಜಿಜ್ಞಾಸಸ್ವ * ದೇವಾ ಹವೈ ಸ್ವರ್ಗಂ ಲೋಕಮಗಮಂಸ್ತೇ ದೇವಾ ರುದ್ರಮಪೃಚ್ಛನ್ ಕೋ ಭವಾನಿತಿ ಸೋಬ್ರವೀದಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತ ಇತಿ ಸೋಂತರಾದಂತರಂ ಪ್ರಾವಿಶದ್ದಿಶಶ್ಚಾಂತರಂ ಪ್ರಾವಿಶತ್ಸೋಹಂ ನಿತ್ಯಾನಿತ್ಯೋಹಂ ..................... ಧರ್ಮಂ ಧರ್ಮೇಣ ತರ್ಪಯಾಮಿ ಸ್ವೇನ ತೇಜಸಾ * ತತೋ ದೇವಾ ರುದ್ರಂ ನಾಪಶ್ಯಂಸ್ತೇ ದೇವಾ ರುದ್ರಂ ಧ್ಯಾಯಂತಿ ತತೋ ದೇವಾ ರುದ್ರಂ ಧ್ಯಾಯಂತಿ ತತೋ ದೇವಾ ಊರ್ಧ್ವಬಾಹವೋ ರುದ್ರಂ ಸ್ತುವಂತಿ * ಯೋ ವೈ ರುದ್ರಸ್ಸ ಭಗವಾನ್........ತದೇತದ್ರುದ್ರಚರಿತಂ * ಸ ಓಂಕಾರೋ ಯ ಓಂಕಾರಸ್ಸ ಪ್ರಣವೋ ಯಃ ಪ್ರಣವಸ್ಸ ಸರ್ವವ್ಯಾಪೀ ಯಸ್ಸರ್ವ

ವ್ಯಾಪೀಸೋನಂತೋಯೋನಂತಸ್ತತ್ತಾರಂ ಯತ್ತಾರಂ ತತ್ಸೂಕ್ಷ್ಮಂ ಯ
ತ್ಸೂಕ್ಷ್ಮಂತಚ್ಛುಕ್ಲಂ ಯಚ್ಛುಕ್ಲಂ ತದ್ವೈದ್ಯುತಂ ಯದ್ವೈದ್ಯುತಂ
ತತ್ಪರಂಬ್ರಹ್ಮೇತಿ ಸಏಕಸ್ಸಏಕೋ ರುದ್ರಸ್ಸ ಈಶಾನಸ್ಸಭಗವಾಂಸ್ಸಮ
ಹೇಶ್ವರಸ್ಸಮಹಾದೇವಃ * ಅಥ ಕಸ್ಮಾದುಚ್ಯತ ಓಂಕಾರಃ ಅಥ ಕಸ್ಮಾ
ದುಚ್ಯತೇ ಪ್ರಣವಃ ಅಥ ಕಸ್ಮಾದುಚ್ಯತೇ ಸರ್ವವ್ಯಾಪೀ.........ಅಥ
ಕಸ್ಮಾದುಚ್ಯತೇ ಏಕೋಯಸ್ಸರ್ವಾನ್ ಲೋಕಾನುದ್ಗೃಹ್ಣಾತಿ ಸೃಜತಿ
ವಾಸಯತಿ ತಸ್ಮಾದುಚ್ಯತ ಏಕಃ ಅಥ ಕಸ್ಮಾದುಚ್ಯತೇ ಏಕೋ ರುದ್ರ
ಏಕಏವ ರುದ್ರೋ ನದ್ವಿತೀಯಾಯ ತಸ್ಥುರೀಯ ಇಮಂಲೋಕಮೀಶಾ
ತ ಈಶನೀಭಿರ್ಜನನೀಯಃ ಪ್ರತ್ಯಂಜನ ಸ್ತಿಷ್ಠತಿ ಸಂಯುಗಸ್ಯಾಂ
ತಕಾಲೇಸಂಸೃಜ್ಯ ವಿಶ್ವಾಭುವನಾನಿಗೋಪ್ತಾ ತಸ್ಮಾದುಚ್ಯತೇ ಏಕೋ
ರುದ್ರಃ * ಏಕೋಹಿರುದ್ರೋನದ್ವಿತೀಯಾಯತಸ್ಥು...... ವಿಶ್ವತಶ್ಚ
ಕ್ಷುರುತವಿಶ್ವತೋಹಸ್ತ ಉತವಿಶ್ವತಃಪಾತ್ ಸಂಬಾಹುಭ್ಯಾಂಧಮತಿಸಂ
ಪತತ್ರೈರ್ದ್ಯಾವಾಪೃಥಿವೀಜನಯನ್ದೇವಏಕಃ * ಯದಾತಮಸ್ತನ್ನ
ದಿವಾನರಾತ್ರಿರ್ನಸನ್ನಚಾಸಚ್ಛಿವ ಏವಕೇವಲಃ । ತದಕ್ಷರಂತತ್ಸವಿತುರ್ವ
ರೇಣ್ಯಂ ಪ್ರಜ್ಞಾಚತಸ್ಮಾತ್ಪ್ರಸೃತಾಪುರಾಣೀ * ಮಾಯಾಂತುಪ್ರಕೃ
ತಿಂವಿಂದ್ಯಾನ್ಮಾಯಿನಂತು ಮಹೇಶ್ವರಂ । ತಸ್ಯಾವಯವಭೂತೇನವ್ಯಾ
ಪ್ತಂ ಸರ್ವಮಿದಂಜಗತ್ * ತಮೀಶ್ವರಾಣಾಂಪರಮಂಮಹೇಶ್ವರಂತಂ
ದೈವತಾನಾಂ ಪರಮಂಚದೈವತಂ । ಪತಿಂಪತೀನಾಂಪರಮಂಪರಸ್ತಾತ್
ವಿದಾಮದೇವಂ ಭುವನೇಶಮೀಡ್ಯಂ । ನತಸ್ಯಕಾರ್ಯಂ ಕರಣಂಚವಿದ್ಯ
ತೇ । ನತತ್ಸಮಶ್ಚಾಭ್ಯಧಿಕಶ್ಚದೃಶ್ಯತೇ । ಪರಾಸ್ಯಶಕ್ತಿರ್ವಿವಿಧೈವಶ್ರೂ
ಯತೇ।ಸ್ವಾಭಾವಿಕೀಜ್ಞಾನಬಲಕ್ರಿಯಾಚ । ನತಸ್ಯಕಶ್ಚಿತ್ಪತಿರಸ್ತಿಲೋ
ಕೇನಚೇಶಿತಾನೈವಚ ತಸ್ಯಲಿಂಗಂ । ನಕಾರಣಂ ಕಾರಣಾಧಿಪೋನಚಾಸ್ಯ
ಕಶ್ಚಿಜ್ಜನಿತಾನಚಾಧಿಪಃ * ಯದಾಚರ್ಮವದಾಕಾಶಂ ವೇಷ್ಟಯಿಷ್ಯಂತಿ
ಮಾನವಾಃ । ತದಾಶಿವಮವಿಜ್ಞಾಯ ದುಃಖಸ್ಯಾಂತೋಭವಿಷ್ಯತಿ * ವೇದಾ
ಹಮೇತಂ ಪುರುಷಂ ಮಹಾಂತ ಮಾದಿತ್ಯವರ್ಣಂ ತಮಸಃಪರಸ್ತಾತ್
ತಸ್ಯಯೋನಿಂ ಪರಿಪಶ್ಯಂತಿ ಧೀರಾಸ್ತಸ್ಮಿ ಮನಶ್ಶಿವ ಸಂಕಲ್ಪಮಸ್ತು *
ವೇದಾಹಮೇತಂ ಪುರುಷಂ ಮಹಾಂತ ಮಾದಿತ್ಯವರ್ಣಂ ತಮಸಃಪರ
ಸ್ತಾತ್ । ತಮೇವಂ ವಿದಿತ್ವಾ ತಿಮೃತ್ಯುಮೇತಿ ನಾನ್ಯಃ ಪಂಥಾ

ಅಯನಾಯವಿದ್ಯತೇ * ಅತಃಪರಂ ನಾನ್ಯದಣೀಯಸಗ್ಂಹಿ ಪರಾತ್ಪ
ರಂ ಯನ್ಮಹತೋ ಮಹಾಂತಂ ಯದೇಕಮವ್ಯಕ್ತಮನಂತರೂಪಂವಿಶ್ವಂ
ಪುರಾಣಂ ತಮಸಃಪರಸ್ತಾತ್ * ಪ್ರತ್ಯಾಜನಸ್ತಿಷ್ಠತಿಸ
ಯುಗಸ್ಯಾಂತಕಾಲೇಏಕಏವರುದ್ರೋನದ್ವಿತೀಯಾಯತಸ್ಥೇನಬ್ರಹ್ಮಾನವಿ
ಷ್ಣುರ್ನಸೂರ್ಯೋನಾಗ್ನಿರ್ನಚಂದ್ರತಾರಕಾಃ * ಅಣೋರಣೀಯಾನ್ಮ
ಹತೋ ಮಹೀಯಾನಾತ್ಮಾಗುಹಾಯಾಂ ನಿಹಿತೋಸ್ಯಜಂತೋಸ್ತಮಕ್ರ
ತುಂ ಪಶ್ಯತಿ ವೀತಶೋಕೋ ಧಾತುಃಪ್ರಸಾದಾನ್ಮಹಿಮಾನಮೀಶಂ ...
ಅಜಾಮೇಕಾಂಲೋಹಿತಶುಕ್ಲಕೃಷ್ಣಾಂ ಬಹ್ವೀಂಪ್ರಜಾಂ ಜನಯಂತೀ
ಗಂ ಸರೂಪಾಮಜೋಹ್ಯೇಕೋ ಜುಷಮಾಣೋನುಶೇತೇಜಹಾತ್ಯೇನಾಂಭುಕ್ತ
ಭೋಗಾಮಜೋನ್ಯಃ * ದಹರಂವಿಪಾಪ್ಮಂಪರವೇಶ್ಮಭೂತಂ ಹೃ
ತ್ಪುಂಡರೀಕಂಪುರಮಧ್ಯಸಂಸ್ಥಂ ತತ್ರಾಪಿದಹ್ರಂ ಗಗನಂ ವಿಶೋಕ
ಸ್ತಸ್ಮಿನ್ಯದಂತಸ್ತದುಪಾಸಿತವ್ಯಂ । ಯೋವೇದಾದೌ ಸ್ವರಃಪ್ರೋಕ್ತೋ
ವೇದಾಂತೇಚ ಪ್ರತಿಷ್ಠಿತಃ । ತಸ್ಯ ಪ್ರಕೃತಿ ಲೀನಸ್ಯಯಃಪರಸ್ಸ
ಮಹೇಶ್ವರಃ * ಋತಗ್ಂಸತ್ಯಂ ಪರಂಬ್ರಹ್ಮ ಪುರುಷಂಕೃಷ್ಣಪಿಂಗ
ಳಂ ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯವೈನಮೋನಮಃ * ಧ್ಯಾ
ಯೀತೇಶಾನಂ ಪ್ರಧ್ಯಾಯಿತವ್ಯಂ ಸರ್ವಮಿದಂಬ್ರಹ್ಮ ವಿಷ್ಣುರುದ್ರೇಂದ್ರಾ
ಸ್ತೇ ಸಂಪ್ರಸೂಯಂತೇ । ಸರ್ವಾಣಿಚೇಂದ್ರಿಯಾಣಿ ಸಹಭೂತೈರ್ನಕಾರ
ಣಂ ಕಾರಣಾನಾಂಧಾತಾಕಾರಣಂತುಧ್ಯೇಯಸ್ಸರ್ವೈಶ್ವರ್ಯಸಂಪ
ನ್ನಸ್ಸರ್ವೇಶ್ವರ ಶ್ಶಂಭುರಾಕಾಶಮಧ್ಯಗೆ ಶಿವಏಕೋ ಧ್ಯೇಯಃ ಶಿವಂಕರ
ಸ್ಸರ್ವಮನ್ಯಂ ಪರಿತ್ಯಜ್ಯ ಸಮಾಪ್ತಾಥರ್ವಣೀಶಿಖಾ * ಈಶಾನಸ್ಸರ್ವ
ವಿದ್ಯಾನಾಮೀಶ್ವರಸ್ಸರ್ವಭೂತಾನಾಂ ಬ್ರಹ್ಮಾಧಿಪತಿ ಬ್ರಹ್ಮಣೋಧಿ
ಪತಿ ಬ್ರಹ್ಮಾ ಶಿವೋಮೇ ಅಸ್ತು ಸದಾಶಿವೋಂ * ತಸ್ಮಾನ್ಮನೋಲೀನೇ
ಮನಸಿಗತೇ ಸಂಕಲ್ಪೇ ವಿಕಲ್ಪೇ ದಗ್ಧೇ ಪುಣ್ಯಪಾಪೇ ಸದಾಶಿವೋಂ ಶಕ್ತ್ಯ
ತ್ಮಾ ಸರ್ವತ್ರಾವಸ್ಥಿತಃ ಪ್ರಕಾಶಯತೀತಿ ವೇದವಚನಂ ಭವತಿ ಭವತಿ *
ಓಮಿತ್ಯೇ ತದಕ್ಷರಂ ಪರಬ್ರಹ್ಮ ಅಸ್ಯ ಪಾದಾಶ್ಚತ್ವಾರೋವೇದಾಶ್ಚತುಃ
ಪಾದಿದಮಕ್ಷರಂ ಪರಂಬ್ರಹ್ಮ ಪೂರ್ವಾಚಮಾತ್ರಾದಿ ಪೃಥಿವ್ಯಕಾರಃ
ಸಋುಗ್ಭಿರುಗ್ವೇದೋಬ್ರಹ್ಮಾಪಶವೋ ಗಾಯತ್ರೀ ಗಾರ್ಹಪತ್ಯೋ ದ್ವಿತೀ
ಯಾಂತರಿಕ್ಷಂ ಸ ಉಕಾರಃ ಸ ಯಜುರ್ಭಿರ್ಯಜುರ್ವೇದೋ ವಿಷ್ಣುರುದ್ರಾ

ಸ್ತ್ರಿಷ್ಟುಪ್ ದಕ್ಷಿಣಾಗ್ನಿಃ ತೃತೀಯಾದ್ಯಾ ಸ್ಸಮಕಾರಃ * ಹೃತ್ಪುಂಡರೀಕಂ ವಿರಜಂ ವಿಶುದ್ಧಂ ವಿಚಿಂತ್ಯ ಮಧ್ಯೇ ವಿಶದಂ ವಿಶೋಕಂ ಅಚಿಂತ್ಯಮವ್ಯಕ್ತಮನಂತರೂಪಂ ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಂ । ತಥಾದಿ ಮಧ್ಯಾಂತ ವಿಹೀನಮೇಕಂ ವಿಭುಂ ಚಿದಾನಂದಮರೂಪಮದ್ಭುತಂ । ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ । ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್। ಸ ಬ್ರಹ್ಮಾ ಸ ಹರಿಸ್ಸ ಶಿವಸ್ಸೇಂದ್ರಸ್ಸೋಕ್ಷರಃ ಪರಮಸ್ಸ್ವರಾಟ್। ಸ ಏವ ವಿಷ್ಣುಸ್ಸ ಪ್ರಾಣಸ್ಸ ಕಾಲೋಗ್ನಿಸ್ಸ ಚಂದ್ರಮಾಸ್ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ ಸನಾತನಂ ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ * .

ಹೀಗೆಂಬ ಛಾಂದೋಗ್ಯ, ಬೃಹದಾರಣ್ಯ, ಶ್ವೇತಾಶ್ವತರ, ಅಥರ್ವಶಿರ, ತೈತ್ತಿರೀಯ, ಬೃಹಜ್ಜಾಬಾಲ, ಭೃಗುವಲ್ಲಿ, ಕೈವಲ್ಯ, ಶಿವಸಂಕಲ್ಪ, ಯಜುರಾರಣ್ಯ, ನಾರಾಯಣವಲ್ಲೀ, ಕಾಚಿರುದ್ರ, ಹಂಸ, ಬೃಹನ್ನಾರಾಯಣ, ಜಾಬಾಲ, ಮುಂಡಕ, ಪೂರ್ವತಾಪನೀಯ, ಅಥರ್ವಶಿಖಾದ್ಯುಪನಿಷತ್ತುಗಳಿಂ ಸತ್ಸ್ವರೂಪನಾದ, ಸಜಾತೀಯ ವಿಜಾತೀಯ ಸ್ವಗತಭೇದ ಶೂನ್ಯನಾದ, ಸರ್ವಸ್ವರೂಪನಾದ, ಸರ್ವವ್ಯಾಪಕನಾದ, ಸರ್ವಾಧಿಕನಾದ, ಸರ್ವದೇವಸಂಸ್ತೂಯಮಾನನಾದ, ಸರ್ವಜ್ಞನಾದ, ಸರ್ವತೇಜಃಪ್ರಕಾಶನಾದ, ಸರ್ವೋಪಾಸ್ಯನಾದ, ಸಮಸ್ತವೇದಪ್ರತಿಪಾದ್ಯನಾದ, ಸತ್ಯಸ್ವರೂಪನಾದ, ಸಂಕಲ್ಪವಿಕಲ್ಪಪುಣ್ಯಪಾಪಲೇಪಗಳಿಂ ವಿರಹಿತನಾದ, ಸರ್ವಪ್ರಕಾಶನಾದ, ಸೃಷ್ಟಿಸ್ಥಿತಿಸಂಹಾರಕಾರಣನಾದ, ಸರ್ವವಿದ್ಯಾಧಿಪತಿಯಾದ, ಕಾಲತ್ರಯಾಬಾಧ್ಯನಾದ, ಕರುಣಾರಸರತ್ನಾಕರನಾದ, ಕರ್ಮಫಲಭೋಗಶೂನ್ಯನಾದ, ಕೃಷ್ಣಪಿಂಗಳನಾದ, ಕಾರಣಕಾರಣನಾದ, ಪ್ರಾಕೃತಭೋಗರಹಿತನಾದ, ಪಶುಪಾಶವಿಲಕ್ಷಣನಾದ, ಪ್ರಣವಾದಿಸರ್ವಮಂತ್ರಪ್ರತಿಪಾದ್ಯಮಾನನಾದ, ಪರಾತ್ಪರನಾದ, ಪರಮಮಹದ್ರೂಪನಾದ, ಪರಂಜ್ಯೋತಿಸ್ಸ್ವರೂಪನಾದ, ಪ್ರಣವಪ್ರತೀತನಾದ, ಪ್ರಶಾಂತನಾದ, ಮಾಯೋಪಾಧಿಕನಾದ, ಮೋಕ್ಷಕಾರಣನಾದ, ಮೃತ್ಯುಂಜಯನಾದ, ಮಾಯಾತೀತನಾದ, ಬ್ರಹ್ಮವಿಷ್ಣುರುದ್ರೇಂದ್ರಾದಿ ಸಮಸ್ತದೇವನಿಯಾಮಕನಾದ, ಅ

ತೀಂದ್ರಿಯನಾದ, ಅವಾಙ್ಮನಸಗೋಚರನಾದ, ಅಂತರಾಂತರನಾದ, ಅಚಿಂತ್ಯನಾದ, ಅವ್ಯಕ್ತನಾದ, ಅನಂತರೂಪನಾದ, ಅಪ್ರತಿಮಸ್ವರೂಪನಾದ, ಆದಿಮಧ್ಯಾಂತರಹಿತನಾದ, ಅತ್ಯದ್ಭುತನಾದ, ದಹರಾಕಾಶವರ್ತಿಯಾದ, ಜಗದೀಶನಾದ, ಬ್ರಹ್ಮವಿಷ್ಣುರುದ್ರೇಂದ್ರಾದಿಸಮಸ್ತಬೃಂದಾರಕ ಬೃಂದವಂದಿತ ಚರಣಾರವಿಂದನಾದ, ತ್ರಿಗುಣಾತೀತನಾದ, ತ್ರಿಪುರಾಂತಕನಾದ, ತ್ರಿಲೋಚನನಾದ, ಚರಾಚರಾತ್ಮಕ ನಿಖಿಲಪ್ರಪಂಚಾಧಾರನಾದ, ಚಂದ್ರಶೇಖರನಾದ, ಚಿದಾನಂದ ಸ್ವರೂಪನಾದ, ವಿರೂಪಾಕ್ಷನಾದ, ವಿಶುದ್ಧನಾದ, ಯೋಗಿಗಳಿಂ ಪಡೆಯಲ್ತಕ್ಕವನಾದ, ಉಮಾ ಸಹಾಯನಾದ, ಭಾನುಮಂಡಲಮಧ್ಯಸ್ಥನಾದ, ಶೋಕರಹಿತನಾದ,ಹೃದಯ ಪುಂಡರೀಕದೊಳ್ ಧ್ಯೇಯನಾದ, ಅನಂತಕಲ್ಯಾಣಗುಣಪರಿಪೂರ್ಣನಾದ, ಶ್ರೀಮತ್ಪರಶಿವಮೂರ್ತಿಯ ಚರಣಕಮಲಂಗಳಪೂಜಾಬಲದಿಂ ಲಬ್ಧವಾದ ತತ್ಪ್ರಸಾದದಿಂ ನಿರ್ಮಲಜ್ಞಾನವೈಭವನುಂಪಡೆದು ನಿಖಿಲನಿಗಮಾಗಮೇತಿಹಾಸ ಸ್ಮೃತಿಪುರಾಣಾದಿವಾಕ್ಯ ಪ್ರಮಾಣ ಪಾರಾವಾರಪಾರೀಣನೆನಿಸಿದ, ನಿರಾಭಾರ ವೀರಶೈವ ಸಾಮ್ರಾಜ್ಯ ಧುರಂಧರನಾದ, ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸ್ವಕಪೋಲಕಲ್ಪಿತವಲ್ಲದೆ ಸೋಪಷ್ಟಂಭಕವಾಗಿ ಅಷ್ಟಾವರಣಚಂದ್ರಿಕೆಯೆಂಬ, ಗ್ರಂಥಂ ಕರ್ಣಾಟಭಾಷಾವಿವರಣದೊಡನೆ ರಚಿಸಲ್ಪಡುವದಿದರೊಳ್ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯನೆಂಬ ಷಟ್ಸ್ಥಲಂಗಳಲಕ್ಷಣವೂ; ಗುರು, ಲಿಂಗ, ಜಂಗಮ, ವಿಭೂತಿ,ರುದ್ರಾಕ್ಷ, ಮಂತ್ರ, ಪಾದೋದಕ, ಪ್ರಸಾದ ಎಂಬ ಅಷ್ಟಾವರಣಂಗಳ ಲಕ್ಷಣವೂವಿಷಯಂಗಳಾಗಿಪ್ಪವೆಂದು ತಿಳಿಯಲ್ವೇಳ್ಕುಂ. ಅದೆಂತೆನೆ.—

ಸ್ಕಾಂದಪುರಾಣದಲ್ಲಿ, ಶಂಕರಸಂಹಿತೆಯಲ್ಲಿ ಶೌನಕಾದಿ ಋಷಿಗಳು ಸೂತಪೌರಾಣಿಕನನ್ನು ಕೇಳುತ್ತಾರೆ.

ಮೂ॥ ಭವತಾ ಕಥಿತಾ ವೃತ್ತಿ ರ್ವೀರಮಾಹೇಶ್ವರಾರ್ಚಿತಾ ।

ಅಸ್ಮಾಕಂ ಸಾಂಪ್ರತಂ ವಿದ್ವನ್ ವದಷಟ್ಸ್ಥಲನಿರ್ಣಯಂ ॥ ೧॥

ಟೀ॥ ಎಲೈ ವಿದ್ವಾಂಸನಾದ ಸೂತ ಪೌರಾಣಿಕನೆ, ನೀನು ನಮಗೆ ವೀರಮಾಹೇಶ್ವರರಿಂದಾ ಚರಿಸಲ್ಪಡುವ ಶಿವಯೋಗಿ ವರ್ತನೆಯಂ ನಿರೂಪಿಸಿದೆ. ಈಗ ಷಟ್ಸ್ಥಲನಿರ್ಣಯವನ್ನು ನಿರೂಪಿಸು.

( ಸೂತಮುನಿಯು ಹೇಳುತ್ತಾನೆ. )

ಮೂ॥ ವಕ್ಷ್ಯೇ ಭಾಗ್ಯವತಾಂ ಶ್ರೇಷ್ಠಾಃ ಷಟ್ಸ್ಥಲಾನಿ ಸಮಾಸತಃ ।
ಯಾನಿ ಶಕ್ತಿಧರಾಯಾಹ ಶ್ರೀಕಂಠಃ ಪಾರ್ವತೀಪತಿಃ ॥೧॥

ಟೀ॥ ಭಾಗ್ಯಶಾಲಿಗಳಲ್ಲಿ ಶ್ರೇಷ್ಠರಾದ ಎಲೈ ಋಷಿಗಳಿರಾ ಉಮಾಪತಿಯಾದ ಪರಶಿವನು ಷಣ್ಮುಖನಿಗೆ ಯಾವ ಷಟ್ಸ್ಥಲಗಳನ್ನು ಹೇಳಿದನೋ ಆ ಷಟ್ಸ್ಥಲಗಳನ್ನು ನಾನು ನಿಮಗೆ ಸಂಕ್ಷೇಪವಾಗಿ ಹೇಳುತ್ತೇನೆ.

ಮೂ॥ ಪುರಾ ಕೈಲಾಸ ಶಿಖರೇ ನಾನಾರತ್ನ ವಿಭೂಷಿತೇ ॥
ಸಮಾಸೀನಂ ಮಹಾದೇವಂ ಪಾರ್ವತ್ಯಾ ಸಹಿತಂ ಶಿವಂ ॥ ೩ ॥
ಗಂಗಾಧರಂ ವಿರೂಪಾಕ್ಷಂ ಶ್ರೀಕಂಠ ಮಮಿತೌಜಸಂ ॥
ಪಪ್ರಚ್ಛ ಪ್ರಣತೋ ಭೂತ್ವಾ ಸ್ಕಂದಷ್ಷಟ್ಸ್ಥಲನಿರ್ಣಯಂ ॥ ೪ ॥

ಟೀ॥ ಕೇಳಿರೈ ಋಷಿಗಳಿರಾ ಪೂರ್ವದಲ್ಲಿ ಮುತ್ತು, ಕೆಂಪು ಮೊದಲಾದ ಅನೇಕ ರತ್ನಗಳಿಂದಲಂಕರಿಸಲ್ಪಟ್ಟ ಕೈಲಾಸಗಿರಿಯ ಶೃಂಗದಲ್ಲಿ ಕುಳಿತಿರುವವನಾಗಿಯೂ, ಪಾರ್ವತಿಯೊಡನೆ ಕೂಡಿದವನಾಗಿಯೂ, ದೇವತಾ ಸಾರ್ವಭೌಮನಾಗಿಯೂ, ಮಂಗಳ ಸ್ವರೂಪನಾಗಿಯೂ, ಜಟಾಮಕುಟದಲ್ಲಿ ಗಂಗೆಯನ್ನು ವಹಿಸಿದವನಾಗಿಯೂ, ಸೂರ್ಯ ಚಂದ್ರ ಅಗ್ನಿಗಳೆಂಬ ಮೂರು ಕಣ್ಣುಗಳುಳ್ಳವನಾಗಿಯೂ, ಹವಣಿಸುವಶಕ್ಯಾಗವ ತೇಜಸ್ಸುಳ್ಳವನಾಗಿಯೂ, ಕೊರಳಲ್ಲಿ ವಿಷವನ್ನು ಧರಿಸಿದವನಾಗಿಯೂ ಇರುವ ಶಿವನನ್ನು ಕುರಿತು ಷಣ್ಮುಖನು ನಮಸ್ಕರಿಸಿದವನಾಗಿ ಷಟ್ಸ್ಥಲ ಸಿದ್ಧಾಂತವನ್ನು ಬೆಸಗೊಂಡನು.

( ಶಿವನು ನಿರೂಪಿಸುತ್ತಾನೆ.)

ಮೂ॥ ವಕ್ಷ್ಯಾಮಿ ಸಂಗ್ರಹೇಣಾಹಂ ತವ ಷಟ್ಸ್ಥಲನಿರ್ಣಯಂ ।
ಸಾರಂ ಸಮಸ್ತ ಶಾಸ್ತ್ರೇಷು ರಹಸ್ಯಂ ಷಡಾನನ ॥೫॥

ಟೀ॥ ಎಲೈ ಷಣ್ಮುಖನೆ ಸಕಲ ಶಾಸ್ತ್ರಗಳಲ್ಲಿ ಸಾರಭೂತವಾಗಿಯೂ, ಗೋಪ್ಯವಾಗಿಯೂ ಇರುವ ಷಟ್ಸ್ಥಲ ಸಿದ್ಧಾಂತವನ್ನು ನಿನಗೆ ಸಂಕ್ಷೇಪವಾಗಿ ಹೇಳುತ್ತೇನೆ.

( ಸ್ಥಲಶಬ್ದ ನಿರ್ವಚನ. )

ಮೂ॥ ಸರ್ವೇಷಾಂ ಸ್ಥಾನಭೂತತ್ವಾ ಲ್ಲಯಭೂತತ್ವ ತಸ್ಸದಾ ।
ತತ್ವಾನಾಂ ಮಹದಾದೀನಾಂ ಸ್ಥಲಮಿತ್ಯಭಿಧೀಯತೆ ॥೬॥

ಟೀ॥ ಮಹತ್ತತ್ವವೊದಲಾದ ಸಮಸ್ತತತ್ವಗಳಿಗೆ ಆಶ್ರಯವಾಗಿರುವದರಿಂದಲೂ, ಆ ತತ್ವಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುವದರಿಂದಲೂ, ಯಾವಾಗಲೂಸ್ಥಲವೆಂದು ಹೇಳಲ್ಪಡುವದು. ಅಂದರೆ( ಸ್ಥ) ಎಂಬ ಶಬ್ದಕ್ಕೆ ಸ್ಥಾನವೆಂತಲೂ, (ಲ) ಎಂಬ ಶಬ್ದಕ್ಕೆ ಲಯವೆಂತಲೂ, ಅರ್ಥವುಂಟಾಗಿ ಸ್ಥಲಶಬ್ದವು ಪರವಸ್ತುವಾಚಕವೆಂದು ತಾತ್ಪರ್ಯ.

ಮೂ॥ ಸ್ಥೀಯತೆ ಲೀಯತೆಯಸ್ಮಿನ್ಮುಕ್ತಿಸ್ಸಂಸಾರಪದ್ಧತಿಃ ॥
ತದೆವಸ್ಥಲಮಿತ್ಯುಕ್ತಂ ಸ್ಥಲತತ್ವ ವಿಶಾರದೈಃ ॥ ೭ ॥

ಟೀ॥ ಶಿವರೂಪವಾದ ಯಾವ ಪರಬ್ರಹ್ಮದಲ್ಲಿ ಮೋಕ್ಷವಿರುತ್ತಿಹುದೋ ಸಂಸಾರಮಾರ್ಗವು ಅಡಗುತ್ತಿರುವದೋ ಅದೇ ಸ್ಥಲವೆಂದು ತತ್ವಜ್ಞರಿಂದ ಹೇಳಲ್ಪಡುವದು.

( ಸ್ಥಲಶಬ್ದಕ್ಕೆ ಮತ್ತೊಂದು ವಿಧವಾಗಿ ನಿರ್ವಚನವು )

ಮೂ॥ ಸ್ಥಾಣೌಸರ್ವಾಶ್ರಯೇನಂತೆ ಸಚ್ಚಿದಾನಂದರೂಪಿಣಿ ।
ಯಸ್ಮಿನ್ಬ್ರಹ್ಮಣಿಲೀಯತೆಪ್ರಪಂಚಸ್ತತ್ಸ್ಥಲಂಸ್ಮೃತಂ ॥೮॥

ಟೀ॥ ಸಮಸ್ತತತ್ವಂಗಳಿಗೆ ಆಧಾರವಾಗಿಯೂ, ಆದ್ಯಂತಶೂನ್ಯವಾಗಿಯೂ, ಸಚ್ಚಿದಾನಂದಸ್ವರೂಪವಾಗಿಯೂ, ತ್ರೈಲೋಕ್ಯಕ್ಕೆ ಮೂಲಸ್ತಂಭಾಯಮಾನವಾಗಿಯೂ, ಇರುವ ಯಾವ ಪರವಸ್ತುವಿನಲ್ಲಿ ಚರಾಚರಾತ್ಮಕವಾದೀ ಪ್ರಪಂಚವು ಅಡಗುವದೋ ಆ ಪರವಸ್ತುವೇ ಸ್ಥಲವೆಂದು ಹೇಳಲ್ಪಡುತ್ತಿಹುದು.

ಮೂ॥ ತದ್ಬ್ರಹ್ಮಸ್ಥಲಶಬ್ದೇನ ಸ್ವಶಕ್ತ್ಯಾ ಷಡ್ವಿಧಂಭವೆತ್ ।
ಮೊಕ್ಷಮಾರ್ಗೈಕಸೊಪಾನಂ ವೀರಮಾಹೇಶ್ವರಾದೃತಂ ॥ ೯ ॥

ಟೀ॥ ಶಿವಾತ್ಮಕವಾದ ಪರಬ್ರಹ್ಮವು ತನ್ನ ಜ್ಞಾನಶಕ್ತಿಯಿಂದ ವೀರಮಾಹೇಶ್ವರರುಗಳಿಂದಾದರಿಸಲ್ಪಟ್ಟ ಮತ್ತು ಮೊಕ್ಷಮಾರ್ಗಕ್ಕೆ ಮುಖ್ಯಸೊಪಾನಭೂತವಾದ ಷಟ್ಸ್ಥಲಸ್ವರೂಪವನ್ನೈದಿತು.

ಮೂ॥ ತೇಷ್ಯಾನಾಮಾನಿವಕ್ಷ್ಯಾಮಿ ಸ್ವರೂಪಂಚಸಮಾಸತಃ ।
ಯದ್ಜ್ಞಾನೇನನರೋಮುಕ್ತಿಮನಾಯಾಸೇನಗಚ್ಛತಿ ॥ ೧೦ ॥

ಟೀ ॥ ಆ ಷಟ್ಸ್ಥಲದ ಹೆಸರುಗಳನ್ನೂ ಅವುಗಳಸ್ವರೂಪವನ್ನೂ ನಿನಗೆಸಂಕ್ಷೇಪವಾಗಿ ನಿರೂಪಿಸಿರುತ್ತೇನೆ. ಮನುಷ್ಯನು ಷಟ್ಸ್ಥಲಜ್ಞಾನದಿಂದ ಆಯಾಸವಿಲ್ಲದೆ ಮೋಕ್ಷವನ್ನು ಪಡೆಯುವನು.

ಮೂ॥ ಭಕ್ತೋಮಾಹೇಶ್ವರಶ್ಚೈವ ಪ್ರಸಾದೀಪ್ರಾಣಲಿಂಗಿಕಃ ।
ಶರಣಶ್ಚೈವಲಿಂಗೈಕ್ಯ ಷ್ಷಟ್ಸ್ಥಲಂಚಮಮಪ್ರಿಯಂ ॥ ೧೧ ॥

ಟೀ ॥ ಭಕ್ತಸ್ಥಲವು, ಮಾಹೇಶ್ವರಸ್ಥಲವು, ಪ್ರಸಾದಿಸ್ಥಲವು, ಪ್ರಾಣಲಿಂಗಸ್ಥಲವು, ಶರಣಸ್ಥಲವು, ಐಕ್ಯಸ್ಥಲವು, ಈ ಷಟ್ಸ್ಥಲವು ನನಗೆ ಬಹುಪ್ರೀತಿಕರವಾದಂಥಾದ್ದು.

(ಭಕ್ತಸ್ಥಲದ ಲಕ್ಷಣಮಂ ಪೇಳುತ್ತಿರ್ದಪಂ.)

ಮೂ॥ ಸದಾಚಾರಶ್ಶಿವೇಭಕ್ತಿರ್ಲಿಂಗೇಜಂಗಮ ಏಕಧೀಃ ।
ಲಾಂಛನೇ ಶರಣೇಭಕ್ತಿರ್ಭಕ್ತಸ್ಥಲ ಮನುತ್ತಮಂ ॥ ೧೨ ॥

ಸದಾಚಾರವೂ, ಶಿವನಲ್ಲಿ ಭಕ್ತಿಯೂ, ಗುರು, ಲಿಂಗಜಂಗಮಗಳಲ್ಲಿ ಅಭೇದಬುದ್ಧಿಯೂ, ವಿಭೂತಿ ರುದ್ರಾಕ್ಷಶಿವಲಿಂಗಧಾರಣ ಮೊದಲಾದ ಶಿವಲಾಂಛನವುಳ್ಳ ಸಚ್ಚರಿತ್ರರಾದ ಶಿವಶರಣರಲ್ಲಿ ಭಕ್ತಿಯೂ, ಉತ್ತಮವಾದ ಭಕ್ತಲಕ್ಷಣವು.

ಮೂ॥ ಭೂತಿರುದ್ರಾಕ್ಷಸಂಯುಕ್ತೋ ಲಿಂಗಧಾರೀ ಸದಾಶುಚಿಃ ।
ಪಂಚಾಕ್ಷರ ಜಪೋದ್ಯೋಗೀ ಶಿವಭಕ್ತ ಇತಿಸ್ಮೃತಃ ॥ ೧೩ ॥

ಟೀ ॥ ಶ್ರೀಮದ್ವಿಭೂತಿ ರುದ್ರಾಕ್ಷಿಗಳೊಡನೆ ಸಾರ್ವಕಾಲದಲ್ಲಿ ನಿಮಿಷವಾದರೂ ವಿಯೋಗವಿಲ್ಲದೆ ಶಿವಲಿಂಗಧಾರಿಯಾಗಿ ಇದರಿಂದಲೇ ಯಲ್ಲಾಗಳೂ ಪವಿತ್ರನಾಗಿ ಶ್ರವಣಸಹಿತವಾದ ಪಂಚಾಕ್ಷರೀಮಂತ್ರಜಪ ಜಪದಲ್ಲುದ್ಯೋಗವುಳ್ಳವನೇ ಶಿವಭಕ್ತನು.

ಮೂ॥ ಶ್ರವಣಂಕೀರ್ತನಂಶಂಭೋ ಸ್ಸ್ಮರಣಂಪಾದಸೇವನಂ ।
ಅರ್ಚನಂ ವಂದನಂದಾಸ್ಯಂ ಸಖ್ಯಮಾತ್ಮನಿವೇದನಂ ॥ ೧೪ ॥

ಏವಂ ನವವಿಧಾಭಕ್ತಿಃ ಪ್ರೋಕ್ತಾ ದೇವೇನ ಶಂಭುನಾ ।

ದುರ್ಲಭಾ ಪಾಪಿನಾಂ ಲೋಕೇ ಸುಲಭಾ ಪುಣ್ಯಕರ್ಮಣಾಂ । ೧೪ ।

ಟೀ ॥ ಅನಂತರ ಭಕ್ತಿಭೇದವಂ ನಿರೂಪಿಸುವಲ್ಲಿ ಶಿವಕಥಾ ಶ್ರವಣವು ಶಿವಸ್ತುತಿಯು ಶಿವಧ್ಯಾನವು ಪಾದಸೇವೆಯು ನಮಸ್ಕಾರವು ಭೃತ್ಯಭಾವವು ಮಿತ್ರತ್ವವು ಸ್ವಾತ್ಮಸಮರ್ಪಣವು ಈ ಪ್ರಕಾರದಿಂ ಭಕ್ತಿಯು ನವವಿಧವೆಂದು ಮಹಾದೇವನಿಂ ನಿರೂಪಿಸಲ್ಪಟ್ಟಿತು. ಈ ಭಕ್ತಿಯು ಲೋಕದೊಳ್ ಪಾಪಿಗಳಾದವರಿಗೆ ಪ್ರಾಪ್ತವಾಗುವದಿಲ್ಲವು ; ಸುಕೃತಿಗಳಿಗಾದರೋ ಸುಲಭವು.

ಮೂ॥ ತಸ್ಯೋಪಹಸ್ತಾಂಬುಜಪೀಠಮಧ್ಯೇ

ನಿಧಾಯ ಲಿಂಗಂ ಪರಮಾತ್ಮಚಿಹ್ನಂ ।

ಸಂಪೂಜಯೇದ್ಬಾಹ್ಯವಿಧಿಯೋಪಚಾರೈ-

ರ್ನಿರಸ್ತಬಾಹ್ಯಾಂತರಭೇದಭಿನ್ನೈಃ ॥ ೧೫ ।

ಟೀ ॥ ಈ ಪ್ರಕಾರವಾದ ಶಿವಭಕ್ತಿಯು ಬಾಹ್ಯವೆಂದು ಅಭ್ಯಂತರವೆಂದು ಎರಡುವಿಧವು ಬಾಹ್ಯವೆಂಬುವದು ಮನುಷ್ಯನು ಜಗತ್ಸೃಷ್ಟಿ ಸ್ಥಿತಿಲಯಗಳಿಗೆ ಕರ್ತೃತ್ವವೆಂಬ ಪರಮಾತ್ಮಲಕ್ಷಣವುಳ್ಳ ಅಥವಾ ಚಿಜ್ಜ್ಯೋತಿಸ್ವರೂಪವಾದ ಸ್ವಾತ್ಮಾಭೇದವೆಂಬ ಚಿಹ್ನೆವುಳ್ಳ ಪೂರ್ವೋಕ್ತ ಕಾಂತಮಹಿಮೆಯಂ ಪಡೆದ ಲಿಂಗವನ್ನು ಕರಕಮಲಪೀಠಮಧ್ಯದಲ್ಲಿರಿಸಿ ವಿಷಯಾಂತರ ಸಂಪರ್ಕದಿಂ ಶೂನ್ಯನಾಗಿ ತದ್ವಿಷಯದಲ್ಲಿ ಮುಖ್ಯಾಸಕ್ತಿಯಂ ಪಡೆದ ತನ್ನ ಬುದ್ಧಿಯಿಂದ ನಿರತಿಶಯ ಮಾಹಾತ್ಮ್ಯಧ್ಯಾನದಿಂದಲೂ ಆವಾಹನಾರ್ಚನಾದಿ ಬಾಹ್ಯೋಪಚಾರಂಗಳಿಂದಲೂ ಪೂಜಿಸುವದೇ ಬಾಹ್ಯಭಕ್ತಿಯು.

ಮೂ॥ ಲಿಂಗೇ ಪ್ರಾಣಂ ಸಮಾಧಾಯ ಪ್ರಾಣೇ ಲಿಂಗಂ ತು ಶಾಂಭವಂ ।

ಸ್ವಸ್ಥಂ ಮನಸ್ತಥಾ ಕೃತ್ವಾ ನ ಕಿಂಚಿಚ್ಚಿಂತಯೇದ್ಯದಿ । ೧೬ ।

ಸಾಭ್ಯಂತರಾ ಭಕ್ತಿರಿತಿ ಪ್ರೋಚ್ಯತೇ ಶಿವಯೋಗಿಭಿಃ ।

ಸಾ ಯಸ್ಮಿನ್ವರ್ತತೇ ತಸ್ಯ ಜೀವನಂ ಭ್ರಷ್ಟಬೀಜವತ್ । ೧೭ ।

ಟೀ ॥ ಶಿವಲಿಂಗದಲ್ಲಿ ಪ್ರಾಣವನಿರಿಸಿ ಜೀವಕಲಾರೂಪವಾದ ಪ್ರಾಣದಲ್ಲಿ ಶಿವಕಲಾರೂಪಲಿಂಗವನ್ನಿರಿಸಿ ಮನವಂ ಸ್ವಸ್ಥವಾಗಿಟ್ಟು ಯತ್ಕಿಂಚಿತ್ಕಾಲಾನು ಮತ್ತೇನನ್ನೂ ಚಿಂತಿಸದೇ ಯಿದ್ದರೆ ಲಿಂಗಪ್ರಾಣಸಮರಸ ರೂ

ಪವಾದ ಆ ಭಂತಿಯು ಅಭ್ಯಂತರ ಭಕ್ತಿಯೆಂದು ಶಿವಯೋಗಿಗಳಿಂ ಹೇ
ಳಲ್ಪಡುತ್ತಿರುವದು. ಅಂಥಾ ಭಕ್ತಿಯು ಯಾವನಲ್ಲಿರುವದೋ ಅವನ
ಜೀವನವು ಹುರಿದ ಬೀಜದಹಾಗೆ ಭೋಗಮಾತ್ರಕ್ಕೆ ಯೋಗ್ಯವಲ್ಲದೆ
ಮರಳಿ ಉತ್ಪತ್ತಿಗೆ ಕಾರಣವಲ್ಲ.

ಮೂ॥ ಬಹುನಾತ್ರ ಕಿಮುಕ್ತೇನ ಗುಹ್ಯಾದ್ಗುಹ್ಯತರಾಪರಾ ।
ಶಿವಭಕ್ತಿರ್ನಸಂದೇಹ ಸ್ತಯಾಮುಕ್ತೋ ವಿಮುಚ್ಯತೇ । ೧೯ ।

ಟೀ॥ ಬಹುಭಾಷಣೆಯಿಂದೇನುಪ್ರಯೋಜನವು ಈ ಹೇಳಲ್ಪ
ಟ್ಟ ಶಿವಭಕ್ತಿಯೆಂಬುವದು ಬಹುಗೋಪ್ಯವು ತಾದೃಶಭಕ್ತಿಯುಳ್ಳವನು
ಮುಕ್ತನೇಸರಿ ಈ ಅರ್ಥದಲ್ಲಿ ಸಂದೇಹವಿಲ್ಲ.

ಮೂ॥ ಪ್ರಸಾದಾದೇವಸಾಭಕ್ತಿಃ ಪ್ರಸಾದೊ ಭಕ್ತಿಸಂಭವಃ ।
ಯಥೈವಾಂಕುರತೊ ಬೀಜಂ ಬೀಜತೊವಾ ಯಥಾಂಕುರಃ ।೨೦।

ಟೀ॥ ಅನಂತರ ಮೆತಾದೃಶವಾದ ಭಕ್ತಿಯು ಯಾತರಿದುಂಟಾ
ಗುವದೆಂದರೆ, ಶಿವಪ್ರಸಾದದಿಂದಲೇ ತಾದೃಶಭಕ್ತಿಉಂಟಾಗುವದು, ಆ
ಭಕ್ತಿಯಿಂದಲೇ ಪ್ರಸಾದವುಂಟಾಗುವದು, ಹಾಗಾದರೆ ಅನ್ಯೋನ್ಯಾ
ಶ್ರಯದೋಷವಲ್ಲವೇ ಎನೆ ಆ ದೋಷವು ಜ್ಞಪ್ತಿಯಲ್ಲಿಯೇ ಸರಿ; ಬೀಜ
ದಿಂದಂಕುರಮುಂ ಕುರದಿಂಬೀಜಂ ಪುಟ್ಟುವಂತೆ ಬೀಜಾಂಕುರನ್ಯಾಯದಿಂ
ದುತ್ಪತ್ತಿಯಲ್ಲಿ ವಿರೋಧವಿಲ್ಲ.

ಮೂ॥ ಪ್ರಸಾದಪೂರ್ವಿಕಾಯೆಯಂ ಭಕ್ತಿರ್ಮುಕ್ತಿ ವಿಧಾಯಿನೀ ।
ನೈವಸಾಶಕ್ಯತೆಪ್ರಾಪ್ತುಂ ನರೈರೇಕೆನಜನ್ಮನಾ । ೨೧ ।

ಟೀ॥ ಹಾಗಾದರೀಪ್ರಕಾರವಾದ ಭಕ್ತಿಯು ಒಂದೇ ಜನ್ಮದಲ್ಲಿ
ದೊರಕುವುದೇ ಎಂದರೆ ಶಿವನಪ್ರಸಾದದಿಂದುಂಟಾಗಿ ಮುಕ್ತಿಯನೀವ
ದಾವ ಈ ಭಕ್ತಿಯುಂಟೋ ಆ ಭಕ್ತಿಯು ನರರಿಂದೊಂದೇ ಜನ್ಮದಲ್ಲಿ
ಪಡೆಯಲು ಶಕ್ಯವಲ್ಲ.

ಮೂ॥ ಅನೇಕಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಂ ।
ಪ್ರಬುದ್ಧಾನಾಂ ವಿರಕ್ತಾನಾಂ ಪ್ರಸೀದತಿ ಮಹೇಶ್ವರಃ ।೨೨।

ಟೀ॥ ಹಾಗಾದರೆ, ತಾದೃಶಭಕ್ತಿಯು ಎಷ್ಟು ಜನ್ಮದಲ್ಲಿ ದೊರ

ಕೊಡುವದೆಂದರೆ, ಬಹುಜನ್ಮಂಗಳಿಂದಲೂ ಮಾಡಿದ ಶಿವಧ್ಯಾನಪೂಜಾದಿ ಸುಕೃತದಿಂ ಶುದ್ಧಾಂತಃಕರಣರಾಗಿ ಶ್ರುತಿ ಸ್ಮೃತ್ಯುಕ್ತನಿತ್ಯನೈಮಿತ್ತಿಕ ಕರ್ಮನಿಷ್ಠರಾಗಿ ಕಾಮ್ಯಕರ್ಮಂಗಳಲ್ಲಿ ನಿಸ್ಪೃಹರಾದ ಸುಜ್ಞಾನಿಗಳಿಗೆ ಶಿವನು ಪ್ರಸನ್ನನಹನು, ಆತನ ಪ್ರಸನ್ನತೆಯಿಂ ಶಿವಭಕ್ತಿಯುಂಟಾಗುವದು.

ಮೂ॥ ಪ್ರಸನ್ನೇಸತಿಮುಕ್ತೋಥಮುಕ್ತಶ್ಶಿವಸಮೋಭವೇತ್ ।
ಅಲ್ಪಭಕ್ತ್ಯಾಪಿಯೋಮರ್ತ್ಯಸ್ತಸ್ಯಜನ್ಮತ್ರಯಾತ್ಪರಂ ॥ ೨೭ ॥

ಟೀ॥ ಆದರೆ ಬಹುಜನ್ಮಗಳಿಂ ದೊರಕೊಂಬುವ ಶಿವಭಕ್ತಿಯಿಂದ ಎಷ್ಟು ಜನ್ಮಕ್ಕೆ ಮುಕ್ತಿಯಹುದು ಆ ಮುಕ್ತಿಯು ಎಂಥಾದ್ದೆಂದರೆ, ಶಿವನು ಪ್ರಸನ್ನನಾಗಲಾಗಿ ಭಕ್ತನು ಮುಕ್ತನಹನು ಮುಕ್ತನು ಶಿವಸಮಾನನಹನು. ಯಾವ ಮನುಷ್ಯನು ಅಲ್ಪಭಕ್ತಿಯಿಂ ಕೂಡಿರುವನೋ ಅವನು ಜನ್ಮತ್ರಯದನಂತರ ಮುಕ್ತನಹನು, ಇಲ್ಲಿ ಶಿವಸಮಾನನೆಂದರೆ ಅಭೇದವೆಂದು ತಿಳಿಯಲಾಗದು, ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೆ ಎಂಬ ಶ್ರುತಿಯುಂಟಾಗಿ ಶಿವಸಮಾನನಾಗುವದಿಲ್ಲ. ಶಿವಸ್ವರೂಪೋ ಭವತಿ ಶಿವಸ್ವರೂಪೋಭವತಿ ಎಂಬ ವೃದ್ಧಜಾಬಾಲ ಶ್ರುತಿಯತ್ತಣಿಂ ಶಿವಸ್ವರೂಪನಾಗುವನೆಂದು ಸಿದ್ಧಾಂತ. ಏಕೇನಜನ್ಮನಾಮುಕ್ತಿರ್ವೀರಶೈವಾನಾಂತು ಮಹೇಶ್ವರಿ । ಅನ್ಯೇಷಾಮಪಿ ಶೈವಾನಾಂ ಮುಕ್ತಿರ್ಜನ್ಮತ್ರಯಾತ್ಪರಂ । ಹೀಗೆಂಬ ವೀರಾಗಮವಚನದತ್ತಣಿಂ ವೀರಶೈವರಿಗೆ ಒಂದೇಜನ್ಮದಲ್ಲಿ ಮುಕ್ತಿಯಹುದರಿಂದಿದೇ ಚರಮಶರೀರವೆಂದೆನಿಸಿಕೊಂಬುದು ಅಲ್ಪಭಕ್ತಿಯುಳ್ಳ ಇತರ ಶೈವರಿಗೆ ಜನ್ಮತ್ರಯಾನಂತರ ಮುಕ್ತಿಯಹುದು.

ಮೂ॥ ನಯೋನಿಯಂತ್ರಪೀಡಾವೈ ಭವೇನ್ನೈವಾತ್ರ ಸಂಶಯಃ ।
ಸಾಂಗಾನುಗಾಚಯಾಸೇವಾ ಸಾಭಕ್ತಿರಿತಿ ಕಥ್ಯತೆ ॥ ೨೮ ॥

ಟೀ॥ ಅಲ್ಪಭಕ್ತಿಯುಂದರೇನು? ಮುಕ್ತಗೆ ಪುನರಾವೃತ್ತಿಯುಂಟೇ? ಎಂದರೆ॥ ॥ ನಚಪುನರಾವರ್ತತೆ ನಚಪುನರಾವರ್ತತೆ ಯೆಂಬ ಶ್ರುತಿಯುಂಟಾಗಿ ಯೋನಿಮುಖೋತ್ಪತ್ತಿಯಿಲ್ಲ, ಪುನರಾವೃತ್ತಿಯೂ ಇಲ್ಲವೆಂಬಲ್ಲಿ ಸಂಶಯವಿಲ್ಲಂ. ಹೇಳಲ್ಪಟ್ಟ ಲಿಂಗಧಾರಣ ವಿಶಿಷ್ಟಮಾದ ನವವಿಧ ಭಕ್ತಿಯುಳ್ಳ ಸೇವೆಯೇ ಪೂರ್ಣಭಕ್ತಿಯೆನಿಸಿಕೊಂಬುದು, ಕಿಂಚಿನ್ನ್ಯೂನವಾದುದು ಭಕ್ತಿಯಲ್ಲ.

ಮೂ॥ ಸಾಪುನರ್ಭಿದ್ಯತೇತ್ರೇಧಾ ಮನೋವಾಕ್ಕಾಯಸಾಧನೈಃ ।
ಶಿವರೂಪಾದಿ ಚಿಂತಾಯಾ ಸಾಸೇವಾ ಮಾನಸೀಸ್ಮೃತಾ ॥
ಜಪಾದಿರ್ವಾಚಿಕೀಸೇವಾ ಕರ್ಮಪೂಜಾತಕಾಯಿಕೀ ॥ ೨೫ ॥

ಟೀ ॥ ಯದ್ಧಿ ಮನಸಾಧ್ಯಾಯತಿ ತದ್ವಾಚಾವದತಿ ತತ್ಕರ್ಮಣಾ ಕರೋತಿ. ಎಂಬ ಶ್ರುತಿಯತ್ತಣಿಂ ಆ ಸಾಂಗವಾದ ಭಕ್ತಿಯು ಮನೋವಾಕ್ಕಾಯ ರೂಪವಾದ ಕಾರಣಗಳಿಂ ಮೂರು ತೆರನಾಗಿರುವದು, ಅಲ್ಲಿ ಶಿವಲಿಂಗಾದಿ ಸ್ವರೂಪಚಿಂತನವೇ ಮಾನಸಭಕ್ತಿಯೆನಿಸುವುದು, ಶಿವ ಮಂತ್ರ ಜಪಸ್ತುತಿ ಮೊದಲಾದುವೇ ವಾಚಕಭಕ್ತಿಯೆನಿಸುವದು, ಕಾಯ ದಿಂ ಮಾಡುವಂಥಾ ಶಿವಲಿಂಗಪೂಜೆಯೇ ಕಾಯಕಭಕ್ತಿಯೆನಿಸುವುದು.

ಮೂ॥ ಬಾಹ್ಯಮಾಭ್ಯಂತರಂಚೈವ ಬಾಹ್ಯಾಭ್ಯಂತರ ಮೇವವಾ ।
ಮನೋವಾಕ್ಕಾಯ ಭೇದ್ಯಶ್ಚ ತ್ರಿಧಾತದ್ಭಜನಂ ವಿದುಃ ॥ ೨೬ ॥

ಟೀ ॥ ಬಳಿಕೀ ಪ್ರಕಾರವಾದ ತ್ರಿವಿಧಸೇವೆಯೇ ಬಾಹ್ಯಾದಿ ಭೇದದಿಂ ತ್ರಿವಿಧವಾಗಿರುವದೆಂತೆನೆ, ವೇಧಾಮನುಕ್ರಿಯೆಯೆಂಬ ದೀಕ್ಷಾ ತ್ರಯದೊಡನೆ ಕೂಡಿದ ಮನೋವಾಕ್ಕಾಯ ಭೇದವುಳ್ಳ ಪೂರ್ವೋಕ್ತ ಭಜನೆಯು ಬಾಹ್ಯವೆಂದು ಅಂತರವೆಂದು ಬಾಹ್ಯಾಭ್ಯಂತರವೆಂದು ಮೂರುಪ್ರಕಾರವಾಗಿಹುದೆಂದಭಿಜ್ಞರು ತಿಳಿಯುವರು.

ಮೂ॥ ಮನೋಮಹೇಶಧ್ಯಾನಾಢ್ಯಂ ನಾನ್ಯದಾಧ್ಯಾನರತಂ ಮನಃ ।
ಶಿವನಾಮರತಾವಾಣೀ ವಾಙ್ಮತಾಚೈವನೇತರಾ ॥
ಶಿವಲಾಂಛನಧಾರ್ಯೈವಪುರ್ನಾನ್ಯಾಂಕಿತಂವಪುಃ ॥ ೨೭ ॥

ಟೀ ॥ ಬಳಿಕವರಸ್ವರೂಪವೆಂಥಾದ್ದೆಂಬಲ್ಲಿ ಮಾನಸಾದಿಸ್ವರೂಪ ಪೂರ್ವಕವಾಗಿ ನಿರೂಪಿಸುವೆನೆಂತೆನೆ, ಶಾಸ್ತ್ರೋಕ್ತವಾದ ಭಸ್ಮತ್ರಿ ಪುಂಡ್ರರುದ್ರಾಕ್ಷಾಭರಣರೂಪವಾದ ಶಿವಚಿಹ್ನೆಗಳಿಂದಂಕಿತವಾಗಿ ಶಿವ ಲಿಂಗಧಾರಣ ಪೂರ್ವಕವಾಗಿ ತತ್ಪೂಜಾಸಕ್ತವಾದುದೇ ಕಾಯವು, ಅನ್ಯಲಾಛನಾನ್ಯಪೂಜಾಸಕ್ತವಾದುದು ಕಾಯವಲ್ಲ. ಶಿವನಾಮದಲ್ಲಿತ ತ್ಪರ ಮಾದುವೇವಾಕ್ಕು, ಅನ್ಯನಾಮ ಯುಕ್ತವಾದುದು ವಾಕ್ಕಲ್ಲ. ಶಿವ ಧ್ಯಾನದಲ್ಲಿ ಯುಕ್ತವಾದುದೇ ಮನಸ್ಸು, ಮತ್ತೊಂದುಧ್ಯಾನದಿಂಕೂ ಡಿದುದು ಮನಸ್ಸಲ್ಲವೆಂಬುದೇ ನಿಶ್ಚಯಮಕ್ಕುಂ.

ಮೂ॥ ಅನ್ಯಾತ್ಮವಿದಿತಂ ಬಾಹ್ಯಂ ಶಂಭೋರಭ್ಯರ್ಚನಾದಿಕಂ ।
ತದೇವತುಸ್ವಸಂವೇದ್ಯ ಮಾಭ್ಯಂತರಮುದಾಹೃತಂ ॥
ಮನೋಮಾಹೇಶಪ್ರವಣಂ ಬಾಹ್ಯಾಭ್ಯಂತರಮುಚ್ಯತೇ ॥ ೨೮ ॥

ಟೀ॥ ಬಳಿಕ ಬಾಹ್ಯಾದಿಗಳದೆಂತೆನೆ, ಪರದೃಷ್ಟಿಗೋಚರಮಾದಶಿವಪೂಜಾದಿ ಕರ್ಮವು ಬಾಹ್ಯವು, ಅದೇ ಪರದೃಷ್ಟಿಗೋಚರವಾಗದಂತೆ ಸ್ವಮಾತ್ರಗೋಚರಮಾದುದು ಅಭ್ಯಂತರವು, ಶಿವಲಿಂಗದಲ್ಲಿ ಆಸಕ್ತಿಯುಳ್ಳ ಮನಸ್ಸು ಸಾಕ್ಷಿಮಾತ್ರದಿಂದ ಉಭಯತ್ರ ವ್ಯಾಪ್ತಮಾದಕಾರಣದಿಂ ಬಾಹ್ಯಾಭ್ಯಂತರವು.

ಮೂ॥ ಪಂಚಧಾಕಥ್ಯತೇಸದ್ಭಿಸ್ಸದೇವಭಜನಂಪುನಃ ।
ತಪಃಕರ್ಮಜಪೋಧ್ಯಾನಂ ಜ್ಞಾನಂಚೇತ್ಯನುಪೂರ್ವಕಂ ॥ ೨೯ ॥

ಟೀ॥ ಬಳಿಕೀಪ್ರಕಾರವಾದ ಮಾನಸಾದಿ ಬಾಹ್ಯಾದಿರೂಪವಾದತ್ರಿವಿಧಭಜನವೇ ತಪಸ್ಸೆಂದು, ಕರ್ಮವೆಂದು, ಜಪವೆಂದು, ಧ್ಯಾನವೆಂದು, ಜ್ಞಾನವೆಂದು, ಐದುಪ್ರಕಾರವಾಗಿಹುದು.

ಮೂ॥ ಶಿವಾರ್ಥೇದೇಹಸಂಶೋಷಸ್ತಪಃಕೃಚ್ಛ್ರಾದಿನೋಮತಂ ।
ಶಿವಾರ್ಚಾಕರ್ಮವಿಜ್ಞೇಯಂ ಬಾಹ್ಯಂಯಾಗಾದಿನೋಚ್ಯತೇ ।
ಜಪಃಪಂಚಾಕ್ಷರಾಭ್ಯಾಸಃ ಪ್ರಣವಾಭ್ಯಾಸಏವವಾ ।
ರುದ್ರಾಧ್ಯಾಯಾಧಿಕಾಭ್ಯಾಸೋ ನವೇದಾಧ್ಯಯನಾದಿಕಂ ।
ಧ್ಯಾನಂಶಿವಸ್ಯರೂಪಾದಿ ಚಿಂತಾನಾತ್ಮಾದಿಚಿಂತನಂ ।
ಮಮಾಗಮಾರ್ಥವಿಜ್ಞಾನಂಜ್ಞಾನಂನಾನ್ಯಾರ್ಥವೇದನಂ ।
ಇತಿಪಂಚಪ್ರಕಾರೋಯಂ ಶಿವಯಜ್ಞಃಪ್ರಕೀರ್ತಿತಃ ॥ ೩೦ ॥

ಟೀ॥ ಬಳಿಕಿವರ ಸ್ವರೂಪವೆಂತೆನೆ, ಶಿವಂಗೋಸ್ಕರವು, ಶಿವಪೂಜಾರ್ಥವಾಗಿ ಸಾಮಗ್ರೀ ಸಂಪಾದಿಸುವಲ್ಲಿಯೂ ಶರೀರವಂ ಶೋಷಿಸೋಣವು ಬಳಲಿಸೋಣವು ಯಾವದುಂಟೋ ಅದೇ ತಪಸ್ಸು, ಕೃಛ್ರಚಾಂದ್ರಾಯಣಾದಿಗಳಿಂ ಶರೀರವಂ ಶೋಷಿಸುವದು ತಪಸ್ಸಲ್ಲವು, ಶಿವಲಿಂಗಪೂಜೆಯೇ ಕರ್ಮವೆಂದು ತಿಳಿಯಲೂ ಯೋಗ್ಯವು, ಯಾಕೆಂದರೆ ತತ್ಫಲವು ಶಾಶ್ವತಮಾದದ್ದು; ತದ್ವ್ಯತಿರಿಕ್ತಮಾದ ಬಹುವಿತ್ತವ್ಯಯಾಯಾಸದಿಂ ಸಾಧ್ಯವಾದ ಜ್ಯೋತಿಷ್ಟೋಮಾದಿಯಾಗಂಗಳು ಕರ್ಮವೆಂದು ಹೇಳಲ್ಪಡವು,

ಮಾಕಂದರೆತತ್ಫಲವು ನಶ್ವರವಾದದ್ದು. ತ್ರೈಗುಣ್ಯವಿಷಯಾವೇದಾನಿ
ಸ್ತ್ರೈಗುಣ್ಯೋಭವಾರ್ಜುನ, ಹೀಗೆಂದು ಕೃಷ್ಣನು ಹೇಳಿರುವಕಾರಣದಿಂ
ಸಾಙ್ಗವಾದ ವೇದಾಧ್ಯಯನಮೊದಲಾದದ್ದು ಜಪವಲ್ಲವು, ಮತ್ತಾವುದೆನೆ
ಪಂಚಾಕ್ಷರೀಮಂತ್ರಾವೃತ್ತಿಯು, ಪ್ರಣವಮಂತ್ರಾವೃತ್ತಿಯು, ಶ್ರೀರು
ದ್ರಾಧ್ಯಾಯವು, ಶಿವಸಿದ್ಧಾಂತಮಂ ಪೇಳುವ ಅಥರ್ವಶಿರಶ್ಶಿಖಾದ್ಯುಪನಿಷ
ತ್ತುಗಳ ಪಾರಾಯಣವು ತತ್ತತ್ಕರ್ಮೋಚಿತವಾದ ಮಂತ್ರಂಗಳಪಠನವು
ಜಪವೆನಿಸುವದು. ಪರಿಮಿತಶರೀರೇಂದ್ರಿಯಾದ್ಯುಪಾಧಿವಿಷಯವಾದ ತನ್ನ
ಸ್ವರೂಪಚಿಂತನವು ಧ್ಯಾನವಲ್ಲವು ಮತ್ತಾವುದೆನೆ, ಶಿವಸ್ವರೂಪವಾದ ಶಿ
ವಲಿಂಗಚಿಂತೆ ಚಂದ್ರಶೇಖರತ್ವಾದಿ ವಿಶಿಷ್ಟಮೂರ್ತಿಚಿಂತೆಯೇಧ್ಯಾನವು.
ಸಾಂಖ್ಯಾದ್ಯನ್ಯಶಾಸ್ತ್ರಾರ್ಥಜ್ಞಾನವು ಜ್ಞಾನವಲ್ಲವು, ಮತ್ತಾವುದೆನೆ,
ಶಿವಾಗಮಾರ್ಥವಾದ ಸ್ವಸಿದ್ಧಾಂತ ಪ್ರತಿಪಾದಕ ಶಾಸ್ತ್ರಾರ್ಥಜ್ಞಾನವೆ
ಜ್ಞಾನವು, ಈ ಪ್ರಕಾರವಾದ ಕಾಯವಾಙ್ಮಾನಸ ಪೂಜಾರೂಪವಾದ
ತಪವು, ಕರ್ಮವು, ಜಪವು, ಧ್ಯಾನವು, ಜ್ಞಾನವು ಯಂಬಿವೈದು
ಶಿವಜ್ಞವೆನಿಸಿಕೊಂಬುದು.

ಮೂ॥ ಅನೇನಪಂಚಯಜ್ಞೇನ ಯಃಪೂಜಯತಿಶಂಕರಂ ।
ಭಕ್ತ್ಯಾಪರಮಯಾಯುಕ್ತಸ್ಸವೈಭಕ್ತ ಇತೀರಿತಃ ॥ ೨೦ ॥

ಟೀ॥ ಅನಂತರ ಈ ಪ್ರಕಾರವಾದ ಪಂಚಯಜ್ಞಂಗಳಿಂದಾವಾ
ತನುಉತ್ಕೃಷ್ಟವಾದ ಭಕ್ತಿಯಿಂ ಕೂಡಿದವನಾಗಿ ಶಿವನಂ ಪೂಜಿಸುತ್ತಿಹ
ನೋಆತನು ಶಿವಭಕ್ತನೆಂದು ಹೇಳಲ್ಪಡುವನು.

ಮೂ॥ ಪೂಜನಾಚ್ಛಿವಭಕ್ತಸ್ಯ ಪುಣ್ಯಾಗತಿರವಾಪ್ಯತೇ ।
ಅಪಮಾನಾನ್ಮಹಾಘೋರೋ ನರಕೋನಾತ್ರಸಂಶಯಃ ॥ ೨೧ ॥

ಟೀ॥ ಅನಂತರ ಈ ಪ್ರಕಾರವಾದ ಶಿವಭಕ್ತನಂ ಪೂಜಿಸುವದ
ರಿಂ ಸದ್ಗತಿಯು ದೊರಕುವದು. ಆತಂಗೆ ಮಾಡಿದವಮಾನದಿಂ ಭಯಂಕರ
ವಾದ ನರಕಪ್ರಾಪ್ತಿಯಹುದು ಈ ಅರ್ಥದಲ್ಲಿ ಸಂದೇಹವಿಲ್ಲವು.

ಮೂ॥ ಶಿವಭಕ್ತೋಮಹಾತೇಜಾಶ್ಶಿವಭಕ್ತಿಪರಾಙ್ಮುಖಾನ್ ।
ನಸ್ಪೃಶೇನ್ನೈವವೀಕ್ಷೇತನತ್ಯೈಸ್ಸಹವಸೇತ್ಕ್ವಚಿತ್ ॥ ೨೨ ॥

ಟೀ। ಶಿವಭಕ್ತನು ಮಹಾತೇಜಸ್ಸುಳ್ಳವನಾದಕಾರಣದಿಂ ಶಿವ ಭಕ್ತರಲ್ಲದವರ ದರ್ಶನ, ಸ್ಪರ್ಶನ, ಸಹವಾಸವನ್ನೊಂದು ವೇಳೆಯೂ ಮಾಡಲಾಗದು. ಹ್ಯಾಗಾದರೂ ಮಾಡಿದನಾದೊಡೆ ತೇಜೋಹಾನಿಯಪ್ಪುದು.

ಮೂ॥ ಸ್ವಮಾರ್ಗಾಚಾರವಿಮುಖೈರ್ಭವಿಭಿಃ ಪ್ರಾಕೃತಾತ್ಮಭಿಃ ।
ಪ್ರೇಷಿತಂ ಸಕಲಂ ದ್ರವ್ಯಮಾತ್ಮಲೀನಮಪಿ ತ್ಯಜೇತ್ ॥ ೭೮ ॥

ಟೀ। ತನ್ನ ವೀರಶೈವಾಚಾರಮಾರ್ಗದಲ್ಲಿ ವಿಮುಖರಾದ ಶಿವಸಂಸ್ಕಾರಶೂನ್ಯರಾದ ಪ್ರಾಕೃತರಾದ ಭವಿಗಳಿಂದ ಕಳುಹಿಸಲ್ಪಟ್ಟ ವಸ್ತುಯಾವದುಂಟೋ ಆ ವಸ್ತುವು ಸ್ವಾಧೀನವಾಗಿದ್ದರೂ ಬಿಡಬೇಕು.

ಮೂ॥ ನಾರ್ಚಯೇದನ್ಯದೇವಾಂಸ್ತು ನಸ್ಮರೇನ್ನ ಚ ಕೀರ್ತಯೇತ್ ।
ನತನ್ನಿವೇದ್ಯಮಶ್ನೀಯಾಚ್ಛಿವಭಕ್ತೋ ದೃಢವ್ರತಃ ॥ ೭೯ ॥

ಟೀ। ವೀರಶೈವಾಚಾರ ವ್ರತವುಳ್ಳ ಶಿವಭಕ್ತನು ವಿಷ್ಣ್ವಾದಿ ದೇವತೆಗಳಂ ಹಸ್ತಗಳಿಂದ ಪೂಜಿಸಲಾಗದು, ಸ್ತುತಿಸಲಾಗದು, ಮನಸ್ಸಿನಿಂದಲೂ ಕೂಡ ಧ್ಯಾನವಂ ಮಾಡಲಾಗದು. ತದರ್ಪಿತಾನ್ನಾದಿದ್ರವ್ಯಗಳಂ ಸ್ವೀಕರಿಸಲಾಗದು.

ಮೂ॥ ಯದ್ಗೃಹೇಷ್ವನ್ಯದೇವೋಸ್ತಿ ತದ್ಗೃಹಾಣಿ ಪರಿತ್ಯಜೇತ್ ।
ನಾನ್ಯದೇವಾರ್ಚಕಾನ್ಮರ್ತ್ಯಾನ್ಪೂಜಾಕಾಲೇ ನಿರೀಕ್ಷಯೇತ್ ॥ ೭೦ ॥

ಟೀ। ಯಾವಾತನ ಮನೆಯಲ್ಲಿ ವಿಷ್ಣ್ವಾದ್ಯನ್ಯದೇವತೆಗಳುಂಟೋ ಆ ಗೃಹಂಗಳಂ ಹೊಗಲಾಗದು. ಶಿವಪೂಜಾಕಾಲದಲ್ಲಿ ಅನ್ಯದೇವಪೂಜಕರಾದ ಮನುಷ್ಯರಂ ನೋಡಲಾಗದು.

ಮೂ॥ ಸದಾಶಿವೈಕನಿಷ್ಠಾನಾಂ ವೀರಶೈವಾಧ್ವವರ್ತಿನಾಂ ।
ನಹಿ ಸ್ಥಾವರಲಿಂಗಾನಾಂ ನಿರ್ಮಾಲ್ಯಮುಪಯುಜ್ಯತೇ ॥ ೭೭ ॥

ಟೀ। ಸರ್ವಕಾಲದಲ್ಲಿಯೂ ಶಿವಲಿಂಗೈಕನಿಷ್ಠರಾದ ವೀರಶೈವಮಾರ್ಗಾನುವರ್ತಿಗಳಾದ ಶಿವಭಕ್ತರುಗಳಿಗೆ ಸ್ವಯಂವ್ಯಕ್ತ ಮೊದಲಾದ ಸ್ಥಾವರಲಿಂಗಂಗಳ ತೀರ್ಥಪ್ರಸಾದಂಗಳು ಸಲ್ಲಲಾರವು.

ಮೂ॥ ಯತ್ರ ಸ್ಥಾವರಲಿಂಗಾನಾ ಮಹಾಯಃ ಪರಿವರ್ತತೇ ।
ಅಥವಾ ಶಿವಭಕ್ತಾನಾಂ ಶಿವಲಾಂಛನಧಾರಿಣಾಂ ॥

ತತ್ರಪ್ರಾಣಾನ್ವಿಹಾಯಾಪಿ ಪರಿಹಾರಂಸಮಾಚರೇತ್ ।
ಶಿವಾರ್ಥಂಮುಕ್ತಜೀವಶ್ಚೇಚ್ಛಿವಸಾಯುಜ್ಯಮಾಪ್ನುಯಾತ್॥ ೩೯ ॥

ಟೀ ॥ ಯಾವಸ್ಥಲದಲ್ಲಿ ಸ್ವಯಂವ್ಯಕ್ತ, ಆರ್ಷ, ಮಾನುಷಾದಿ ಸ್ಥಾವರಲಿಂಗಗಳಿಗೂ, ಭಸ್ಮ, ರುದ್ರಾಕ್ಷಮೊದಲಾದ ಶಿವಚಿಹ್ನೆಗಳನ್ನು ಧರಿಸಿರುವ ಶಿವಭಕ್ತರಿಗೂ ಹಾನಿಯು ಸಂಭವಿಸುತ್ತದೋ ಅಲ್ಲಿ ಪ್ರಾಣಗಳನ್ನಾದರೂಕೊಟ್ಟು ಹಾನಿಯನ್ನು ತಪ್ಪಿಸಬೇಕು. ಪ್ರಾಣತ್ಯಾಗದಿಂದ ಆತ್ಮಹತ್ಯಾದೋಷವು ಪ್ರಾಪ್ತವಾಗುವದಿಲ್ಲವೇ ಎಂದರೆ: ಶಿವನಿಗೋಸ್ಕರ ಪ್ರಾಣಗಳನ್ನು ಬಿಟ್ಟವನು ಶಿವಸಾಯುಜ್ಯವನನ್ನು ಪಡೆಯುವನೇ ಹೊರ್ತು ಆತ್ಮಹತ್ಯಾದೋಷಕ್ಕೆ ಗುರಿಯಾಗುವದಿಲ್ಲ.

ಮೂ ॥ ಶಿವನಿಂದಾಕರಂದೃಷ್ಟ್ವಾ ಘಾತಯೇದಥವಾಶಪೇತ್ ।
ಸ್ಥಾನಂವಾತತ್ಪರಿತ್ಯಜ್ಯಗಚ್ಛೇದ್ಯದ್ಯಕ್ಷಮೋಭವೇತ್ ॥ ೪೦ ॥

ಟೀ ॥ಶಿವನಿಂದೆಯಂ ಮಾಡುವರಂ ಕಂಡರೆ ಶಿಕ್ಷಿಸಬೇಕು; ಅಥವಾ ಶಪಿಸಬೇಕು; ಶಿಕ್ಷಿಸುವದಕ್ಕೂ, ಶಪಿಸುವದಕ್ಕೂ, ಅಸಮರ್ಥನಾದಲ್ಲಿ ತತ್ಸ್ಥಾನವಂ ಬಿಟ್ಟುಪೋಪುದು ಅಂದರೆ ಶಿವನಿಂದೆಯಂ ಕಿವಿಯಲ್ಲಿ ಕೇಳಬಾರದೆಂಬುದರ್ಥ॥

ಮೂ ॥ ಯತ್ರಚಾಚಾರ ನಿಂದಾಸ್ತಿ ಕದಾಚಿತ್ತತ್ರನವ್ರಜೇತ್ ।
ಯದ್ಗೃಹೆಶಿವನಿಂದಾಸ್ತಿ ತದ್ಗೃಹಾಣಿ ಪರಿತ್ಯಜೇತ್ ॥ ೪೧ ॥

ಟೀ ॥ ಯಾವಸ್ಥಲದಲ್ಲಿ ವೀರಶೈವಾಚಾರನಿಂದೆಯುಂಟಾಗಿರುವದೋ ಆಸ್ಥಲಕ್ಕೆ ಯಾವಕಾಲದಲ್ಲಿಯೂ ಹೋಗಲಾಗದು. ಯಾವಮನೆಯಲ್ಲಿಶಿವನಿಂದೆಯುಂಟೋ ಆಮನೆಂಗಳಂ ಸರ್ವಥಾ ಬಿಡಬೇಕು.

ಮೂ ॥ ಯಸ್ಸರ್ವಭೂತಾಧಿಪತಿಂ ವಿಶ್ವೇಶಾನಂ ವಿನಿಂದತಿ ॥
ನತಸ್ಯನಿಷ್ಕೃತಿಶ್ಶಕ್ಯಾ ಕರ್ತುಂವರ್ಷಶತೈರಪಿ ॥ ೪೨ ॥

ಟೀ ॥ ಹಾಗಾದರೆ ಶಿವನಿಂದಕನಿಗೆ ಪ್ರಾಯಶ್ಚಿತ್ತಮುಂಟೋ ಇಲ್ಲವೋ ಎಂದರೆ ಈಶ್ವರಸ್ಸರ್ವಭೂತಾನಾಂ ಎಂಬಶ್ರುತಿಯಿಂ ಸಕಲಪ್ರಾಣಿಗಳಿಗೂ ಅಧಿಪತಿಯಾದ ಜಗದೀಶ್ವರನಂ ಆವಾತನುನಿಂದಿಸುತ್ತಿಹನೋ ಅವಂಗೆ ಅನೇಕಕೋಟಿವರ್ಷಗಳಿಂದಲೂ ಪ್ರಾಯಶ್ಚಿತ್ತಂಮಾಡಲುಶಕ್ಯವಲ್ಲ.

ಮೂ॥ ಶಿವಪೂಜಾಪರೋಭೂತ್ವಾ ಪೂರ್ವಕರ್ಮವಿವರ್ಜಯೇತ್ ।
ಅಥವಾಪೂರ್ವಕರ್ಮಸ್ಯಾತ್ತಾಸ್ಪೂಜಾನಿಷ್ಫಲಾಭವೇತ್ ॥ ೪೩ ॥

ಟೀ ॥ ಹಾಗಾದರೆ, ಈಪ್ರಕಾರವಾಗಿ ಶಿವಭಕ್ತನಿಗೆ ಅನ್ಯದೇವತಾಸ್ಮರಣವುಕೂಡ ಅಯೋಗ್ಯವೆಂದರೆ ಸೂರ್ಯಮೊದಲಾದನ್ಯದೇವತೋ

ಪಾಸನಾರೂಪವಾದಸಂಧ್ಯಾವಂದನಾದಿ ಪೂರ್ವಕರ್ಮಕ್ಕೇನು ಗತಿಯೆಂದರೆ ಶಿವದೀಕ್ಷಾಯುಕ್ತನಾಗಿ ಶಿವಪೂಜಾನಿಷ್ಠನಾದ ವೀರಶೈವನು ಪೂರ್ವ ಕರ್ಮಗಳಂ ಬಿಡಬೇಕು. ಹಾಗಿಲ್ಲದೆಪೂರ್ವಕರ್ಮವುಳ್ಳವನಾದರೆ ಅವನ ಶಿವಲಿಂಗಪೂಜೆಯು ವ್ಯರ್ಥವಾಗುವದು.

ಮೂ॥ ಲಿಂಗೈಕನಿಷ್ಠಹೃದಯಃ ಸದಾಮಾಹೇಶ್ವರೋಜನಃ ।
ಪೂರ್ವಾಶ್ರಯಗತಾನ್ಧರ್ಮಾಂಸ್ತ್ಯಜೇತ್ಸ್ವಾಚಾರರೋಧಕಾನ್ ॥೪೪॥
ಗುರುಸಂಸ್ಕೃತಭಾವಸ್ಯ ಗುರುನಿರ್ಮಿತ ದೇಹವಾನ್ ।
ವಿಸ್ಮೃತ್ಯಪೂರ್ವದುರ್ಭಾವಂ ತದಧೀನ ಸ್ವಮಾಚರೇತ್ ॥ ೪೫ ॥

ಟೀ॥ ಹೀಗೆಂಬ ಯೋಗಜಾಗಮವಚನವಿಹುದಾಗಿ ನಿರಂತರವೂ ಶಿವಲಿಂಗವೊಂದರಲ್ಲಿಯೇನಿಷ್ಠೆಯುಳ್ಳವೀರಮಾಹೇಶ್ವರನು ತನ್ನ ಸಮಯಾಚಾರಕ್ಕೆ ವಿರೋಧಿಗಳಾದ ಪೂರ್ವಾಶ್ರಮವನ್ನೈದಿದ ಸೂರ್ಯಾದ್ಯುಪಾಸನಾರೂಪವಾದ ಸಂಧ್ಯಾವಂದನಾದಿ ಪ್ರಾಕೃತಧರ್ಮಂಗಳಂ ಬಿಡಬೇಕು ಹಾಗಾದರೆ ಪೂರ್ವಾಶ್ರಯಪ್ರಾಪ್ತವಾದನಿತ್ಯ, ನೈಮಿತ್ತಿಕಕರ್ಮಂಗಳಂ ಬಿಟ್ಟರೆ ಪಾಪಶ್ರವಣಮುಂಟಾಗಿರುವದರಿಂದ ಧರ್ಮಂಗಳದೆಂತು ಬಿಡಲ್ತಕ್ಕವು ಎಂದರೆ ಪೂರ್ವೋಕ್ತದೀಕ್ಷಾರೂಪವಾದ ಶಿವಸಂಸ್ಕಾರಸಂಬಂಧದಿಂದುಂಟಾದ ಲಿಂಗನಿಷ್ಠೆಯಿಂ ಹೋಗಲಾಡಿಸಲ್ಪಟ್ಟ ಸಂಚಿತಾಗಾಮಿ ಸಕಲದೋಷವುಳ್ಳವರಾದುದರಿಂ ನಿರ್ಮಲರಾದ ಶಿವಶರಣರಿಗೆ ಪೂರ್ವಾಶ್ರಯಪ್ರಾಪ್ತನಿತ್ಯನೈಮಿತ್ತಿಕಾದಿಪ್ರಾಕೃತಕರ್ಮಗಳಿಂದೇನುಪ್ರಯೋಜನವು; ಪ್ರತ್ಯವಾಯನಿವೃತ್ತಿಯೇ ಪ್ರಯೋಜನವೆಂದರೆ ಹಾಗಲ್ಲವು;ನೇಹಾಭಿಕ್ರಮನಾಶೋಸ್ತಿ ಪ್ರತ್ಯವಾಯೋನವಿದ್ಯತೇ । ಸ್ವಲ್ಪಮಪ್ಯಸ್ಯಧರ್ಮಸ್ಯತ್ರಾಯತೇ ಮಹತೋಭಯಾತ್ ॥ ಎಂದು ಭಗವದ್ಗೀತಾ ವಚನಮುಂಟಪ್ಪುದರಿಂದಾತ್ಮಾಭಿಮುಖೀಕರಣದಲ್ಲಿ ಪಟುವಾದ ಗುರುಕಾರುಣ್ಯದಿಂ ಪ್ರಾಪ್ತವಾದಭೂತಿಧಾರಣಾದ್ಯಾಚಾರಕ್ರಮಕ್ಕೆ ನಾಶವಿಲ್ಲ. ಅಂದರೆ;-ವಿಸ್ಮೃತಿಯಂಬಿಟ್ಟು ತದೇಕನಿಷ್ಠೆಯಿಂ ವಿಧೀಯಮಾನವಾದುದರಿಂದಿದಕ್ಕೆ ವಿಚ್ಛೇದವಿಲ್ಲವೆಂದು ಭಾವವು. ಹಾಗಡರೆ ನಿತ್ಯನೈಮಿತ್ತಿಕರೂಪಕರ್ಮಗಳ ಪರಿತ್ಯಾಗದಿಂ ಪ್ರತ್ಯವಾಯವಿಲ್ಲವೇ ಅಂದರೆ; ಯತ್ಯಾಶ್ರಮಿಗಳಿಗೆ ಪೂರ್ವಾಶ್ರಮಪ್ರಾಪ್ತನಿತ್ಯನೈಮಿತ್ತಿಕಕರ್ಮಪರಿತ್ಯಾಗದಿಂ ಹ್ಯಾಗೆ ಪ್ರತ್ಯವಾಯವಿಲ್ಲವೋ ಹಾಗೆ ಶಿವದೀಕ್ಷಾಸಂಪನ್ನನಾದ ವೀರಶೈವನಿಗೆ ತನ್ನಸಮಯಾಚಾರಕ್ಕೆವಿರುದ್ಧವಾದಪೂರ್ವಾಶ್ರಯಪ್ರಾಪ್ತವಾದ ಕರ್ಮಗಳಪರಿತ್ಯಾಗದಿಂ ಪ್ರತ್ಯ

ವಾಯುವಿಲ್ಲವೆಂಬುದೇ ಸತ್ಯವೆಂದು ತಿಳಿಯಲ್ವೇಳ್ಕುಂ.

(ಅವತರಣಿಕೆ.) ವೀರಶೈವರಿಗೆ ಪೂರ್ವಕರ್ಮಪರಿತ್ಯಾಗವು ವಿಹಿತವಾದ ರೆಜಾತಾಶೌಚ ಮೃತಾಶೌಚಗಳಿಗೇನುಗತಿಯೆಂದೊಡೆ ಹೇಳುತ್ತಾನೆ.

ಮೂ॥ ನತಸ್ಯಸೂತಕಂಕಿಂಚಿತ್ಪ್ರಾಣಲಿಂಗಾಂಗಸಂಗಿನಃ। ಜನ್ಮನೊಥ್ಥಂ ಮೃತೊಥ್ಥಂಚ ವಿದ್ಯತೆಪರಮಾರ್ಥತಃ॥೪೬॥

ಟೀ॥ ಪ್ರಾಣಲಿಂಗಾಂಗಸಂಗಿಯಾದ ಶಿವಭಕ್ತನಿಗೆ ಜಾತಾಶೌಚ ಮೃತಾಶೌಚಗಳು ಪರಮಾರ್ಥದಿಂದಿಲ್ಲವಾದರೆ ಸ್ತ್ರೀಯರಿಗೆ ರಜಸೂತಕವಿಲ್ಲವೋ ಎಂಬರೆ:

ಮೂ॥ ಲಿಂಗಾರ್ಚನರತಾಯಾಶ್ಚಋತೌನಾರ್ಯಾನಸೂತಕಂ।
ತಥಾಪ್ರಸೂತಿಕಾಯಾಶ್ಚಸೂತಕಂನ್ನೈವವಿದ್ಯತೆ॥೪೭॥

ಟೀ॥ ಶಿವಲಿಂಗಾರ್ಚನನಿರತಳಾದ ಸ್ತ್ರೀಗೆ ರಜಸ್ಸೂತಕವಿಲ್ಲ। ಹಾಂಗೆಯೇ ಪ್ರಸೂತೆಯಾದಸ್ತ್ರೀಗೂ ಪ್ರಸೂತಿಸೂತಕವಿಲ್ಲ.

ಮೂ॥ ಗೃಹೆಯಸ್ಮಿನ್ಪ್ರಸೂತಾಸ್ತ್ರೀಸೂತಕಂನಾತ್ರವಿದ್ಯತೆ।
ಶಿವಪಾದಾಂಬುಸಂಸ್ಪರ್ಶಾತ್ಸರ್ವಪಾಪಂಪ್ರಣಶ್ಯತಿ॥೪೮॥

ಟೀ॥ ಹಾಗಾದರೆ ಗೃಹಸೂತಕವೂ ಇಲ್ಲವೋಎಂದರೆ, ಯಾವಗೃಹದಲ್ಲಿ, ಸ್ತ್ರೀಯುಪ್ರಸೂತೆಯುಹಳೋ, ಅಲ್ಲಿಸೂತಕದೋಷವಿಲ್ಲವು, ಶಿವಪಾದೋದಕ ಸಂಸ್ಪರ್ಶದದೆಸೆಯಿಂದಸರ್ವದೋಷವೂ ತೊಲಗುವದು.

ಮೂ॥ ಲಿಂಗಾರ್ಚನರತಾನಾರೀ ಸೂತಕೇತುಜರಸ್ವಲಾ।
ರವಿರಗ್ನಿರ್ಯಥಾವಾಯು ಸ್ತದ್ವತ್ಶೋಕಿಟಗುಣಶ್ಶುಚಿಃ॥೪೯॥

ಟೀ॥ ಹ್ಯಾಗೆಸೂರ್ಯನು ಅಗ್ನಿಯು ವಾಯುವು ಶುಚಿಯೋಹಾಗೆ ಶಿವಲಿಂಗಾರ್ಚನರತಳಾದಸ್ತ್ರೀಯು ಪ್ರಸೂತೆಯಾದರೂ ರಜಸ್ವಲೆಯಾದರೂ ಶುಚಿರ್ಭೂತಳೇಸರಿ.

ಮೂ॥ ಶಿವಸ್ಥಾನಿನಿತೀರ್ಥಾನಿ ವಿಶಿಷ್ಟಾನಿಶಿವಾರ್ಚಕಃ।
ಶಿವಯಾತ್ರೋತ್ಸವಂನಿತ್ಯಂ ಸೇವೆತಪರಯಾಮುದಾ॥೫೦॥

ಟೀ॥ ಬಳಿಕೀಪ್ರಕಾರವಾದ ವೀರಶೈವರಿಂ ಶಿವಕ್ಷೇತ್ರ ತೀರ್ಥಯಾತ್ರಾದಿಗಳು ಬಿಡಲ್ತಕ್ಕುದೋಎಂದರೆ ಇಷ್ಟಲಿಂಗಪೂಜಕನಾದ ಶಿವಭಕ್ತನು ಶ್ರೇಷ್ಠವಾದಶ್ರೀಶೈಲಾದಿಕ್ಷೇತ್ರಗಳಂ ತ್ರಿಮಕೂಟವೊದಲಾದ ತೀರ್ಥಂಗಳಂ ಶಿವಯಾತ್ರೋತ್ಸವಮಂ ಯಾವಾಗಲೂ ಸಂತೋಷದಿಂಸೇವಿಸಬೇಕು.

ಕ್ತನು ಮಾಹೇಶ್ವರನೆಂದುಹೇಳಲ್ಪಡುವನು.

ಮೂ॥ ವಿಶ್ವಸ್ಮಾದಧಿಕೋರುದ್ರೋ ವಿಶ್ವಾನುಗ್ರಹಕಾರಕಃ।
ಇತಿಯಸ್ಯಸ್ಥಿರಾಬುದ್ಧಿ ಸ್ಸವೈಮಾಹೇಶ್ವರಸ್ಸ್ಮೃತಃ॥೬॥

ಟೀ॥ ವಿಶ್ವಾಧಿಕೋರುದ್ರೋಮಹರ್ಷಿರ್ಹಿರಣ್ಯಗರ್ಭಂಜನಯಾಮಾಸ ಪೂರ್ವಂಸನೋಬುಧ್ಯಾಶುಭಯಾಸಂಯುನಕ್ತು ಎಂಬ ಶ್ವೇತಾಶ್ವತರಾದಿಶ್ರುತ್ಯನುಸಾರವಾಗಿ ಮಹೇಶ್ವರಪ್ರಶಂಸಾಪೂರ್ವಕಮಾಹೇಶ್ವರಸ್ವರೂಪಮಂ ನಿರೂಪಿಸುವನದೆಂತನೆ॥ಸಮಸ್ತದೇವದಾನವಾದಿವಿಶ್ವಕ್ಕನುಗ್ರಹಕರ್ತನಾದ ಏಕಏವರುದ್ರೋನದ್ವಿತೀಯಾಯತಸ್ಥೆ ಎಂಬಶ್ರುತಿಪ್ರಸಿದ್ಧನಾದರುದ್ರನು ವಿಶ್ವಂನಾರಾಯಣಂಹರಿಂಹೀಗೆಂಬ ಶ್ರುತಿಯಿಂವಿಶ್ವರೂಪನಾದನಾರಾಯಣನಿಗಿಂತಲೂ ಶ್ರೇಷ್ಠನೆಂಬ ಬುದ್ಧಿಯು ಆವಾತಂಗೆ ಸ್ಥಿರವಾಗಿರುವದೋ ಅವನೇ ಮಾಹೇಶ್ವರನು.

ಮೂ॥ ಬ್ರಹ್ಮಾದ್ಯೈರ್ಮಲಿನಪ್ರಾಯೈರ್ನಿರ್ಮಲೇಪರಮೇಶ್ವರೇ ।
ಸಾಮ್ಯೋಕ್ತಿಂಯೋನಸಹತೆ ಸವೈಮಾಹೇಶ್ವರಾಭಿಧಃ । ೭ ।

ಟೀ । ನತತ್ಸಮಶ್ಚಾಭ್ಯಧಿಕಶ್ಚದೃಶ್ಯತೆ ಎಂಬ ಶ್ರುತ್ಯರ್ಥವನ್ನನುಸರಿಸಿ,ಬ್ರಹ್ಮವಿಷ್ಣುರುದ್ರೇಂದ್ರಾಸ್ತೆ ಸಂಪ್ರಸೂಯಂತೆ ಎಂಬಶ್ರುತಿಯಿಂಆಣವಾದಿಮಲತ್ರಯಯುಕ್ತರಾದುದರಿಂದಜನನಮರಣಪರಿಪೀಡಿತರಾದವಿಷ್ಣುಬ್ರಹ್ಮಾದಿಗಳಿಗೆ ಜನನಮರಣರಹಿತನಾದುದರಿಂ ಕಾರಣಂತುಧ್ಯೇಯಸ್ಸರ್ವೈಶ್ವರ್ಯಸಂಪನ್ನಸ್ಸರ್ವೇಶ್ವರಶ್ಶಂಭುರಾಕಾಶಮಧ್ಯಗಃ ಎಂಬಶ್ರುತಿಯುಂಟಾಗಿ ನಿತ್ಯನಿರ್ಮಲನಾದ ಪರಮೇಶ್ವರನೊಡನೆ ಸಾದೃಶ್ಯವನ್ನು ಆವಾತನು ಸೈರಿಸದಿರುವನೋ ಅವನೇಮಾಹೇಶ್ವರನು.

ಮೂ । ಈಶ್ವರಸ್ಸರ್ವಭೂತಾನಾಂ ಬ್ರಹ್ಮಾದೀನಾಂಮಹಾನಿತಿ ।
ಬುದ್ಧಿಯೋಗಾತ್ತದಾಸಕ್ತೋ ಭಕ್ತೋಮಾಹೇಶ್ವರಸ್ಸ್ಮೃತಃ ॥ ೮॥

ಟೀ ॥ „ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ ಬ್ರಹ್ಮಾಧಿಪತಿ ಬ್ರಹ್ಮಣೋಧಿಪತಿ ಬ್ರಹ್ಮಾ ಶಿವೋಮೇಅಸ್ತು ಸದಾಶಿವೋಂ„ ಹೀಗೆಂಬ ಶ್ರುತ್ಯನುಸಾರವಾಗಿ ಈಶ್ವರಸ್ಸರ್ವಭೂತಾನಾಂ ಹೃದ್ದೇಶೇರ್ಜುನತಿಷ್ಠತಿ॥ ಭ್ರಾಮಯಂತ್ಸರ್ವಭೂತಾನಿ ಯಂತ್ರಾರೂಢಾನಿಮಾಯಯಾ॥ ತಮೇವಶರಣಂ ಗಚ್ಛಸರ್ವಭಾವೇನ ಭಾರತ„ ಎಂಬ ಗೀತಾವಚನದಿಂಚತುರ್ಮುಖಬ್ರಹ್ಮಮೊದಲಾದ ಸಕಲಪಶುಪ್ರಾಣಿಗಳಿಗೂ ಪ್ರೇರಕನಾದ ಪರಮೇಶ್ವರನೊಬ್ಬನೇ ಶ್ರೇಷ್ಠನೆಂಬಬುದ್ಧಿಯೋಗದಿಂ ಶಿವನಲ್ಲಿಯೇ ಆಸಕ್ತ.

ನಾದಭಕ್ತನು ಮಾಹೇಶ್ವರನೆನಿಸಿಕೊಳ್ಳುವನು.

ಮೂ॥ ಬ್ರಹ್ಮಾದಿದೇವತಾಜಾಲಂ ಮೋಹಿತಂಮಾಯಯಾಸದಾ ।
ಅಶಕ್ತಂಮುಕ್ತಿದಾನೇತು ಕ್ಷಯಾತಿಶಯಸಂಯುತಂ ॥ ೯ ॥
ಶಿವಏವಪರಸ್ಸಾಕ್ಷಾನ್ಮೋಕ್ಷವಿಶ್ರಾಣನಕ್ಷಮಃ।
ಇತಿಯೋವೈವಿಜಾನಾತಿಭಕ್ತೋ ಮಾಹೇಶ್ವರಸ್ಸ್ಮೃತಃ ॥ ೧೦ ॥

ಟೀ॥ ಬ್ರಹ್ಮವಿಷ್ಣುಮೊದಲಾದ ದೇವತಾಸಮೂಹವೆಲ್ಲವು ನಿರಂತರಂಉತ್ಪತ್ತಿನಾಶಂಗಳತಿಶಯದಿಂ ಕೂಡಿದಂಥಾದ್ದಾಗಿ ಸ್ವತಂತ್ರತೆಯಿಂ ಕಲ್ಪಿಸಲ್ಪಟ್ಟ ಶಿವನ ಮಾಯೆಯಿಂಮೋಹಿತವಾದ ಕಾರಣದಿಂಪರಾಪರಮುಕ್ತಿಯನೀಯುವಲ್ಲಿ ಸಾಮರ್ಥ್ಯವಿಲ್ಲದ್ದು, ಷಡ್ಗುಣೈಶ್ವರ್ಯಸಂಪನ್ನನಾದ ಮಹೇಶ್ವರನೇ ತತ್ಪರಂಬ್ರಹ್ಮಸಏಕ ಸ್ಸಏಕೋರುದ್ರಸ್ಸಈಶಾನಸ್ಸಭಗವಾಂತ್ಸಮಹೇಶ್ವರ ಸ್ಸಮಹಾದೇವಃ ।ಹೀಗೆಂಬಅಥರ್ವಶಿರಃಪ್ರಮಾಣದಿಂದಪರಾಪರಮುಕ್ತಿಪ್ರದನೆಂದುತಿಳಿದಭಕ್ತನೇ ಮಾಹೇಶ್ವರನೆನಿಸುವನು.

ಮೂ॥ ಕ್ಷಯಾತಿಶಯಸಂಯುಕ್ತೋ ಬ್ರಹ್ಮವಿಷ್ಣ್ವಾದಿಸಂಪದಃ ॥
ತೃಣವನ್ಮನ್ಯತೆ ಯುಕ್ತ್ಯಾ ವೀರಮಾಹೇಶ್ವರಸ್ಸದಾ ॥ ಶಬ್ದಸ್ಪರ್ಶಾದಿಸಂಪನ್ನೆಸುಖಲೇಶತು ನಿಸ್ಪೃಹಃ ॥ ಶಿವಾನಂದೆ ಸಮುತ್ಕಂಠೋ ವೀರಮಾಹೇಶ್ವರೋಭವೇತ್ ॥ ೧೨ ॥

ಟೀ॥ ಬ್ರಹ್ಮವಿಷ್ಣ್ವಾದಿಗಳ ಸಂಪತ್ತುಗಳೆಲ್ಲಂ ನಾಶದತಿಶಯದೊಡನೆ ಕೂಡಿದವಾದಕಾರಣ ಅನಿತ್ಯವೆಂಬ ಬುದ್ಧಿಯಿಂ ತೃಣದಂತೆತಿಳಿದು, ಶಬ್ದಸ್ಪರ್ಶಾದಿಗಳಿಂದುಂಟಾದ ಸೋಪಾಧಿಕಸುಖಲೇಶದಲ್ಲಿ ನಿಸ್ಪೃಹನಾಗಿ ನಿತ್ಯವಾದ ಶಿವಾನಂದದಲ್ಲಿ ಪ್ರೀತಿಯುಳ್ಳಾತನೇವೀರಮಾಹೇಶ್ವರನೆಂಬನಾಮವುಳ್ಳವನಾಗುವನು.

ಮೂ॥ ಪರಸ್ತ್ರೀಸಂಗನಿರ್ಮುಕ್ತಃ ಪರದ್ರವ್ಯಪರಾಙ್ಮುಖಃ ।
ಶಿವಾರ್ಥಕಾರ್ಯಸಂಪನ್ನ ಶ್ಶೈವಾಗಮಪರಾಯಣಃ । ಶಿವಸ್ತುತಿರಸಾಸ್ವಾದ ಮೋದಮಾನಮನಾಶ್ಶುಚಿಃ । ಶಿವೋತ್ಕರ್ಷಪ್ರಮಾಣಾನಾಂ ಸಂಪಾದನಸಮುದ್ಯತಃ । ನಿರ್ಮಮೋನಿರಹಂಕಾರೋ ನಿರಸ್ತಕ್ಲೇಶಪಂಜರಃ । ಅಸ್ಪೃಷ್ಟಮದಸಂಬಂಧೋಮಾತ್ಸರ್ಯಾವೇಶವರ್ಜಿತಃ । ನಿರಸ್ತಮದನೋನ್ಮೇಷೋನಿರ್ಧೂತಕ್ರೋಧವಿಪ್ಲವಃ।ಸದಾಸಂತುಷ್ಟಹೃದಯಸ್ಸರ್ವಪ್ರಾಣಿಹಿತೇರತಃ । ನಿವಾರಣಸಮುದ್ಯೋಗೀ ಶಿವಕಾರ್ಯವಿರೋಧಿ

ನಾಂ॥ಸಹಚಾರೀಸದಾಕಾಲಂ ಶಿವೋತ್ಕರ್ಷಾಭಿಧಾಯಿಭಿಃ ಶಿ
ವಾಪಕರ್ಷಸಂಪ್ರಾಪ್ತಪ್ರಾಣತ್ಯಾಗೇಪ್ಯಶಂಕಿತಃ । ಶಿವೈಕನಿ
ಷ್ಠಸ್ಸರ್ವಾತ್ಮಾ ವೀರಮಾಹೇಶ್ವರೋಭವೇತ್ ॥೧೮ ॥

ಟೀ॥ ಅನ್ಯಾಸ್ತ್ರೀಂಗಶೂನ್ಯನು, ಪರದ್ರವ್ಯದಲ್ಲಿ ಪರಾಙ್ಮುಖತ್ವವು
ಳ್ಳವನು, ಶಿವಾಗಮಶ್ರವಣನಿಷ್ಠನು, ಶಿವಸ್ತುತಿರಸಾಯನಪಾನದಿಂ ಸುಖ
ಸುಸ್ಥಿತಮನಸ್ಸುಳ್ಳವನು, ಪವಿತ್ರನು, ಶಿವಾಧಿಕ್ಯವಂಪ್ರತಿಪಾದಿಸುವಶ್ರು
ತ್ಯಾದಿಪ್ರಮಾಣಂಗಳಂಸಂಪಾದಿಸುವಲ್ಲಿ ಉದ್ಯೋಗವುಳ್ಳವನು,ನಾನು,ನನ್ನ
ದುಎಂಬ ಅಹಂಕಾರಮಮಕಾರಗಳಿಲ್ಲದವನು, ನಿವಾರಿಸಲ್ಪಟ್ಟ ಅಜ್ಞಾನಾ
ದಿಸಕಲಕ್ಲೇಶಸಮೂಹವುಳ್ಳವನು, ಮುಟ್ಟಲ್ಪಡದೆಯಿದ್ದ ಮದಮಾತ್ಸರ್ಯಗ
ಳುಳ್ಳವನು,ನಿವಾರಿಸಲ್ಪಟ್ಟಕಾಮೋದ್ರೇಕವುಳ್ಳವನು,ಕೊಡಹಲ್ಪಟ್ಟಕ್ರೋ
ಧಬಾಧೆಯುಳ್ಳವನು, ಸರ್ವಕಾಲದಲ್ಲಿಯೂ ಸುಖಿಸುಸ್ಥಿರ ಚಿತ್ತವುಳ್ಳವ
ನು,ಸಕಲಪ್ರಾಣಿಗಳಿಗೂ ಹಿತವಂಚಿಂತಿಸುವವನು,ಶಿವಕಾರ್ಯಕ್ಕೆ ವಿರೋಧಿಗ
ಳಾದವರಂನಿವಾರಿಸುವಲ್ಲಿಪ್ರಯತ್ನವುಳ್ಳವನು,ಶಿವೋತ್ಕರ್ಷವಂ ಹೇಳುವವ
ರಸಂಗಡ ನಿರಂತರಂಚರಿಸುವವನು,ಶಿವನಿಂದೆಯುಪ್ರಾಪ್ತಮಾದಲ್ಲಿತನ್ನಪ್ರಾ
ಣತ್ಯಾಗವಂಮಾಡುವದಕ್ಕೆಶಂಕೆ ಯಿಲ್ಲದವನು ಶಿವಲಿಂಗವೊಂದರಲ್ಲಿಯೇನಿಷ್ಠೆ
ಯುಳ್ಳವನು, ಶಿವಭಾವವುಳ್ಳವನು, ವೀರಮಾಹೇಶ್ವರನೆನಿಸಿಕೊಳ್ಳುವನು.

☞ ಇದುಶ್ರೀಮತ್ಪರಶಿವಚರಣಕಮಲಾರಾಧಕಸಾದ್ಯತತ್ಪ್ರ
ಸಾದಾಸಾದಿತನಿರ್ಮಲಜ್ಞಾನವೈಭವನಾದ,ನಿಖಿಲನಿಗಮಾಗಮೇತಿಹಾಸಸ್ಮೃ
ತಿಪುರಾಣಪದವಾಕ್ಯಪ್ರಮಾಣ ಪಾರಾವಾರ ಪಾರೀಣನಾದ,ನಿರಾಭಾರವೀ
ರಶೈವಸಾಮ್ರಾಜ್ಯಧುರಂಧರನಾದ,ತೋಂಟದಸಿದ್ಧೇಶ್ವರನೆಂಬಾಚಾರ್ಯನಿಂ
ಸಂಗ್ರಹಿಸಲ್ಪಟ್ಟ ವೀರಶೈವಪ್ರದೀಪಿಕೆಯೊಳ್ ಷಟ್ಸ್ಥಲಪ್ರಕರಣದಲ್ಲಿ
ಮಾಹೇಶ್ವರಸ್ಥಲನಿರೂಪಣಂದ್ವಿತೀಯೋಲ್ಲಾಸಂ ಸಂಪೂರ್ಣಂ.

---

॥ ಶ್ರೀಗುರುಭ್ಯೋನಮಃ ॥

। ಅನಂತರದೊಳ್ ಪ್ರಸಾದಿಸ್ಥಲಲಕ್ಷಣಕ್ರಮವದೆಂತೆನೆ ।

ಮೂ॥ ಅನ್ಯತ್ರಶಂಭೋರತಿಪಾತ್ರಶೂನ್ಯೇನಿಜೇಷ್ಟಲಿಂಗೇನಿಯತಾಂತ
ರಾತ್ಮಾ ।ಶಿವಾತ್ಮಕಂವಿಶ್ವಮಿದಂವಿಬುಧ್ಯನ್ಮಾಹೇಶ್ವರೋಸೌ
ಭವತಿಪ್ರಸಾದೀ॥ ೧ ॥

ಟೀ॥ ಶಿವಏಕೋಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ ಯೆಂಬ

ಶ್ರುತ್ಯರ್ಥವನ್ನನುಸರಿಸಿ, ಶಿವನಿಂದನ್ಯವಾದ ದೇವತೆಗಳಲ್ಲಿ ಪ್ರೀತಿಲೇಶ ವೂ ಇಲ್ಲದವನಾಗಿ ತನ್ನಿಷ್ಟಲಿಂಗದಲ್ಲಿ ಕಟ್ಟಲ್ಪಟ್ಟ ಅಂತಃಕರಣವುಳ್ಳ ಈ ಮಾಹೇಶ್ವರನು ಈ ಪ್ರಪಂಚವನ್ನೆಲ್ಲಾ ಶಿವಮಯವಾಗಿ ತಿಳಿದವನಾ ದಕಾರಣ ಪ್ರಸಾದಿಯಾಗುತ್ತಿಹನು.

ಮೂ॥ ಲಿಂಗನಿಷ್ಠಾದಿಭಾವೇನಧ್ವಸ್ತಪಾಪನಿಬಂಧನಃ ।
ಮನಃಪ್ರಸಾದಯೋಗೇನಪ್ರಸಾದೀತ್ಯೇಷಕಥ್ಯತೇ ॥ ೧ ॥

ಟೀ ॥ ಮುಂದೆಹೇಳಲ್ಪಡುವ ಲಿಂಗನಿಷ್ಠೆ ಮೊದಲಾದ ಸ್ಥಲಗಳ ಪರಿಜ್ಞಾನದಿಂದಲೂ, ಅವುಗಳನ್ನಾಚರಿಸುವದರಿಂದಲೂ, ಒತ್ತರಿಸಲ್ಪಟ್ಟಪಾ ಪ ಸಮೂಹವುಳ್ಳ ಈಮಾಹೇಶ್ವರನು ಮನೋನಿರ್ಮಲತ್ವದ ಸಂಬಂಧ ದಿಂ ಪ್ರಸಾದಿಯೆಂದು ಹೇಳಲ್ಪಡುತ್ತಾನೆ. ಲಿಂಗನಿಷ್ಠೆ ಮೊದಲಾದವುಗಳ ಸ್ವ ರೂಪವು ನಂಮಿಂದುಕ್ತವಾದ ಷಟ್ಸ್ಥಲದೀಪಿಕೆಯೆಂಬ ಗ್ರಂಥದಲ್ಲಿವಿಸ್ತಾ ರವಾಗಿರುವಕಾರಣ ಗ್ರಂಥಬಾಹುಳ್ಯಭೀತಿಯಿಂದಿಲ್ಲಿ ಹೇಳಲಿಲ್ಲ.

ಮೂ॥ ನೈರ್ಮಲ್ಯಂಮನಸೋಲಿಂಗಂಪ್ರಸಾದಇತಿಕಥ್ಯತೇ ।
ಶಿವಸ್ಯಲಿಂಗರೂಪಸ್ಯಪ್ರಸಾದಾದೇವಸಿಧ್ಯತಿ ॥ ೨ ॥

ಟೀ ॥ "ಚಿತ್ತಸ್ಯಹಿಪ್ರಸಾದೇನಹಂತಿಕರ್ಮಶುಭಾಶುಭಂ । ಪ್ರಸ ನ್ನಾತ್ಮಾತ್ಮನಿಸ್ಥಿತ್ವಾಸುಖಮಕ್ಷಯಮಶ್ನುತೇ" ಎಂಬ ಮೈತ್ರೇಯ ಶ್ರು ತ್ಯನುಸಾರವಾಗಿ ಮನಸ್ಸಿನ ನಿರ್ಮಲತ್ವದ ಚಿಹ್ನೆಯೇ ಪ್ರಸಾದವೆಂದು ಹೇಳಲ್ಪಡುತ್ತಿಹುದು. ಈ ಪ್ರಸಾದವು ಲಿಂಗರೂಪನಾದ ಶಿವನಪ್ರಸಾ ದದಿಂದೆ ಸಿದ್ಧಿಸುವದು.

ಅವ. ಬಳಿಕ ಚಿತ್ತನೈರ್ಮಲ್ಯ ರೂಪವಾದ ಪ್ರಸಾದಕ್ಕೆ ಕಾರ ಣೀಭೂತವಾದ ಶಿವಪ್ರಸಾದವಾವುದೆಂದರೆ;—

ಮೂ॥ ಶಿವಪ್ರಸಾದೊಯದ್ದ್ರವ್ಯಂಶಿವಾಯವಿನಿವೇದಿತಂ ।
ನಿರ್ಮಾಲ್ಯಂತತ್ತುಶೈವಾನಾಂಮನೋನೈರ್ಮಲ್ಯಕಾರಣಂ ॥ ೪ ॥

ಟೀ ॥ ಶಿವಲಿಂಗಮೂರ್ತಿಗೆ ಸಮರ್ಪಿಸಿದ ದ್ರವ್ಯವಾವುದುಂ ಟೋ ಅದುಶಿವಪ್ರಸಾದವು. ಈ ಪ್ರಸಾದವು ವೀರಶೈವರಿಗೆ ವಿಶೇಷ ವಾಗಿ ಮನೋನಿರ್ಮಲತ್ವಕ್ಕೆ ಕಾರಣವಾಗುತ್ತಿಹುದು.

ಅವ. ಈ ಪ್ರಕಾರವಾದ ಶಿವಪ್ರಸಾದವಂ ಸ್ವೀಕರಿಸುವ ಮಾಹೇ ಶ್ವರನು ಪ್ರಸಾದಿಯೆಂದುಹೇಳಿಸಿಕೊಳ್ಳುವನು. ಎಂದುಹೇಳುತ್ತಾನೆ.

ಮೂ॥ ಮನಃಪ್ರಸಾದಸಿದ್ಧ್ಯರ್ಥಂ ನಿರ್ಮಲಜ್ಞಾನ ಕಾರಣಂ ।
ಶಿವಪ್ರಸಾದಂ ಸ್ವೀಕುರ್ವನ್ ಪ್ರಸಾದೀತ್ಯೇಷ ಕಥ್ಯತೇ ॥ ೫ ॥

ಟೀ॥ ನಿರ್ಮಲವಾದಜ್ಞಾನಕ್ಕೆ ಕಾರಣವಾದ ಶಿವಲಿಂಗಪ್ರಸಾದವೆಂಬ ನೈರ್ಮಲ್ಯವನ್ನು ಚಿತ್ತನೈರ್ಮಲ್ಯಸಿದ್ಧಿಗೋಸ್ಕರ ಅಂಗೀಕರಿಸಿದ ವೀರಮಾಹೇಶ್ವರನು ಪ್ರಸಾದಿ ಯೆನಿಸಿಕೊಳ್ಳುವನು.

ಮೂ॥ ಲಿಂಗಾರ್ಪಿತಪದಾರ್ಥಂ ಚ ಸಂಭೋಗೀ ಲಿಂಗಚಿತಃ ।
ಅನರ್ಪಿತವಿಸರ್ಜೀ ಚ ಪ್ರಸಾದಿಸ್ಥಲಮುತ್ತಮಂ ॥ ೬ ॥

ಟೀ॥ ಶಿವಲಿಂಗಕ್ಕೆ ಸಮರ್ಪಿಸಿದ ಸಮಸ್ತದ್ರವ್ಯವನ್ನು ಲೇಸಾಗಿ ಭೋಗಿಸುತ್ತಾ ಶಿವಲಿಂಗದಲ್ಲಿ ಅವಧಾನವುಳ್ಳವನಾಗಿ ಶಿವಲಿಂಗಕ್ಕೆ ಅರ್ಪಿಸದದ್ರವ್ಯವನ್ನು ಮುಟ್ಟದವನಾಗಿರುವದೇ ಪ್ರಸಾದಿಸ್ಥಲವೆನಿಸಿಕೊಳ್ಳುವದು.

ಅವ. “ಆಹಾರಶುದ್ಧ್ಯಾ ತತ್ವಶುದ್ಧಿಃ” ಎಂಬ ಛಾಂದೋಗ್ಯ ಶ್ರುತಿಯಿರುವದರಿಂದ ಶುದ್ಧವಾದ ಶಿವನಿರ್ಮಾಲ್ಯಭಕ್ಷಣೆಯಿಂ ಸಕಲತತ್ವಶುದ್ಧಿಯುಂಟಾಗಿ ಭಕ್ತನು ಮನೋನೈರ್ಮಲ್ಯವಂ ಪಡೆಯುವನೆಂಬರ್ಥದಲ್ಲಿ ಪ್ರಮಾಣವಂ ನಿರೂಪಿಸುತ್ತಾನೆ.

ಮೂ॥ ಅನ್ನಶುದ್ಧ್ಯಾ ಹಿ ಸರ್ವೇಷಾಂ ತತ್ವಶುದ್ಧಿರುದಾಹೃತಾ ।
ವಿಶುದ್ಧಮನ್ನಜಾತಂ ಹಿ ಯಚ್ಛಿವಾಯ ಸಮರ್ಪಿತಂ ॥ ೭ ॥
ತದೇವ ಸರ್ವಕಾಲಂ ತು ಭುಂಜಾನೋ ಲಿಂಗತತ್ಪರಃ ॥
ಮನಃಪ್ರಸಾದ ಮತುಲಂ ಲಭತೇ ಜ್ಞಾನಸಾಧನಂ ॥ ೮ ॥

ಟೀ॥ ಅನ್ನಶುದ್ಧಿಯಿಂ ಸಕಲಪ್ರಾಣಿಗಳಿಗೂ ದೇಹೇಂದ್ರಿಯ ಭುವನಪ್ರಪಂಚ ಶುದ್ಧಿಯುಂಟಾಗುವದೆಂದು ಶಾಸ್ತ್ರಜ್ಞರಿಂ ಪೇಳಲ್ಪಡುವದು. ಶಿವನಿಗೆ ಸಮರ್ಪಿಸಿದ ಯಾವದಾನೊಂದು ಅನ್ನಸಮೂಹವು ಶುದ್ಧವಾದಂಥಾದ್ದೋ ಆ ಅನ್ನಸಮೂಹವಂ ಲಿಂಗನಿಷ್ಠನಾಗಿ ಯಾವಾಗಲೂ ಭುಂಜಿಸುವ ಪ್ರಸಾದಿಯು ಅಸದೃಶವಾದ ಶಿವಜ್ಞಾನಕ್ಕೆ ಕಾರಣವಾದ ಮನೋನೈರ್ಮಲ್ಯವಂ ಪಡೆಯುತ್ತಿಹನು.

ಮೂ॥ ಆತ್ಮಭೋಗಾಯ ನಿಹಿತಂ ಯದ್ಯದ್ದ್ರವ್ಯಂ ಸಮಾಹಿತಂ ।
ತತ್ತತ್ಸಮರ್ಪ್ಯ ದೇವಾಯ ಭುಂಜೀತಾತ್ಮವಿಶುದ್ಧಯೇ ॥ ೯ ॥

ಟೀ॥ ಆತ್ಮಭೋಗಕ್ಕೋಸ್ಕರ ನಿಯಮಿತವಾಗಿ ಯಾವಯಾವ ದ್ರವ್ಯವು ಪ್ರಾಪ್ತವಾಗುತ್ತಿಹುದೋ ಅದನೆಲ್ಲವಂ “ಯದ್ಯದಾತ್ಮಹಿತಂ-

ವಸ್ತುತತ್ತತ್ಸ್ವಕರ್ತ್ರ್ಯಚ್ಛಿವಾರ್ಪಿತಂ,; ಎಂಬ ಶಿವರಹಸ್ಯವಚನಾನುಸಾರ ವಾಗಿ ಶಿವನಿಗೆ ಸಮರ್ಪಿಸಿ, ಭುಂಜಿಸಬೇಕು. ಅಂದರೆ;— ತನ್ನ ಭೋಗಕ್ಕೋಸ್ಕರ ಕ್ಲುಪ್ತವಾಗಿ ಸಂಪಾದಿಸಲ್ಪಟ್ಟ ಯಾವಯಾವ ದ್ರವ್ಯವುಂಟೋ ಅದನೆಲ್ಲವಂ ಶಿವಲಿಂಗಮೂರ್ತಿಗೆ ಸಮರ್ಪಿಸಿ, ಚಿತ್ತಶುದ್ಧ್ಯರ್ಥವಾಗಿ ಭುಂಜಿಸಬೇಕೆಂದು ತಾತ್ಪರ್ಯ.

ಅವ. ಪ್ರಸಾದವೆಂಥಾದ್ದು. ಅದರಮಹಿಮೆಯೇನು ಎಂಬಲ್ಲಿಹೇಳುತ್ತಾನೆ

ಮೂ॥ ನಿತ್ಯಸಿದ್ಧೇನದೇವೇನಭಿಷಜಾಜನ್ಮರೋಗಿಣಾ ।

ಯದ್ಯತ್ಪ್ರಸಾದಿತಂಭುಕ್ತ್ವಾತತ್ತುಜನ್ಮರಸಾಯನಂ ॥ ೧೦ ॥

ಟೀ॥ ಭವರೋಗಿಗಳಿಗೆ ವೈದ್ಯನಾದ ಶಿವಲಿಂಗದಲ್ಲಿ ನಿರಂತರಸಾನ್ನಿಧ್ಯಯಿಯಾದ ಮಾಹೇಶ್ವರನಿಂ ಯಾವಯಾವ ದ್ರವ್ಯವು ಭುಂಜಿಸಿ ಪ್ರಸಾದವಾಗಿ ಮಾಡಲ್ಪಟ್ಟಿತೋ ಅದೆಲ್ಲವು ಸಂಸಾರವೆಂಬ ವ್ಯಾಧಿಗೆ ರಸಾಯನವಾಗಿರುವದು.

ಆರೋಗ್ಯಕಾರಣಂಪುಂಸಾಮಂತಃಕರಣಶುದ್ಧಿದಂ।

ತಾಪತ್ರಯ ಮಹಾರೋಗ ಸಮುದ್ಧರಣಭೇಷಜಂ ॥೧೧॥

ವಿದ್ಯಾವೈಶದ್ಯಕರಣಂವಿನಿಪಾತಮಿಘಾತನಂ।

ದ್ವಾರಂಜ್ಞಾನಾವತಾರಸ್ಯಮೋಹೋಚ್ಛೇದಸ್ಯಕಾರಣಂ ॥ ೧೨ ॥

ವೈರಾಗ್ಯಸಂಪದೋಮೂಲಂಮಹಾನಂದಪ್ರವರ್ಧನಂ ।

ದುರ್ಲಭಂಪಾಪಚಿತ್ತಾನಾಂಸುಲಭಂಶುದ್ಧಕರ್ಮಣಾಂ ॥ ೧೩ ॥

ಆದೃತಂಬ್ರಹ್ಮವಿಷ್ಣ್ವಾದ್ಯೈರ್ವಸಿಷ್ಠಾದ್ಯೈಶ್ಚತಾಪಸೈಃ।

ಶಿವಸ್ಯೋಚ್ಛಿತಮನ್ನಾದ್ಯಂಸ್ವೀಕಾರ್ಯಂಸಿದ್ಧಕಾಂಕ್ಷಿಭಿಃ ॥ ೧೪ ॥

ಟೀ॥ ಪುರುಷರಿಗಾರೋಗ್ಯಕಾರಣವಾದ ಚಿತ್ತಶುದ್ಧಿಯಂ ಕೊಡುವದಾಗಿಯೂ, ಆಧ್ಯಾತ್ಮಿಕಾದಿ ತಾಪತ್ರಯಗಳೆಂಬ ಮಹಾರೋಗಂಗಳಂ ನಾಶಮಾಡುವಂಥಾದ್ದಾಗಿಯೂ, ವಿದ್ಯಾಸಿದ್ಧಿಗೆ ಸಾಧನವಾಗಿಯೂ ಪಾಪನಿವಾರಕವಾಗಿಯೂ, ಜ್ಞಾನೋದಯದ ಬಾಗಿಲಾಗಿಯೂ, ಅಜ್ಞಾನಧ್ವಂಸಕ್ಕೆ ಕಾರಣವಾಗಿಯೂ, ವೈರಾಗ್ಯಸಂಪತ್ತಿಗೆ ಬುಡವಾಗಿಯೂ, ನಿತ್ಯಾನಂದವನ್ನು ಹೆಚ್ಚಿಸುವದಾಗಿಯೂ, ಪಾಪಿಷ್ಠರಿಗೆ ದುರ್ಲಭವಾದದ್ದಾಗಿಯೂ, ಪುಣ್ಯಾತ್ಮರಿಗೆ ಸುಲಭವಾದದ್ದಾಗಿಯೂ, ಬ್ರಹ್ಮಾದಿದೇವತೆಗಳಿಂದಲೂ, ವಸಿಷ್ಠಾದಿ ಮುನಿಗಳಿಂದಲೂ, ಪ್ರೀತಿಸಲ್ಪಟ್ಟದ್ದಾಗಿ

ಯೂ, ಇರುವ ಶಿವನಿಂದ ಸ್ವೀಕರಿಸಲ್ಪಟ್ಟ ಅನ್ನಪಾನಾದಿದ್ರವ್ಯವು ಮೋಕ್ಷಾರ್ಥಿಗಳಾದ ಪ್ರಸಾದಿಗಳಿಂ ಸ್ವೀಕರಿಸಲ್ತಕ್ಕದ್ದಾಗಿರುವದು.

ಅವ. ಈ ಪ್ರಕಾರವಾದ ಶಿವಪ್ರಸಾದ ಸ್ವೀಕಾರದಿಂ ಸಕಲಪಾಪಗಳೂ ನಾಶವಾಗುವವೆಂದು ಹೇಳುತ್ತಾನೆ.

ಮೂ॥ ಪತ್ರಂಪುಷ್ಪಂಫಲಂತೋಯಂಯಚ್ಛಿವಾಯನಿವೇದಿತಂ ॥
ತತ್ತತ್ಸ್ವೀಕಾರಯೋಗೇನ ಸರ್ವಪಾಪಕ್ಷಯೋಭವೇತ್ ॥ ೧೫ ॥

ಟೀ॥ ಪತ್ರ, ಪುಷ್ಪ, ಫಲ, ಜಲಮುಂತಾಗಿ ಯಾವದಾನೊಂದು ದ್ರವ್ಯವು ಶಿವನಿಗೆ ಸಮರ್ಪಿಸಲ್ಪಟ್ಟಿತೋ ಆದ್ರವ್ಯವಂ ಸ್ವೀಕರಿಸುವದರಿಂದ ಸರ್ವಪಾಪಗಳೂ ಕ್ಷಯವಾಗುವವು.

ಶ್ರೀಮತ್ಪರಮ ಶಿವಚರಣ ಕಮಲಾರಾಧಕನಾದ ತತ್ಪ್ರಸಾದಾ
ಸಾದಿತ ನಿರ್ಮಲಜ್ಞಾನವೈಭವನಾದ ನಿಖಿಲನಿಗಮಾಗಮೇತಿ
ಹಾಸಸ್ಮೃತಿಪುರಾಣ ಪದವಾಕ್ಯ ಪ್ರಮಾಣಪಾರಾವಾರ
ಪಾರೀಣನಾದ ನಿರಾಭಾರವೀರಶೈವ ಸಾಮ್ರಾಜ್ಯಧು
ರಂಧರನಾದ ತೋಂಟದ ಸಿದ್ಧೇಶ್ವರನಿಂ ರಚಿಸ
ಲ್ಪಟ್ಟವೀರಶೈವಪ್ರದೀಪಿಕೆಯೊಳ್ಪ್ರಸಾ
ದಿಸ್ಥಲ ನಿರೂಪಣಂ ಸಂಪೂರ್ಣಂ

---

## ಪ್ರಾಣಲಿಂಗಿಸ್ಥಲ.

ಮೂ॥ ಶಿವಪ್ರಸಾದೇಸತಿಯೋಗಭಾಜಿಸರ್ವಂಶಿವೈಕಾತ್ಮತಯಾವಿಭಾತಿ॥
ಸ್ವಕರ್ಮಮುಕ್ತಶ್ಶಿವಭಾವಿತಾತ್ಮಾಸಪ್ರಾಣಲಿಂಗೀತಿನಿಗದ್ಯತೇಪ್ರಾ ॥ ೧ ॥

ಟೀ॥ ಸ್ವರೂಪಹಾನಿ ವೃದ್ಧಿಯಿಲ್ಲದೆ ಸಜಾತೀಯ ಸಮರಸ ಶಿವಯೋಗವುಳ್ಳ ಶಿವಪ್ರಸಾದವು ಸಿದ್ಧಿಸಲಾಗಿ ಸಕಲ ಜಗತ್ತು ಶಿವಾಭಿನ್ನವಾಗಿ ತೋರುವದು. ಆದಕಾರಣ ಶಿವಾಭೇದದಿಂ ಭಾವಿಸಲ್ಪಟ್ಟ ಸ್ವರೂಪವುಳ್ಳ ಆ ಪ್ರಸಾದಿಯು ಸ್ವಕರ್ಮದಿಂ ಬಿಡಲ್ಪಟ್ಟವನಾಗಿ ಆ ಕರ್ಮವು ಸ್ವಸ್ವರೂಪವೇ ಆಗಲಾಗಿ ಕರ್ಮಪಾಶದಿಂಬಿಡಲ್ಪಟ್ಟ ಪ್ರಾಣಲಿಂಗಿ ಎಂದು ಹೇಳಲ್ಪಡುವನು.

ಅವ. ಒಬ್ಬಪುರುಷನೇ ಭಕ್ತನೆಂದು ಮಾಹೇಶ್ವರನೆಂದು ಪ್ರಸಾದಿಯೆಂದು ತಿಳಿಯಲ್ಪಟ್ಟಿತು. ಮರಳಿ ಆತನೇ ಪ್ರಾಣಲಿಂಗಿಯೆಂದು ಹ್ಯಾಗೆ ಕರೆಯಲ್ಪಡುವನೆಂದರೆ, ಹೇಳುತ್ತಾನೆ.

ಮೂ। ಭಕ್ತೋಮಾಹೇಶ್ವರಶ್ಚೈವಪ್ರಸಾದೀತಿಚಕೀರ್ತಿತಃ ॥
ಕರ್ಮಪ್ರಾಧಾನ್ಯಯೋಗೇನಜ್ಞಾನಯೋಗೋಸ್ಯಕಥ್ಯತೇ । ೧ ।

ಟೀ ॥ ಈ ಶಿವಲಿಂಗದೀಕ್ಷಾ ಸಂಪನ್ನನು ಕರ್ಮಕಾಂಡದಲ್ಲಿ ಹೇಳಲ್ಪಟ್ಟ ಕ್ರಿಯಾಪ್ರಾಧಾನ್ಯಯೋಗದಿಂ ಭಕ್ತನೆಂದು ಮಾಹೇಶ್ವರನೆಂದು ಪ್ರಸಾದಿಯೆಂದು ಹೇಳಲ್ಪಟ್ಟನು. ಬಳಿಕೀ ಪ್ರಕಾರವಾದ ರೂಪತ್ರಯದಿಂ ಕೂಡಿದವನಿಗೆ ಜ್ಞಾನಕಾಂಡೋಕ್ತವಾದ ಜ್ಞಾನಯೋಗವು ಲಭಿಸುವದು. ಆ ಜ್ಞಾನಯೋಗ ಪ್ರಾಧಾನ್ಯದಿಂ ಪ್ರಾಣಲಿಂಗಿಯೆಂದು ಹೇಳಲ್ಪಡುತ್ತಿಹನು.

ಅವ. ॥ಶ್ಲೋ। ಸರ್ವತತ್ವಮಯಃಪ್ರಾಣಸ್ಸರ್ವಜ್ಞಾನಮಯಶ್ಶಿವಃ। ಅನಯೋರೈಕ್ಯಗಮೈವೈತತ್ಪ್ರಾಣಲಿಂಗಮಿಹೋಚ್ಯತೇ,, ಎಂಬ ವೀರಾಗಮವಚನದಿಂ ಹೇಳಲ್ಪಟ್ಟ ಪ್ರಾಣಲಿಂಗವುಳ್ಳವನೇ ಪ್ರಾಣಲಿಂಗಿಯೆನಿಸಿಕೊಳ್ವನೆಂದು ಪೇಳುತ್ತಿರ್ದಪಂ.

ಮೂ॥ ಲಿಂಗಂಚಿದಾತ್ಮಕಂಬ್ರಹ್ಮತಚ್ಛಕ್ತಿಃಪ್ರಾಣರೂಪಿಣೀ ।
ತದ್ರೂಪಲಿಂಗವಿಜ್ಞಾನೀಪ್ರಾಣಲಿಂಗೀತಿಕಥ್ಯತೇ ॥ ೨ ॥

ಟೀ॥ ಚಿದ್ರೂಪವಾದ ಬ್ರಹ್ಮವೇ ಶಿವಲಿಂಗವು. ಆಶಿವಲಿಂಗದ ಪೀಠಶಕ್ತಿಯೇ ಪ್ರಣವಾತ್ಮಕವಾದ ಪ್ರಾಣಸ್ವರೂಪವುಳ್ಳದ್ದು. ಆ ಪ್ರಾಣವು ವೇದ್ಯಸಂಸ್ಕಾರರೂಪವಾದ ಬಿಂದುಸ್ಫುರಣದಿಂ ಯುಕ್ತವಾಗಿ ಚಿತ್ಕ್ರಿಯಾಸಾಮರಸ್ಯಾತ್ಮಕವಾದ ಉನ್ಮೇಷಶಕ್ತಿಯಿಂ ಕೂಡಿರ್ಪುದರಿಂ ಸರ್ವತತ್ವಮಯವೆಂದು ಹೇಳಲ್ಪಟ್ಟಿತು. ಈ ಪ್ರಕಾರವಾದ ಲಿಂಗಜ್ಞಾನವುಳ್ಳವಂ ಪ್ರಾಣಲಿಂಗಿಯೆಂದು ಹೇಳಲ್ಪಡುವನು.

ಅವ. ಪ್ರಾಣೇಷ್ವಂತರ್ಮನಸೋಲಿಂಗಮಾಹುಃ, ಊರ್ಧ್ವಂಪ್ರಾಣಮುನ್ನಯತ್ಯಪಾನಂಪ್ರತ್ಯಯಸ್ಯತಿಮಧ್ಯೇವಾಸಮನಮಾಸೀನಂವಿಶ್ವೇದೇವಾಉಪಾಸಕಃ,, ಎಂಬ ಅಥರ್ವಶಿರಸ್ಸು, ಕಠವಲ್ಲೀಶ್ರುತಿ ಇವುಗಳಿಗನುಸಾರವಾಗಿ ಪ್ರಾಣಲಿಂಗಿಸ್ಥಲವಂ ನಿರೂಪಿಸುತ್ತಾನೆ.

ಮೂ॥ ಪ್ರಾಣಾಪಾನಸಂಘಾತಾತ್ಕಂದಮಧ್ಯಾದ್ಯದುತ್ಥಿತಂ ॥
ಪ್ರಾಣಲಿಂಗಂತದಾಖ್ಯಾತಂಪ್ರಾಣಾಪಾನನಿರೋಧಿಭಿಃ ॥ ೪ ॥

ಟೀ॥ ದೇಶಿಕೋಪದೇಶದಿಂ ಪ್ರಾಣಾಪಾನವಾಯುಗಳಿಗೆ ಸಂಘಟ್ಟನವುಂಟಾಗಲಾಗಿ, ನಾಭಿಕಂದದ ಮಧ್ಯದಬೆಸೆಯಿಂದ ಯಾವದಾನೊಂದು ತೇಜವುಂಟಾಗುತ್ತಿಹುದೋ ಆ ತೇಜಸ್ಸು ಪ್ರಾಣಲಿಂಗವೆಂದು ಪ್ರಾಣಾಪಾನ ವಾಯುನಿರೋಧವುಳ್ಳ ಶಿವಯೋಗಿಗಳಿಂ ಹೇಳಲ್ಪಡುತ್ತಿಹುದು.

ಮೂ॥ ಪ್ರಾಣೋಯತ್ರಲಯಂಯಾತಿಭಾಸ್ಕರೇತುಹಿನಂಯಥಾ ॥
ತತ್ಪ್ರಾಣಲಿಂಗಮುದ್ದಿಷ್ಟಂತದ್ಧಾರೀಸ್ಯಾತ್ತದಾಕೃತಿಃ ॥ ೫ ॥

ಟೀ॥ ಸೂರ್ಯೋದಯವಾದರೆ ಸೂರ್ಯನಲ್ಲಿ ಮಂಜು ಹ್ಯಾಗೆ ಲಯವಂ ಪಡೆಯುತ್ತಿಹುದೋ ಹಾಗೆಯೇ ಪ್ರಾಣವಾಯುವು ಯಾವದಾನೊಂದು ಪರಬ್ರಹ್ಮಮಯವಾದ ಶಿವಲಿಂಗದಲ್ಲಿ ಲಯವನ್ನೈದುತ್ತಿಹುದು. ಅದು ಕಾರಣದಿಂ ಪ್ರಾಣಲಿಂಗವೆಂದು ಹೇಳಲ್ಪಟ್ಟಿತು. ಅಂಥಾ ಪ್ರಾಣಲಿಂಗ ಪರಾಮರ್ಶವುಳ್ಳಾತನು ತತ್ಸ್ವರೂಪವೇ ಆಗುವನು. ಈ ದೇಶ ಈಕಾಲಗಳೆಂಬ ಉಪಾಧಿಗಳಿಲ್ಲದೆ ವಿಶೇಷಾಕಾರಗಳೂ ಇಲ್ಲದೆ, ಸಾಮಾನ್ಯವಾಗಿ ನಾನೆಂಬ ತೋರಿಕೆಯಾದ ಅಹಂತೆಯೇ ಪ್ರಾಣಲಿಂಗವೆಂದು ತಿಳಿದವನೇ ಪ್ರಾಣಲಿಂಗಿಯೆಂದು ತಾತ್ಪರ್ಯಾರ್ಥ.

ಮೂ॥ ವಾಯುಪ್ರಾಣಗುಣೇಲಿಂಗೇಲಿಂಗಪ್ರಾಣೇಸಮಾಹಿತೇ ॥
ಸುಖದುಃಖೋಭಯಂನಾಸ್ತಿಪ್ರಾಣಲಿಂಗಿಸ್ಥಲಂಭವೇತ್ । ೬ ।

ಟೀ॥ ಪಂಚವಾಯುಪ್ರಾಣನ ಗುಣಗಳುಳ್ಳಂಥಾಲಿಂಗದಲ್ಲಿ ಸಮಾಧಾನವಾತರುವಿಕೆ, ಇಷ್ಟಲಿಂಗವೇ ಪ್ರಾಣವಾಗಿರುವಿಕೆ, ಸುಖ ದುಃಖಗಳೆರಡೂ ಇಲ್ಲದಿರುವಿಕೆ, ಇವುಗಳೇ ಪ್ರಾಣಲಿಂಗಿಸ್ಥಲವೆನಿಸುವದು.

ಅವ. ಅಂಥಾ ಲಿಂಗವು ಯಾವರೀತಿಯಾಗಿಸ್ಫುರಿಸುತ್ತಿಹುದೆಂದರೆ-

ಮೂ॥ ಜ್ಞಾನಿನಾಂಯೋಗಯುಕ್ತಾನಾಮಂತಸ್ಸ್ಫುರತಿದೀಪವತ್ ।
ಚಿದಾಕಾರಂಪರಬ್ರಹ್ಮಲಿಂಗಮಜ್ಞೈರ್ನಭಾವ್ಯತೇ । ೭ ॥

ಟೀ॥ "ಹೃದಯೆವ್ಯೆಬ್ರಹ್ಮಸೋಮಸೂರ್ಯಾಗ್ನಿಮಂಡಲೇ । ನಿವಾತದೀಪೋಪಸ್ಥಾಯಿಹೃದ್ಯಂತರ್ಜ್ಯೋತಿಪುರುಷಃ" ಎಂಬುಪನಿಷತ್ಪ್ರಸಿದ್ಧವಾಗಿ ಸ್ಫುರಣರೂಪಕವಾದ ಪರಬ್ರಹ್ಮಮಯವಾದ ಪ್ರಾಣಲಿಂಗವು ಶಿವ

ಯೋಗಯುಕ್ತರಾದ ಶಿವಜ್ಞಾನಿಗಳಿಗೆ ಹೃದಯಕಮಲದಲ್ಲಿ ಹೇಳಿದಂತೆ ಪ್ರ
ಕಾಶಿಸುತ್ತಲಿದೆ. ಗುರೂಪದೇಶವಿಲ್ಲದ ಅಜ್ಞಾರಿಂ ತಿಳಿಯಲ್ಪಡುವದಿಲ್ಲ.

ಮೂ॥ ಅಂತಸ್ಥಿತಂಪರಂಲಿಂಗಂಜ್ಯೋತೀರೂಪಂಶಿವಾತ್ಮಕಂ ।
ವಿಹಾಯಬಾಹ್ಯಲಿಂಗಸ್ಥಾವಿಮೂಢಾಇತಿಕೀರ್ತಿತಾಃ ॥ ೮ ॥

ಟೀ॥ ಹೃದಯಕಮಲದಲ್ಲಿ ಜ್ಯೋತಿಸ್ಸ್ವರೂಪವಾಗಿಯೂ ಸರ್ವೋ
ತ್ಕೃಷ್ಟವಾಗಿಯೂ ಇರುವ ಶಿವಾತ್ಮಕವಾದ ಪ್ರಾಣಲಿಂಗವಂ ಬಿಟ್ಟು
ಬಾಹ್ಯಲಿಂಗದಲ್ಲಿ ಮನವಿಟ್ಟವರು ಮೂಢರೆನಿಸುವರು.

ಬಾಹ್ಯಲಿಂಗವೆಂದರೆ ಸ್ಥೂಲಶರೀರಾಧಿಷ್ಠಿತವಾದ ಇಷ್ಟಲಿಂಗಕ್ಕಿಂ
ತಲೂ ಭಿನ್ನವಾದ ಸ್ಥಾವರಲಿಂಗವೆಂದರ್ಥ.—ಇಲ್ಲಿ;—" ಏವಂಕೃತ್ವಾ
ಗುರುರ್ಲಿಂಗಂ ಶಿಷ್ಯಹಸ್ತೇನಿಧಾಪಯೇತ್ ॥ ಪ್ರಾಣವದ್ಧಾರಣೀಯಂತು
ಪ್ರಾಣಲಿಂಗಮಿದಂತವ । ಕದಾಚಿತ್ಕುತ್ರಚಿದ್ವಾಪಿ ನವಿಯೋಜಯದೇ
ಹತಃ " ಎಂದೂ, ಪ್ರಾಣಲಿಂಗೇತುವಿಚ್ಛಿನ್ನೇ ಸಹಪ್ರಾಣಾನ್ಪರಿತ್ಯಜೇತ್ ।
ಪುನರ್ದೀಕ್ಷಾಂ ಪ್ರಾಪ್ಯತಿಷ್ಠೇದ್ರೌರವಂನರಕಂವ್ರಜೇತ್" ಎಂದೂ,
" ಏತತ್ಪ್ರಾಣಮಯಂಲಿಂಗಂ ಯಾವಜ್ಜೀವಂ ಸಮರ್ಚಯ । ಏತನ್ನಾ
ಶೇತವಪ್ರಾಣಾನ್ಪರಿತ್ಯಜಮಹಾಮತೇ" ಎಂದೂ, " ಇತಿವಿಜ್ಞಾಪಿತುಂಶಂ
ಭುಂ ತೇಜಸಾಭಾಸ್ವರಂಸ್ಮರೇತ್ । ತಲ್ಲಿಂಗಂಸ್ಥಾಪ್ಯತಚ್ಛಿಷ್ಯೇ ಪ್ರಾಣಲಿಂ
ಗಮಿದಂತವ । ಏವಮುಕ್ತ್ವಾ ಗುರುರ್ಲಿಂಗಂ ನಕದಾಚಿದ್ವಿಯೋಜಯ"
ಎಂದೂ ಅನೇಕಪ್ರಮಾಣಗಳಿರುವದರಿಂದಲೂ ಇಷ್ಟಲಿಂಗಧಾರಣಕಾಲದ
ಲ್ಲಿ ಗುರುಕೃತೋಪದೇಶದಿಂದಲಾ, ಇಷ್ಟಲಿಂಗವನ್ನೇ ಚಿದಾನಂದ ಸಂಬಂ
ಧದಿಂ ಪ್ರಾಣಲಿಂಗವೆಂದು ತಿಳಿಯಬೇಕು. ಇಷ್ಟಲಿಂಗಂಪ್ರಾಣಲಿಂಗ
ಮೇಕೀಕೃತ್ಯ ಸಮರ್ಚಯೇತ್, ಎಂಬವಚನದಿಂದಿಷ್ಟಲಿಂಗದಲ್ಲಿಯೇ
ಪ್ರಾಣ ಲಿಂಗಾರ್ಚನೆಯಾಗುವದಾಗಿ ಪ್ರಾಣಲಿಂಗಾರ್ಚನಾ ಪೂರ್ವಕ
ವಾದ ಇಷ್ಟಲಿಂಗಾರ್ಚನವಂ ಮಾಡಬೇಕೆಂದು ತಾತ್ಪರ್ಯ.

ಅವ. ಆದಕಾರಣ ಬಾಹ್ಯಪದಾರ್ಥಗಳಲ್ಲಿ ವಿಮುಖನಾಗಿ, ಚಿಲ್ಲಿಂ
ಗ ವಿಚಾರವುಳ್ಳವನೇ ಪ್ರಾಣಲಿಂಗಿಯೆಂದು ಹೇಳುತ್ತಾನೆ.

ಮೂ॥ ಸಂವಿಲ್ಲಿಂಗಪರಾಮರ್ಶೀಬಾಹ್ಯವಸ್ತುಪರಾಙ್ಮುಖಃ ॥
ಯಸ್ಸದಾವರ್ತತೆಯೋಗೀಪ್ರಾಣಲಿಂಗೀಸಉಚ್ಯತೇ ॥ ೯ ॥

ಟೀ॥ ಬಾಹ್ಯಲಿಂಗತತ್ಪೂಜಾಸಾಧನದ್ರವ್ಯಾದಿಗಳೆಲ್ಲವೂ ಬಾಹ್ಯ

ವೆನಿಸಿಕೊಳ್ಳುವನು. ಅವುಗಳಿಂದ ಹಿಂತಿರಿಗಿದವನಾಗಿ, ಯಾವಾಗಲೂ, ತನ್ನೊಳಗೆ ಚಿದ್ರೂಪವಾದ ಪ್ರಾಣಲಿಂಗದಲ್ಲಿ ವಿಚಾರವುಳ್ಳವನಾಗಿ ಯಾವ ಶಿವಯೋಗಿಯಿರುವನೋ ಅವನು ಪ್ರಾಣಲಿಂಗಿಯೆಂದು ಹೇಳಲ್ಪಡುವನು.

ಮೂ ॥ ಮಾಯಾವಿಕಲ್ಪಜಂವಿಶ್ವಂ ಹೇಯಂಸಂಚಿಂತ್ಯನಿತ್ಯಶಃ ।
ಚಿದಾನಂದಮಯೆಲಿಂಗೆ ವಿಲೀನಃ ಪ್ರಾಣಲಿಂಗವಾನ್ ॥೧೦॥

ಟೀ ॥ ಲೋಕವು ಮಾಯಾಗುಣ ಭೇದದಿಂದುಂಟಾದ ಕಾರಣ ದಿಂ ಬಿಡುವದಕ್ಕೆ ಯೋಗ್ಯವಾದದ್ದೆಂದು ತಿಳಿದು, ಯಾವಾಗಲೂ ಸಚ್ಚಿದಾ ನಂದಸ್ವರೂಪವಾದ ಪ್ರಾಣಲಿಂಗದಲ್ಲಿ ಮನೋಲಯವುಳ್ಳಾತನು ಪ್ರಾಣ ಲಿಂಗಿಯೆನಿಸುವನು.

ಅವ. ಚಿಲ್ಲಿಂಗವೆಂಬುವದು ನಾದಬಿಂದು ಕಲಾತೀತವಾದದ್ದು. ಪ್ರಾಣವು ನಾದಬಿಂದು ಕಲಾತ್ಮಕವಾದದ್ದು. ಆದರಿಂದೀಪ್ರಾಣಕ್ಕೆ ಪೀಠ ರೂಪತ್ವವೆಂತು ಘಟಿಪುದೆನೆ.

ಮೂ ॥ ಸತ್ತಾಪ್ರಾಣಮಯೀಶಕ್ತಿಶ್ಚಿದ್ರೂಪಂಪ್ರಾಣಲಿಂಗಕಂ ॥
ತತ್ಸಾಮರಸ್ಯವಿಜ್ಞಾನಾತ್ಪ್ರಾಣಲಿಂಗೀತಿಕಥ್ಯತೆ ॥ ೧೧॥

ಟೀ ॥ ಸತೋಭಾವಸ್ಸತ್ತಾ ಎಂಬ ವ್ಯುತ್ಪತ್ತಿಯಿಂ ಸಾನಾದೆ ನೆಂಬುತ್ತಮಪುರುಷನಿಷ್ಠಸ್ಫೂರ್ತಿಯೇ ಚಿಲ್ಲಿಂಗಕ್ಕೆ ಜೀವನಭೂತವಾ ದ ಶಕ್ತಿಯು. ಅಂಥಾ ಸ್ಫುರಣೆಯಿಲ್ಲದಿದ್ದರೆ ಚಿಲ್ಲಿಂಗವು ಜಡವಪ್ಪುದು. ಅದರಿಂ ಅಂಥಾ ಸ್ಫುರಣೆಯುಳ್ಳ ಉತ್ತಮಪುರುಷನೇ ಪ್ರಾಣಲಿಂಗವು. ಆ ಶಿವಶಕ್ತಿಗಳ ಅನ್ಯೋನ್ಯ ಸಾಮರಸ್ಯ ಜ್ಞಾನವುಳ್ಳವನೇ ಪ್ರಾಣಲಿಂ ಗಿಯೆನಿಸುವನು.

ಶ್ರೀಮತ್ಪರ ಶಿವಪ್ರಸಾದಾಸಾದಿತ ನಿರ್ಮಲಜ್ಞಾನವೈಭವನಾದ
ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ
ವೀರಶೈವ ಪ್ರದೀಪಿಕೆಯೊಳ್ ಷಟ್ಸ್ಥಲಪ್ರಕರಣದೊ
ಳ್ಪ್ರಾಣಲಿಂಗಿಸ್ಥಲ ನಿರೂಪಣಂ ಸಂಪೂರ್ಣಂ



## ಶರಣಸ್ಥಲನಿರೂಪಣಂ

ಮೂ ॥ ಯಃಪ್ರಾಣಲಿಂಗಾರ್ಚನಭಾವಪೂರ್ವೈರ್ಧರ್ಮೈರುಪೇತಶ್ಶಿವ ಭಾವಿತಾತ್ಮಾ । ಸಏವತುರ್ಯಃ ಪರಿಕೀರ್ತಿತೋऽಸೌಸಂವಿದ್ವಿ ಪಾಕಾಚ್ಛರಣಾಭಿಧಾನಃ । ೧ ॥

ಟೀ ॥ ಪ್ರಾಣಲಿಂಗಪೂಜಾಚರಣ ಮೊದಲಾದ ಶಿವಧರ್ಮಗಳೊಡನೆ ಕೂಡಿದಾತನಾಗಿ ಲಿಂಗರೂಪದಿಂ ಭಾವಿಸಲ್ಪಟ್ಟ ಸ್ವಸ್ವರೂಪವುಳ್ಳ ಭಕ್ತನಿಂ ನಾಲ್ಕನೆಯವನಾದ ಈ ಪ್ರಾಣಲಿಂಗಿಯು ಜ್ಞಾನಪರಿಪಾಕವಶದಿಂ ಶರಣನೆನಿಸಿಕೊಳ್ಳುವನು.

ಮೂ ॥ ಅಂಗಲಿಂಗೀಜ್ಞಾನರೂಪಸ್ಸತೀಜ್ಞೇಯಶ್ಶಿವಃಪತಿಃ ।
ಯತ್ಸೌಖ್ಯಂ ತತ್ಸಮಾವೇಶಾತ್ತದ್ವಾಂಚ್ಛರಣನಾಮವಾನ್ ॥ ೨ ॥

ಟೀ ॥ ಶಿವಜ್ಞಾನವೇ ಸ್ವರೂಪವಾಗಿ ಉಳ್ಳ ಅಂಗಲಿಂಗಸಾಮರಸ್ಯಜ್ಞಾನಿಯಾದ ಪ್ರಾಣಲಿಂಗಿಯು, ಸತಿಯೆಂದೂ, ಶಿವಲಿಂಗವೇ ಪತಿಯೆಂದೂ ತಿಳಿಯಬೇಕು. "ಯಥಾಸ್ತ್ರಿಯಾಂ ಸಂಪರಿಷ್ವಕ್ತೋನ ಬಾಹ್ಯಂಕಿಂಚನವೇದನಾಂತರಂ. ಏವಮೇವಾಯಂಪುರುಷಃಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋನ ಬಾಹ್ಯಂ ಕಿಂಚನವೇದನಾಂತರಂ„ ಎಂಬ ಬೃಹದಾರಣ್ಯಕ ಶ್ರುತಿ ಪ್ರಸಿದ್ಧವಾದ ಅಂಗಲಿಂಗರೂಪಸ್ತ್ರೀಪುರುಷರ ಸಮರಸರೂಪಸಂಯೋಗದಲ್ಲಿ ಆವುದಾನೊಂದು ಸೌಖ್ಯವುಂಟೋ ತಾದೃಶಸೌಖ್ಯವುಳ್ಳವನೇ ಶರಣನೆನಿಸಿಕೊಳ್ಳುವನು.

ಮೂ ॥ ಸತೀವರಮಣೇಯುಕ್ತಾ ಶಿವೇಶಕ್ತಿಂವಿಭಾವಯನ್ ।
ತದನ್ಯವಿಮುಖಸ್ಸೋಯಂ ಜ್ಞಾತಶ್ಶರಣನಾಮವಾನ್ । ೩ ॥

ಟೀ । ಸಚ್ಚಿದಾನಂದಾತ್ಮಕವಾದ ಶಿವಲಿಂಗಮೂರ್ತಿಯೇ ಪತಿಯು ನಾನೇ ಸತಿಯು ಎಂಬಜ್ಞಾನವೇ ಹೃದಯದಲ್ಲಿ ಉಳ್ಳವನಾಗಿ, ವಿಷಯ ಪ್ರಪಂಚಿನ ಸುಖವಿಲ್ಲದೆ, ತಾನೇ ಸಮರ್ಥನಾಗಿರುವ ಸ್ಥಿತಿಯೇ ಶರಣಸ್ಥಲವೆನಿಸಿಕೊಳ್ಳುವದೆಂಬರ್ಥವುಳ್ಳ "ಸತೀಚಾಹಂಪತಿರ್ಲಿಂಗ ಹೃದಿಯುಕ್ತಸ್ಸ್ವಯಂಪ್ರಭುಃ । ಪ್ರಾಪಂಚಿಕಸುಖಂನಾಸ್ತಿ ಶರಣಸ್ಥಲಮುತ್ತಮಂ„ ಎಂಬ ಶಂಕರಸಂಹಿತಾ ವಚನಾನುಸಾರವಾಗಿ ಪ್ರಾಣಕಾಂತನ ವಿಷಯದಲ್ಲಿ ಪತಿವ್ರತಾ ಸ್ತ್ರೀಯಂತೆ ಯಾವಾತನು ಶಿವಲಿಂಗದ ವಿಷಯದಲ್ಲಿ ತನ್ನಂ ಸ್ತ್ರೀಯನ್ನಾಗಿ ಭಾವಿಸುತ್ತಾ ಶಿವಲಿಂಗಕ್ಕಿಂತಲೂ

ಭಿನ್ನವಾದ ದೇವತಾಂತರದಲ್ಲಿ ಪರಾಙ್ಮುಖತೆಯುಳ್ಳವನಾಗಿರುವನೋ ಅತ
ನೇ ಶರಣನೆನಿಸುವನು.

ಅವ. ಶಿವಲಿಂಗಾಸಕ್ತನೇ ಶರಣನೆಂದು ಅನೇಕ ದೃಷ್ಟಾಂತ
ಪೂರ್ವಕವಾಗಿ ನಿರೂಪಿಸುತ್ತಾನೆ.

ಮೂ ॥ ಪರಿಜ್ಞಾತೇಶಿವೇಸಾಕ್ಷಾತ್ಕೋವಾನ್ಯಮಭಿಕಾಂಕ್ಷತಿ ।
ನಿಧಾನೇಮಹತಿಪ್ರಾಪ್ತೇಕಃಕಾಚಂಯಾಚತೇನ್ಯತಃ ॥ ೪ ॥

ಟೀ ॥ ಪರಶಿವನು ಪ್ರತ್ಯಕ್ಷವಾಗಿ ಪ್ರಸಿದ್ಧವಾದ ಶ್ರುತ್ಯಾದಿ
ಪ್ರಮಾಣಂಗಳಿಂ ಬ್ರಹ್ಮಾದಿಗಳಿಗಿಂತಲೂ ದೊಡ್ಡವನೆಂದು ತಿಳಿಯಲ್ಪಡು
ತ್ತಿರಲಾಗಿ ಅನರ್ಘ್ಯವಾದ ನಿಧಿಯನ್ನು ಪಡೆದವನು ಮತ್ತೊಬ್ಬನಿಂದ
ಗಾಜಿನಮಣಿಯನ್ನು ಯಾಚಿಸದವನಹಾಗೆ ಮತ್ತೊಬ್ಬ ದೇವರನ್ನು ಬಯ
ಸದಿರುವನೇ ಶರಣನೆನಿಸಿಕೊಳ್ಳುವನು.

ಮೂ ॥ ಶಿವಾನಂದಂ ಸಮಾಸಾದ್ಯಕೋವಾನ್ಯಮುಪತಿಷ್ಠತೇ ॥
ಗಂಗಾಮೃತಂಪರಿತ್ಯಜ್ಯಕಃಕಾಂಕ್ಷೇನ್ಮೃಗತೃಷ್ಣಿಕಾಂ ॥ ೫ ॥

ಟೀ ॥ ಪ್ರಾಪ್ತವಾದ ಗಂಗಾಜಲವಂ ಬಿಟ್ಟು ಯಾವನು ಮರೀಚಿ
ಕಾಜಲವಂ ಬಯಸುವನು. ಹಾಗೆ ಶಿವಲಿಂಗ ಸುಖವಂಹೊಂದಿದ ಯಾವ
ಶರಣನು ತಾನೇ ದೇವತಾಂತರವನ್ನಾಶ್ರಯಿಸುವನು. ಬೇರೆ ದೇವತೆಗಳ
ಉಪಾಸನೆಯಲ್ಲಿ ವಿಮುಖನಾದವನೇ ಶರಣನೆಂದು ತಾತ್ಪರ್ಯ.

ಮೂ ॥ ಸಂಸಾರತಿಮಿರಚ್ಛೇದೇ ವಿನಾಶಂಕರಭಾಸ್ಕರಂ ॥
ಪ್ರಭವಂತಿಕಥಂದೇವಾಃಖದ್ಯೋತಾಇವದೇಹಿನಾಂ ॥ ೬ ॥

ಟೀ ॥ ಸೂರ್ಯನು ಹೊರತಾಗಿ ಅಲ್ಪಪ್ರಕಾಶವುಳ್ಳ ಮಿಂಚುಹುಳ
ಗಳು ಹ್ಯಾಗೆ ಅಂಧಕಾರವನ್ನು ಕೆಡಿಸಲಾರವೋ ಹಾಗೆ ಪ್ರಾಣಿಗಳಿಗೆ
ಸಂಸಾರವೆಂಬ ಕತ್ತಲೆಯಂ ಕೆಡಿಸುವಲ್ಲಿ ಶಂಕರನೆಂಬ ಭಾಸ್ಕರನೇ ಶಕ್ತನ
ಲ್ಲದೆ, ಬ್ರಹ್ಮಾದಿದೇವತೆಗಳೆಂಬ ಮಿಂಚುಹುಳಗಳು ಶಕ್ತರಲ್ಲವೆಂದು ತಿಳಿ
ದು, ಶಿವೇತರ ದೇವತೆಗಳಲ್ಲಿ ವಿಮುಖನಾದವನೇ ಶರಣನೆನಿಸುವನು.

ಮೂ ॥ ಸಂಸಾರಾರ್ತಶ್ಶಿವಂಯಾಯಾದ್ಬ್ರಹ್ಮಾದ್ಯೈಃಕಿಂಫಲಂಸುರೈಃ ।
ಚಕೋರಸ್ತೃಷಿತಃಪಶ್ಯೇಚ್ಚಂದ್ರಂಕಿಂತಾರಕಾಅಪಿ ॥ ೭ ॥

ಟೀ ॥ ನೀರಡಿಕೆಯಂ ಹೊಂದಿದ ಚಕೋರಪಕ್ಷಿಯು ಚಂದ್ರನ
ನ್ನು ನೋಡುವದಲ್ಲದೆ ನಕ್ಷತ್ರಗಳನ್ನು ಹ್ಯಾಗೆ ನೋಡುವದಿಲ್ಲವೋ ಹಾಗೆ
ಸಂಸಾರದಿಂ ಬಳಲಿದ ಪ್ರಾಣಿಗೆ ಶಿವನು ಹೊರ್ತು ಬ್ರಹ್ಮಾದಿಗಳಿಂದೇನು

ಫಲವೆಂದು ಅವರುಗಳಲ್ಲಿ ವಿಮುಖನಾಗಿ, ಶಿವನಲ್ಲಿಯೇ ಎರಗಿದ ಚಿತ್ತವು ಳ್ಳವನೇ ಶರಣನೆನಿಸುವನು.

ಮೂ ॥ ಶಿವಾದನ್ಯತ್ರವಿಜ್ಞಾನೇ ವೈಮುಖ್ಯಂಯಸ್ಯಸುಸ್ಥಿರಂ ॥
ತದಾಸಕ್ತಾ ಮನೋವೃತ್ತಿಸ್ತಮಾಹುಶ್ಶರಣಾಭಿಧಂ ॥ ೯ ॥

ಟೀ ॥ ಶಿವಲಿಂಗಕ್ಕಿಂತಲೂ ಅನ್ಯವಾದ ದೇವತಾ ವಿಶೇಷವನ್ನು ತಿಳಿಯುವವದರಲ್ಲಿ ಯಾವಾಗಲೂ ವಿಮುಖವಾದ ಯಾವಾತನ ಮನೋವ್ಯಾಪಾರವು ಶಿವಲಿಂಗದಲ್ಲಿ ಏಕವಾಗಿರುವದೋ ಆತನನ್ನೇ ಶರಣನನ್ನಾಗಿ ಹೇಳುತ್ತಿಹರು.

ಮೂ ॥ ಪತಿವ್ರತಾಯಾಯಚ್ಛೀಲಂಪತಿರಾಗಾತ್ಪ್ರಶಸ್ಯತೇ ॥
ತಥಾಶಿವಾನುರಾಗೇಣ ಭಕ್ತಶ್ಶರಣಉಚ್ಯತೇ ॥ ೧೦ ॥

ಟೀ ॥ ಪತಿವ್ರತೆಯಾದ ಯಾವ ಸ್ತ್ರೀಯ ಪಾತಿವ್ರತ್ಯವು ತನ್ನ ಪತಿಯ ಮೇಲಣ ಪ್ರೇಮಾತಿಶಯದಿಂದ ಹ್ಯಾಗೆ ಕೊಂಡಾಡಲ್ಪಡತಕ್ಕದ್ದಾಗಿರುವದೋ ಹಾಗೆ ದೇವತಾಂತರದಲ್ಲಿ ಪ್ರೀತಿಲೇಶವೂ ಇಲ್ಲದೆ, ಶಿವನ ಮೇಲಣ ಪ್ರೀತಿಯಂ ಬಿಡದ ಭಕ್ತನೇ ಶರಣನೆನಿಸುವನು.

ಮೂ ॥ ಪತಿಂವಿನಾಯಥಾಸ್ತ್ರೀಣಾಂಸೇವಾನ್ಯಸ್ಯತುಗರ್ಹಿತಾ ॥
ಶಿವಂವಿನಾತಥಾನ್ಯೇಷಾಂ ಸೇವಾಕಿಂವಾಕೃತಾತ್ಮನಾಂ ॥ ೧೧ ॥

ಟೀ ॥ ಸ್ತ್ರೀಯರಿಗೆ ತಮ್ಮ ಪತಿಸೇವೆ ಹೊರತು ಪರಪುರುಷರ ಸೇವೆಯು ಹ್ಯಾಗೆ ನಿಂದಿಸಲ್ಪಡುವದೋ ಹಾಗೆಯೇ ಕೃತಕೃತ್ಯರಾದ ಶರಣರಿಗೆ ಶಿವಲಿಂಗಕ್ಕಿಂತಲೂ ಇತರರಾದ ವಿಷ್ಣ್ವಾದಿ ದೇವತೆಗಳಂಸೇವಿಸುವದು ನಿಂದಾಸ್ಪದವಾದದ್ದು.

ಮೂ ॥ ಶಿವಾತ್ಮಬೋಧೈಕರತಸ್ಥಿರಾಶಯಶ್ಶಿವಂಪ್ರಪನ್ನೋ ಜಗತಾಮಧೀಶ್ವರಂ ॥ ಶಿವೈಕನಿಷ್ಠಾಹಿತಶೀಲಭೂಷಣಶ್ಶಿವೈಕ್ಯವಾನೇಷ ಹಿಕಥ್ಯತೇಬುಧೈಃ॥ ॥ ೧೨ ॥

ಟೀ ॥ ಲಿಂಗಾಂಗಜ್ಞಾನದಲ್ಲಿಯೇ ನಿಷ್ಠನಾಗಿಯೂ, ಸ್ಥಿರವಾದ ಮನಸ್ಸುಳ್ಳವನಾಗಿಯೂ, ಜಗತ್ಪತಿಯಾದ ಶಿವನನ್ನು ಮರೆಹೊಕ್ಕವನಾಗಿಯೂ, ಶಿವಲಿಂಗವೊಂದರಲ್ಲಿ ನಿಷ್ಠೆಯೆಂಬ ಸದಾಚಾರದಿಂದಲಂಕರಿಸಲ್ಪಟ್ಟವನಾಗಿಯೂ, ಇರುವ ಶರಣನೇ ಶಿವಲಿಂಗೈಕ್ಯನೆಂದು ಹೇಳಲ್ಪಡುತ್ತಾನೆ.

ಇಂತು ಪರಶಿವಪ್ರಸಾದಾಸಾದಿತ ನಿರ್ಮಲಜ್ಞಾನ ವೈಭವನಾದ

ನಿರಾಭಾರ ವೀರಶೈವ ಸಾಮ್ರಾಜ್ಯ ಧುರಂಧರನಾದ ಶ್ರೀತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ವೀರಶೈವಪ್ರದೀಪಿಕೆಯೊಳ್ ಷಟ್ಸ್ಥಲಪ್ರಕರಣದಲ್ಲಿ ಶರಣಸ್ಥಲ ನಿರೂಪಣವು ಮುಗಿದುದು.

---

## ಐಕ್ಯಸ್ಥಲನಿರೂಪಣಂ ಪ್ರಾರಭ್ಯತೇ.

ಮೂ ॥ ಪ್ರಾಣಲಿಂಗಾದಿಯೋಗೇನ ಸುಖಾತಿಶಯಮೀಯಿವಾನ್ ॥
ಶರಣಾಖ್ಯಶ್ಶಿವೇನೈಕ್ಯಭಾವನಾದೈಕ್ಯ ಉಚ್ಯತೇ ॥ ೧ ॥

ಟೀ ॥ ಇಷ್ಟಪ್ರಾಣ ಭಾವಲಿಂಗಪೂಜಾಧ್ಯಾನದಿಂ ಸುಖಾತಿಶಯವಂ ಪಡೆದ ಶರಣನೇ ಶಿವಯೋಗದಿಂದುಂಟಾದ ಐಕ್ಯಚಿಂತನೆಯಿಂ ದೈಕ್ಯನೆನಿಸುವನು.—ವಿಚಾರ — ಲಿಂಗಾತ್ಮರಾದೀರ್ವರೂ ಚಿದೇಕರೂಪರಾದ ಕಾರಣದಿಂದ ಅವರ್ಗೆ ಭೇದವಂ ಕಲ್ಪಿಸಕೂಡದು. ಚಿದ್ರೂಪತ್ವದಲ್ಲಿ ಭೇದವಿಲ್ಲದಿದ್ದರೂ ವ್ಯಕ್ತಿಭೇದವುಂಟಾಗಲಿ ಎಂದರೆ;—ಚಿದ್ರೂಪನಾದಾತ್ಮನು ಸ್ವಪ್ರಕಾಶನೋ ಪರಿಮಿತಪ್ರಕಾಶನೋ? ಸ್ವಪ್ರಕಾಶನಾದಲ್ಲಿ ಪರಾಧೀನಪ್ರಕಾಶತೆಯಿಂ ಘಟಪಟಾದಿಗಳಂತೆ ಜಡನಪ್ಪನು. ಪರಿಮಿತಪ್ರಕಾಶನಾದಲ್ಲಿ ಘಟಪಟಾದಿ ಪ್ರಕಾಶಗಳಂತೆ ಸ್ವವಿಷಯಮಾತ್ರ ಪ್ರಕಾಶಿತೆಯಿಂ ಪರವಿಷಯ ಪರಸ್ವರೂಪದಲ್ಲಿ ಅಂಧ ಬಧಿರಪ್ರಾಯನಾಗಿ ಚೈತ್ರಂ ಮೈತ್ರನಿಂಭಿನ್ನನು ; ಮೈತ್ರಂ ಚೈತ್ರನಿಂಭಿನ್ನನು ಎಂಬ ಜ್ಞಾನವು ಘಟಿಸದೆ ಹೋಗುವದು. ಹೀಗೆ ಸ್ವಪ್ರಕಾಶತ್ವ ಪರಿಮಿತಪ್ರಕಾಶತ್ವಗಳೆರಡೂ ಸಂಭವಿಸುವದಿಲ್ಲವಾಗಿ ಪೂಜ್ಯ ಪೂಜಕಭಾವಾದಿ ಸಂಪತ್ತಿಗೋಸ್ಕರ, ಸ್ವಾತಂತ್ರ್ಯದಿಂ ಕಲ್ಪಿಸಲ್ಪಟ್ಟ ಭೇದವನ್ನಂಗೀಕರಿಸಬೇಕಾದುದರಿಂ ಮುಖ್ಯಪ್ರಕಾಶವೊಂದೇಸರಿ. ಸರ್ವಜ್ಞತ್ವ ಕಿಂಚಿಜ್ಞತ್ವಭೇದಂ ಮಾಯಾಕೋಟಿಪ್ರವಿಷ್ಟವಾಗಿರ್ಪುದೆಂಬುದರಿಂ ಜ್ಞಾನತ್ವ, ಕರ್ತೃತ್ವವೇ ಸ್ವಾಭಾವಿಕವು. ಅಲ್ಲದಿರ್ದೊಡೆ ಆತ್ಮಂಗೆ ಜಡತ್ವವುಂಟಾಗುವದೆಂಬ ಯುಕ್ತಿಕಲಾಪದಿಂದೇಕತ್ವಚಿಂತನೆಯಿಂದೈಕ್ಯ ನೆನಿಸುವನೆಂದು ತಾತ್ಪರ್ಯ.

ಮೂ ॥ ವಿಷಯಾನಂದಕಣಿಕಾನಿಸ್ಪೃಹೋನಿರ್ಮಲಾಶಯಃ ॥
ಶಿವಾನಂದಮಹಾಸಿಂಧು ಮಜ್ಜನಾದೈಕ್ಯ ಉಚ್ಯತೇ ॥ ೨ ॥

ಟೀ ॥ ಏಕಮೇವತತ್ಪ್ರತ್ಯವಿಕಲ್ಪೋನಾವಿಕಲ್ಪೋತ್ರ ಕಾಚನಭಿದಾಸ್ತಿ ನೈವಾತ್ರ ಕಿಂಚನಭಿದಾಸ್ತ್ಯತ್ರ ಭಿದಾವಿಂವ ಮನ್ಯಮಾನ ಕ್ಷತಧಾಸಹಸ್ರಧಾಭಿನ್ನೋ ಮೃತ್ಯೋರ್ಮೃತ್ಯು ಮಾಪ್ನೋತಿತದೇತದದ್ವಯಂ ಸ್ವಪ್ರಕಾಶಂ ,, ಇತ್ಯುತ್ತರತಾಪನೀಯ ಶ್ರುತಿಪ್ರಮಾಣದಿಂ ಶಬ್ದಾದಿ ವಿಷಯಗಳಿಂದುಂಟಾದ ನಿತ್ಯವಲ್ಲದ ಸುಖಲೇಶಗಳಲ್ಲಿ ವಿರಕ್ತನಾಗಿ ನಿರ್ಮಲ ಚಿತ್ತವುಳ್ಳಾತನು ಶಿವಾನಂದಮಹಾಸಮುದ್ರದಲ್ಲಿ ತಾದಾತ್ಮ್ಯವನು ಪ್ರವೇಶದತ್ತಣಿಂ ಲಿಂಗೈಕ್ಯಸ್ಥಲ ಶಬ್ದವಾಚ್ಯನಾಗುವನು.

ಮೂ ॥ ನಿರ್ಧೂತಮಲಸಂಬಂಧ ನಿಷ್ಕಳಂಕಮನೋಗತಿಃ ।
ಶಿವೋಹಮಿತಿಭಾವೇನ ನಿರೂಢೋಹಿಶಿವೈಕ್ಯತಾಂ ॥ ೭ ॥

ಟೀ ॥ ಲಿಂಗೈಕ್ಯವು ಎಂಥಾವನಿಗೆ ಸಿದ್ಧಿಸುವದೆಂದರೆ;—ಆಣವಾದಿಮಲತ್ರಯದ ಸಂಬಂಧವಂ ಕೊಡಹುವದರಿಂ ಕಳಂಕಿಲ್ಲದ ಮನೋವ್ಯಾಪಾರವುಳ್ಳವನು ಶಿವೋಹಂ ಎಂಬ ಪರಾಮರ್ಶದಿಂ ಲಿಂಗೈಕ್ಯವಂ ಪಡೆಯುವನು.

ಮೂ ॥ ಯಶ್ಶಿವೈಕ್ಯಂಸಮಾಪನ್ನಶ್ಚಿದಾನಂದಸ್ವರೂಪವಾನ್ ।
ನಪಶ್ಯತಿಜಗಜ್ಜಾಲಂ ಮಾಯಾಕಲ್ಪಿತವೈಭವಂ ॥ ೮ ॥

ಟೀ ॥ ಚಿದಾನಂದಸ್ವರೂಪವುಳ್ಳವನೂ ಶಿವನೊಡನೆ ಏಕತ್ವವಂ ಪಡೆದವನೂ ಆದ ಐಕ್ಯನಿಗೆ ಮಾಯೆಯಿಂ ಕಲ್ಪಿಸಲ್ಪಟ್ಟ ವಿಸ್ತಾರವುಳ್ಳ ಜಗತ್ಸಮೂಹವು ಕಾಣುವದಿಲ್ಲ. ಎಂದರೆ,—ಜೀವಭ್ರಾಂತಿಯಿಂ ಬಿಟ್ಟು ಶಿವಲಿಂಗೈಕ್ಯಸಿದ್ಧಿಯಿಂ ಚಿದಾನಂದರೂಪನಾದ ಆರೂಢನಾದವನು;—ಇದು ಜಡವು ಇದು ಚೇತನವು ಎಂಬ ಭೇದವಡಗಿ ಪ್ರಪಂಚವನ್ನೆಲ್ಲಾ ಶಿವಮಯವಾಗಿನೋಡುವನೆಂದು ತಾತ್ಪರ್ಯ.

ಮೂ ॥ ಬ್ರಹ್ಮಾಂಡಬುದ್ಬುದೋದ್ಭೇದ ವಿಜೃಂಭೀತತ್ತ್ವವೀಚಿಮಾನ್ ।
ಮಾಯಾಸಿಂಧುರ್ಲಯಂಯಾತಿ ಶಿವೈಕ್ಯೇಬಡಬಾನಲೇ ॥ ೯ ॥

ಟೀ ॥ ಬ್ರಹ್ಮಾಂಡವೆಂಬ ಬುದ್ಬುದಂಗಳಾವಿರ್ಭಾವದಿಂ ಹೆಚ್ಚುತ್ತಿದ್ದ ಷಟ್ತ್ರಿಂಶತ್ತತ್ವಗಳೆಂಬ ತೆರೆಗಳುಳ್ಳ ಮಾಯಾಸಮುದ್ರವು ಶಿವಲಿಂಗೈಕ್ಯವೆಂಬ ಬಡಬಾಗ್ನಿಯಲ್ಲಿ ಲಯವಂ ಪಡೆಯುತ್ತಿಹುದು. ಅದೇ ಕಾರಣದಿಂ ಪ್ರಪಂಚದರ್ಶನವಿಲ್ಲಂ ಪ್ರಪಂಚಕ್ಕೆ ಮಾಯೆಯೇ ಉಪಾದಾನ ಕಾರಣವಾದುದರಿಂ ತನ್ನಾಶಮಾರ್ಗವಾಗಿ ತತ್ಕಾರ್ಯವಿಲ್ಲೆಂಬುದನಂಗೀಕರಿಸಬೇಕೆಂದು ತಾತ್ಪರ್ಯವು.

ಮೂ॥ ಮಾಯಾಶಕ್ತಿತಿರೋಧಾನಾಚ್ಛಿವೇಭೇದ ವಿಕಲ್ಪನಾ।
ಆತ್ಮನಸ್ತದ್ವಿನಾಶೇತು ನಾದ್ವೈತಾತ್ಕಿಂಚಿದಿಷ್ಯತೇ॥ ೬॥

ಟೀ॥ ಶಿವನಲ್ಲಿ ಮಾಯಾಪ್ರಸರಣದತ್ತಣಿಂ ಜೀವನಿಗೆ ಭೇದಜ್ಞಾನವುಂಟಾಗುವದು. ಆ ಮಾಯಾಪ್ರಸರಣಕ್ಕೆ ನಾಶಂ ಸಮನಿಸಲಾಗಿ ಅದ್ವೈತವನ್ನು ಬಿಟ್ಟು, ಮತ್ತಾವದೂ ಇಚ್ಛೈಸಲ್ಪಡುವದಿಲ್ಲ. ಆದಕಾರಣ ಶಿವಾದ್ವೈತಸಿದ್ಧಿಯುಳ್ಳವನೇ ಶಿವೈಕ್ಯನೆಂದು ತಾತ್ಪರ್ಯವು.

ಅವ. "ಅಹಮೇಕೋನಮೇಕಶ್ಚಿನ್ನಾಹಮನ್ಯಸ್ಯಕಸ್ಯಚಿತ್॥ ನ ತಂಪಶ್ಯಾಮಿಯಸ್ಯಾಹಂ ನತಂಪಶ್ಯಾಮಿಯೋಮಮ,, ಎಂಬ ದೇವೀಕಾಲೋತ್ತರ ವಚನಾನುಸಾರವಾಗಿ ಶಿವಲಿಂಗೈಕ್ಯಂಗೆ ಪ್ರಸಿದ್ಧವಾದ ಶಿವಾದ್ವೈತವಂ ಪೇಳ್ದಪಂ.

ಮೂ॥ ಪಶುತ್ವಂಚ ಪತಿತ್ವಂಚ ಮಾಯಾಮೋಹವಿಕಲ್ಪಿತಂ॥
ತಸ್ಮಿನ್ಪ್ರಲಯಮಾಪನ್ನೇ ಕಃಪಶುಃಕೋನುವಾಪತಿಃ॥ ೭॥

ಟೀ॥ ಪಶುತ್ವವೆಂಬುವದೂ, ಪತಿತ್ವವೆಂಬುವದೂ, ಮಾಯಾರೂಪವಾದ ಅಜ್ಞಾನದಿಂದುಂಟುಮಾಡಲ್ಪಟ್ಟಿತು. ಆ ಮಾಯೆ ನಷ್ಟವಾಗಲಾಗಿ ಪಶುವೂ ಇಲ್ಲ. ಪತಿಯೂ ಇಲ್ಲ.

ಅವ. ಈ ಸಂಸಾರವು ಭೇದವೆಂಬ ಹುತ್ತವನ್ನಾಶ್ರೈಸಿದ ಸರ್ಪನಂತಿರುವ ಕಾರಣದಿಂದಿದಕ್ಕೆ ಔಷಧವಂಹೇಳುತ್ತಾನೆ:—

ಮೂ॥ ಘೋರಸಂಸಾರಸರ್ಪಸ್ಯ ಭೇದವಲ್ಮೀಕಶಾಯಿನಃ।
ಬಾಧಕಂಪರಮಾದ್ವೈತ ಭಾವನಾಪರಮೌಷಧಂ॥ ೮॥

ಟೀ॥ ಜಡಾಜಡಭೇದ, ಜೀವಾಜೀವಭೇದ, ಜಡೇಶ್ವಭೇದ, ಜೀವೇಶ್ವರಭೇದ, ಈ ಪ್ರಕಾರವಾದ ಭೇದಜ್ಞಾನವೆಂಬ ಹುತ್ತದಲ್ಲಿ ಮಲಗಿರುವ ಜನನ ಮರಣಾದಿಗಳಿಂ ಮಹಾಭಯಂಕರವಾದ ಸಂಸಾರವೆಂಬ ಸರ್ಪಕ್ಕೆ ಘೃತಕೀಟನ್ಯಾಯದಿಂ ಜಡಚೈತನ್ಯೈಕ ಭಾವನೆಯೇ ಬಾಧಕವಾದ ಪರಮೌಷಧವಾಗಿರುವದು.

ಮೂ॥ ತಸ್ಮಾದದ್ವೈತಭಾವಸ್ಯ ಸದೃಶೋನಾಸ್ತಿಯೋಗಿನಾಂ। ಉಪಾಯೋಘೋರಸಂಸಾರ ಮಹಾತಾಪನಿವೃತ್ತಯೆ॥ ೯॥

ಟೀ॥ ಅದಕಾರಣದಿಂದ ಶಿವಯೋಗಿಗಳಾದವರಿಗೆ ಕ್ರೂರವಾದ ಜನನ ಮರಣಾತ್ಮಕವಾದ ಸಂಸಾರದಲ್ಲಿ ತಾಪತ್ರಯ ನಿವೃತ್ತಿಗೋಸ್ಕರ ಅದ್ವೈತಭಾವನೆಗೆ ಸಮಾನವಾದುಪಾಯವಿಲ್ಲ.

ಮೂ॥ ಅದ್ವೈತಭಾವನಾಜಾತಂ ಕ್ಷಣಮಾತ್ರೇಪಿಯತ್ಸುಖಂ ।
ತತ್ಸುಖಂಕೋಟಿವರ್ಷೇಣ ಪ್ರಾಪ್ಯತೇನೈವಭೋಗಿಭಿಃ ॥ ೧೦ ॥

ಟೀ॥ ಪೂರ್ವೋಕ್ತ ಮೈತ್ರೇಯಶ್ರುತ್ಯನುಸಾರವಾಗಿ ಒಂದು ಕ್ಷಣ ಕಾಲಮಾತ್ರದಲ್ಲಿ ಶಿವಾದ್ವೈತಭಾವನೆಯಿಂದುಂಟಾದ ಸೌಖ್ಯಮಂ ಕೋಟಿವರ್ಷಗಳಲ್ಲಿ ರಾಜ್ಯಭೋಗಗಳನ್ನನುಭವಿಸಿದ ಪೃಥ್ವೀಪತಿಗಳು ಕೂಡ ಪಡೆಯಲಾರರು.

ಅವ. ಆವಿಧವಾದಾನಂದವೇ ಮೋಕ್ಷವೆಂದು ನಿರೂಪಿಸುತ್ತಾನೆ.

ಮೂ॥ ಚಿತ್ತವೃತ್ತಿಸಮಾಲೀನ ಜಗತಶ್ಶಿವಯೋಗಿನಃ ।
ಶಿವನಂದಪರಿಸ್ಫೂರ್ತಿರ್ಮುಕ್ತಿರಿತ್ಯಭಿಧೀಯತೇ ॥ ೧೧ ॥

ಟೀ॥ ಶಿವಾದ್ವೈತಭಾವನೆಯಿಂ ಚಿತ್ತವೃತ್ತಿಯಲ್ಲಿಅಡಗಿದ ಪ್ರಪಂಚವುಳ್ಳ ಶಿವಯೋಗಿಗೆ ಶಿವಾನಂದಾವಿರ್ಭಾವವೇ ಮೋಕ್ಷವೆಂದು ಹೇಳಲ್ಪಡುವದರಿಂದ ಅಂಥಾ ಸ್ಥಿತಿಯನ್ನಳವಡಿಸಿಕೊಂಡು ತೆರೆಯಡಗಿದ ಸಮುದ್ರದಂತೆಯೂ, ಮೇಘ ಸಂಚಾರವಡಗಿದ ಅಂತರಿಕ್ಷದಂತೆಯೂ, ನಿಶ್ಚಲನಾಗಿರುವನೇ ಐಕ್ಯನೆಂದು ಸಿದ್ಧಾಂತವು.

---

ಇಂತು ಐಕ್ಯಸ್ಥಲನಿರೂಪಣವು.

ಅವ. ಪೂರ್ವೋಕ್ತವಾದ ಷಟ್ಸ್ಥಲವನ್ನೇ ಮತ್ತೊಂದು ಪ್ರಕಾರವಾಗಿ ಹೇಳುತ್ತಿದ್ದಾನೆ.

ಮೂ॥ ಸರ್ವಜ್ಞತಾ ತೃಪ್ತಿರನಾದಿಬೋಧಸ್ಸ್ವತಂತತಾನಿತ್ಯಮಲುಪ್ತಶಕ್ತಿಃ । ಅನಂತಶಕ್ತಿಶ್ಚವಿಭೋರ್ವಿಧಿಜ್ಞಾಃ ಷಡಾಹುರಂಗಾನಿಚಷಟ್ಸ್ಥಲಾನಿ ॥ ೧ ॥

ಟೀ॥ ಪರಮೇಶ್ವರನ ಸರ್ವಜ್ಞತ್ವವು, ನಿತ್ಯತೃಪ್ತಿಯು, ಅನಾದಿ ಬೋಧೆಯು, ಸ್ವತಂತ್ರತ್ವವು, ಎಲ್ಲಾಗಳೂ ಕೇಡಿಲ್ಲದ ಸಾಮರ್ಥ್ಯವು, ಅನೇಕವಿಧ ಶಕ್ತಿಯು ಎಂಬ ಷಡುಗಗಳೇ ಷಟ್ಸ್ಥಲಗಳೆಂದು ಸ್ಥಲವಿಧಾನವನ್ನು ಬಲ್ಲವರು ಹೇಳುತ್ತಿರುವರು.

ಮೂ॥ ಏತದಪ್ಯಪರೇಪ್ರಾಹು ಷ್ಷಟ್ಸ್ಥಲಂಸ್ಥಲವಿತ್ತಮಾಃ ।
ಭಕ್ತ್ಯಾದಿಜ್ಞಾನಪರ್ಯಂತಂ ಸಾಧ್ಯಸಾಧಕಭಾವತಃ ॥ ೨ ॥

ಟೀ॥ ಸ್ಥಲಗಳನ್ನು ತಿಳಿದ ಮತ್ತೆ ಕೆಲವರು ಮಹಾತ್ಮರು ಭಕ್ತಿಯೇಮೊದಲಾದ ಜ್ಞಾನವೇ ಕಡೆಯಾಗಿವುಳ್ಳ ಭಾವಗಳೇ ಸಾಧಿಸಲ

ಯೋಗ್ಯವಾದ ಬ್ರಹ್ಮಕ್ಕೆ ಸಾಧನವಾದ ಷಟ್ಸ್ಥಲಗಳೆಂದು ಹೇಳುವರು. ಅವು ಯಾವುಗಳೆಂದರೆ.—

ಮೂ॥ ಭಕ್ತಿಃಕರ್ಮಕ್ಷಯೋಬುದ್ಧಿರ್ವಿಚಾರೋದರ್ಪಸಂಕ್ಷಯಃ।
ಸಮ್ಯಕ್‌ಜ್ಞಾನಮಿತಿಪ್ರಾಜ್ಞೈಃಸ್ಥಲಷಟ್ಕಮುದಾಹೃತಂ ॥೩॥

ಟೀ॥ ಭಕ್ತಿಯು, ಸಂಚಿತಾಗಾಮಿ ಪ್ರಾರಬ್ಧ ರೂಪವಾದ ಕರ್ಮತ್ರಯದ ನಾಶವು, ಶಿವಜ್ಞಾನವನುಳ್ಳ ಬುದ್ಧಿಯು, ಶಾಸ್ತ್ರಪರ್ಯಾಲೋಚನೆಯಿಂ ನಿತ್ಯಾನಿತ್ಯ ವಿಚಾರವು, ನಿರಹಂಕಾರವು, ಸಮ್ಯಗ್ಜ್ಞಾನವು, ಎಂಬಾರು ಗುಣಗಳನ್ನೇ ಕ್ರಮವಾಗಿ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂಬ ಆರು ಸ್ಥಲಗಳೆಂದು ಪ್ರತಿಪಾದಿಸಲು ಯೋಗ್ಯಗಳನ್ನಾಗಿ ಬಲ್ಲವರುಗಳು ಹೇಳುತ್ತಾರೆ.

ಮೂ॥ ಕ್ರಿಯಯೋತ್ತಮಯಾಭಕ್ತಿಃ ಪ್ರಾಪ್ಯತೆ ಶಿವಚಿಂತಕೈಃ॥
ಭಕ್ತ್ಯಾಕರ್ಮಕ್ಷಯಸ್ತಸ್ಮಾದಮಲಾಧಿಷಣಾಭವೇತ್ ॥೪॥

ಟೀ॥ ಶಿವನಂಧ್ಯಾನಿಸುವವರುಗಳು ಉತ್ತಮವಾದ ಆಚಾರವನ್ನನುಷ್ಠಿಸುವದರಿಂದ ಭಕ್ತಿಯನ್ನೈದುವರು. ಆಭಕ್ತಿಯಿಂ ಸಂಚಿತಾಗಾಮಿ ಕರ್ಮಕ್ಷಯವಹುದು. ಆ ಕರ್ಮಕ್ಷಯವಾದುದರಿಂ ನಿರ್ಮಲವಾದ ಬುದ್ಧಿಯುಂಟಾಗುವದು.

ಮೂ॥ ಧಿಯಾಪಸ್ತುವಿಚಾರಸ್ಸ್ಯಾದ್ವಿಚಾರಾದ್ದರ್ಪಸಂಕ್ಷಯಃ।
ತಸ್ಮಾದ್ಜ್ಞಾನಂತತೋಮೋಕ್ಷೋನಮೋಕ್ಷಾದ್ವಿದ್ಯತೆಪದಂ ॥೫॥

ಟೀ॥ ಆ ನಿರ್ಮಲಬುದ್ಧಿಯಿಂ ಶಿವತತ್ವವಿಚಾರವುಂಟಾಗುವದು ಆ ಶಿವತತ್ವವಿಚಾರದ ದೆಸೆಯಿಂ ಜ್ಞಾನವಹುದು. ಆ ಸಮ್ಯಕ್‌ಜ್ಞಾನದಿಂ ಮೋಕ್ಷವು ಸಮನಿಸುವದು. ಆ ಮೋಕ್ಷಕ್ಕಿಂತಲೂ ಅಧಿಕವಾದದ್ದು ಯಾವದೂ ಇಲ್ಲ.

ಮೂ॥ ಯಸ್ಯೈವಂಕ್ರಮವಿಜ್ಞಾನಂದೇಶಿಕಸ್ಯಪ್ರಸಾದತಃ।
ಜನ್ಮಾಂತರಗತಾತ್ಪುಣ್ಯಾಜ್ಜಾಯತೆಸಸದಾಶಿವಃ॥ ೬ ॥

ಟೀ॥ ಬಳಿಕೀ ಷಟ್ಸ್ಥಲಕ್ರಮಜ್ಞಾನವು ಯಾತರಿಂದೊರಕುವದು ಅದರಿಂದೇನಾಗುವದು ಎಂದರೆ;—ಪೂರ್ವಜನ್ಮದಲ್ಲಿ ಮಾಡಿದ ಪುಣ್ಯದ ದೆಸೆಯಿಂದಾವನಾನೊರ್ವಂಗೆ ಈ ಪ್ರಕಾರವಾಗಿ ಷಟ್ಸ್ಥಲಜ್ಞಾನವು ಶ್ರೀಗುರುವಿನ ಅನುಗ್ರಹದಿಂದ ದೊರೆಯುವದು. ಈ ಷಟ್ಸ್ಥಲಜ್ಞಾನಸಂಪನ್ನನಾದವನು ಸಾಕ್ಷಾದೀಶ್ವರನಾಗುವನು.

ಮೂ ॥ ಯಾನ್ಯಭ್ಯಸ್ಯತತಃಪುಂಸೋ ಮುಕ್ತಿಃಪಾಣಿತಲೆಸ್ಥಿತಾ ।
ನತಸ್ಯದುರ್ಲಭಂಕಿಂಚಿತ್ರಿಷುಲೋಕೇಷುವಿದ್ಯತೇ ॥ ೭ ॥

ಟೀ ॥ ಈ ಷಟ್ಸ್ಥಲಂಗಳನಭ್ಯಾಸಿಸುವ ಪುರುಷನಿಗೆ ಮೋಕ್ಷವು ಅಂಗೈಯುಲ್ಲಿರುವದು. ಆ ಷಟ್ಸ್ಥಲಜ್ಞಾನಿಗೆ ಮೂರುಲೋಕಗಳಲ್ಲಿಯೂ ಕಿಂಚಿತ್ತಾದರೂ ದುರ್ಲಭವಾದದ್ದಿಲ್ಲವು. ಆತಂಗೆ ಸರ್ವವೂ ಸಾಧ್ಯವೆಂದರ್ಥ.

ಮೂ ॥ ಷಟ್ಸ್ಥಲಾಭ್ಯಾಸಯೋಗೇನ ಮುಕ್ತಿಸ್ಸಾಯುಜ್ಯಲಕ್ಷಣಾ ।
ಪ್ರಾಪ್ಯತೇಶಿವಭಕ್ತೈಶ್ಚ ನಾನ್ಯೈಸ್ತ್ರೈವರ್ಗರತೈರ್ಜನೈಃ ॥೮॥

ಟೀ ॥ ಈ ಷಟ್ಸ್ಥಲಂಗಳನಭ್ಯಾಸಿಸುವ ಉಪಾಯದಿಂ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯವೆಂಬ ಮುಕ್ತಿತ್ರಯಮಂ ಮೀರಿದ ಸಾಯುಜ್ಯವೆಂಬ ಲಕ್ಷಣವನ್ನುಳ್ಳ ಮೋಕ್ಷವು ಶಿವಭಕ್ತರುಗಳಿಂದ ಹೊಂದಲ್ಪಡುತ್ತಿಹುದು. ಇತರವಾದ ತ್ರಿವರ್ಗಗಳಲ್ಲಿ ತಾತ್ಪರ್ಯವುಳ್ಳ ಜನಗಳಿಂದ ಹೊಂದಲ್ಪಡುವದಿಲ್ಲ.

ಮೂ ॥ ಅತಸ್ಸಮಸ್ತಂಪರಿವರ್ಜಯಿತ್ವಾ ಸುಖಾಭಿಲಾಷೀಪರಿಪೂರ್ಣ
ಚೇತಾಃ । ಸ್ಥಲೋಕ್ತಸಮ್ಯಕ್ಚಿತಿಚಿತ್ತವೃತ್ತಿಂ ನಿವೇಶ್ಯತತ್ರಪ್ರಭ
ವವಿಚಾರವಾಂಸ್ಯಾತ್ ॥ ೯ ॥

ಟೀ ॥ ಅದಕಾರಣ ಸುಖವಂ ಬಯಸುವವನೂ, ಅಖಂಡೈಕರಸವಹ ಪರಿಪೂರ್ಣವಸ್ತುವೇ ಸರ್ವವೆಂದು ತಿಳಿದ ಚಿತ್ತವನುಳ್ಳವನೂ ಆದ ಪುರುಷನು ಸಕಲ ಪ್ರಪಂಚವಂ ಬಿಟ್ಟು ಷಟ್ಸ್ಥಲಗಳಿಂ ಹೇಳಲ್ಪಟ್ಟ ಸಮ್ಯಗ್ಜ್ಞಾನದಲ್ಲಿ ಚಿತ್ತದ ವ್ಯಾಪಾರವನ್ನಿರಿಸಿ, ಆ ಪರಬ್ರಹ್ಮರೂಪವಾದ ಶಿವನಲ್ಲಿ ಭಕ್ತಿ ಭಾವನೆಯು ವಿಚಾರವುಳ್ಳವನಾಗುವನು.

ಮೂ ॥ ಸಮ್ಯಗ್ಜ್ಞಾನಸ್ಯಮೂಲಂಹಿ ಭಕ್ತಿರವ್ಯಭಿಚಾರಿಣೀ ।
ಸಚ್ಚಿದಾನಂದಸಂಪೂರ್ಣೇ ಶಿವಲಿಂಗಸ್ವರೂಪಿಣಿ ॥ ೧೦ ॥

ಟೀ ॥ ಮತ್ತಂ ಸಚ್ಚಿದಾನಂದಂಗಳಿಂ ತುಂಬಲ್ಪಟ್ಟಿರುವ ಶಿವಲಿಂಗಸ್ವರೂಪದಲ್ಲಿಯೇ ಎರಗಿ ಮತ್ತೊಂದರಲ್ಲಿ ಎರಗದಿದ್ದ ಭಕ್ತಿಯೇ ಸಮ್ಯಗ್ಜ್ಞಾನಕ್ಕೆ ಮೂಲವು.

ಮೂ ॥ ಭವಾರ್ಣವಂತರ್ತುಮಿಹೇಚ್ಛತಾಂ ನೃಣಾಮುಪಾಯಏಷಸ್ಸು
ಲಭಸ್ಸುಖಪ್ರದಃ । ನವೀರಮಾಹೇಶ್ವರಸಂಗಮಾದೃತೇಜಗತ್ತ್ರ
ಯೇನ್ಯೋಸ್ತಿವಿಚಾರಿತೇಸತಿ ॥ ೧೧ ॥

ಟೀ ॥ ಈ ಲೋಕದಲ್ಲಿ ಸಂಸಾರಸಮುದ್ರವಂ ದಾಟಲಿಚ್ಛೈಸುತ್ತಿದ್ದ ಮನುಷ್ಯರುಗಳಿಗೆ ಸುಖವಂ ಕೊಡುವ ಈ ವೀರಮಾಹೇಶ್ವರರ ಸಂಸರ್ಗವೇ ಸುಲಭವಾದ ಉಪಾಯವು. ವಿಚಾರಿಸಲಾಗಿ ಮೂರುಲೋಕಗಳಲ್ಲಿಯೂ ವೀರಮಾಹೇಶ್ವರರ ಸಂಬಂಧವು ಹೊರತು ಮತ್ತೊಂದುಪಾಯವಿಲ್ಲವು.

ಮೂ ॥ ತಸ್ಮಾದಿಹಪ್ರಾಣಶಿವೈಕ್ಯಭಾಜಂಸಂಪೂಜಯೇದ್ಯೋಭುವನೈಕವಂದ್ಯಂ । ಸಂಸಾರಸಂಬಂಧವಿಹೀನಭಾವಸ್ಸಜ್ಞಾನಮೇತಿಸ್ಥಲಷಟ್ಕಜಂತ್ರತ್ ॥ ೧೨ ॥

ಟೀ ॥ ಆದಕಾರಣ ಲೋಕದಲ್ಲಿ ಒಬ್ಬನೇ ವಂದಿಸಿಕೊಳ್ಳಲು ಯೋಗ್ಯನಾಗಿಯೂ, ಜೀವೇಶ್ವರರ ಐಕ್ಯವನ್ನು ಹೊಂದುತ್ತಿರುವವನಾಗಿಯೂ ಇರುವ ಮಾಹೇಶ್ವರನನ್ನು ಆವನಾನೋರ್ವನು ಲೇಸಾಗಿ ಪೂಜಿಸುತ್ತಿರುವವನೋ ಆತನು ಸಂಸಾರ ಬಂಧವನಿಲ್ಲದ ಚಿತ್ತವುಳ್ಳವನಾಗಿ ಷಟ್ಸ್ಥಲಂಗಳಿಂದುಂಟಾದ ಸಮ್ಯಗ್ಜ್ಞಾನವನ್ನೈದುತ್ತಿಹನು.

ಮೂ ॥ ತಸ್ಮಾತ್ಪರಬ್ರಹ್ಮಸುಖಸ್ವರೂಪಂ ಸ್ವಮಾಯಯಾಷಟ್ಸ್ಥಲಭೇದಭಿನ್ನಂ । ಸಚ್ಚಿನ್ಮಯಂಶಂಕರಮಕ್ಷರಂತದ್ಯೋವೇದನಾಯಾತಿ ಪುನರ್ಭವಂಸಃ ॥ ೧೩ ॥

ಟೀ ॥ ಆದಕಾರಣ ಯಾವ ಪರಮೇಶ್ವರನು ಸಮಸ್ತ ಪ್ರಪಂಚಕ್ಕುಪಾದಾನಕಾರಣಭೂತನಾಗಿ ಸತ್ಯಜ್ಞಾನಾನಂದ ಸ್ವರೂಪನಾಗಿ, ಕಾಲತ್ರಯಾಬಾಧ್ಯನಾಗಿ, ತನ್ನ ಮಾಯಾಶಕ್ತಿಯಿಂದೀಷಟ್ಸ್ಥಲಂಗಳೆಂಬಾರು ಭೇದಂಗಳನಂಗೀಕರಿಸಿ ಪರಾತ್ಪರನಾಗಿರುವನೋ ಅಂಥಾ ಪರಬ್ರಹ್ಮಸ್ವರೂಪನಾದ ಸಾಕ್ಷಾತ್ಪರಶಿವನಂ ಯಾವ ಪುರುಷನು ಚನ್ನಾಗಿ ತಿಳಿಯುವನೋ ಆತನು ಮರಳಿ ಜನನ ಮರಣಾತ್ಮಕಂಗಳಾದ ಈ ಸಂಸಾರ ದುಃಖಂಗಳಂ ಹೊಂದುವದಿಲ್ಲ.

ಮೂ ॥ ಏವಂಷಟ್ಸ್ಥಲವಿಜ್ಞಾನಂಪ್ರತ್ಯಗ್ರೂಪಂಪ್ರಮಾಣತಃ । ಗುರೂಕ್ತ್ಯಾಸ್ವಾನುಭೂತ್ಯಾಚ ಯಸ್ಯಭಾತಿಸಸರ್ವವಿತ್ ॥ ೧೪ ॥

ಟೀ ॥ ಈ ಪ್ರಕಾರದಲ್ಲಿ ಅನುಭವ ಪ್ರಮಾಣದಿಂ ತನುತ್ರಯ ವಿಲಕ್ಷಣವಪ್ಪ ಪರಮಾತ್ಮಸ್ವರೂಪ ಮಹಾ ಷಟ್ಸ್ಥಲಜ್ಞಾನವು ಆವನಾನೋರ್ವನಿಗೆ ಶ್ರೀ ಗುರುವಾಕ್ಯದಿಂದಲೂ ತನ್ನನುಭವದಿಂದಲೂ ಬೆಳಗುತ್ತಿರ್ಪನೋ ಆತನು ಸರ್ವಜ್ಞನೆನಿಸಿಕೊಳ್ವಂ.

ಮೂ॥ ಕ್ರಿಮಿಕೀಟಪತಂಗೇಭ್ಯಃ ಪಶವಃಪ್ರಜ್ಞಯಾಧಿಕಾಃ ।
ಪಶುಭ್ಯೋಹಿನರಾಶ್ರೇಷ್ಠಾಸ್ತೇಷುಶ್ರೇಷ್ಠಾ ದ್ವಿಜಾತಯಃ ॥೧೫॥
ದ್ವಿಜಾತಿಷ್ವಧಿಕಾವಿಪ್ರಾವಿಪ್ರೇಷುಕ್ರತುಬುದ್ಧಯಃ ।
ಕ್ರತುಬುದ್ಧಿಷುಕರ್ತಾರಸ್ತೇಭ್ಯಸ್ಸನ್ಯಾಸಿನೋಧಿಕಾಃ ॥ ೧೬ ॥
ತೇಭ್ಯೋಪಿಜ್ಞಾನಿನಶ್ಶ್ರೇಷ್ಠಾಸ್ತೇಷುಶಂಕರಪೂಜಕಾಃ ।
ತೇಷುಶ್ರೇಷ್ಠಾ ಮಹಾಭಾಗಾ ಮಮಲಿಂಗಾಂಗಸಂಗಿನಃ ॥ ೧೭ ॥
ಲಿಂಗಾಂಗಸಂಗಿಷ್ವಧಿಕಷಟ್ಸ್ಥಲಜ್ಞಾನವಾನ್ಪುಮಾನ್ ।
ತಸ್ಮಾದಪ್ಯಧಿಕೋನಾಸ್ತಿತ್ರಿಷುಲೋಕೇಷುಸರ್ವದಾ ॥ ೧೮ ॥
ಸವಂದ್ಯಸ್ಸರ್ವದಾಪೂಜ್ಯಸ್ಸಂಸಾರವಿಜಿಗೀಷುಭಿಃ ।
ಬಹುನೋಕ್ತೇನಕಿಂಪತ್ಸಶಿವಾಹಂನಸಂಶಯಃ ॥ ॥ ೧೯ ॥

ಟೀ॥ ಬಳಿಕೀಷಟ್ಸ್ಥಲಜ್ಞಾನಿಯಾದವೀರಶೈವನೇ ಸರ್ವೋತ್ಕೃಷ್ಟನೆಂಬಲ್ಲಿ ಕ್ರಿಮಿಕೀಟಪತಂಗಜಾತಿಯಿಂ ಪಶುಗಳಧಿಕ ವಾಪಶುಗಳಿಂ ಮನುಷ್ಯರಧಿಕವಾಮನುಷ್ಯರಿಂ ದ್ವಿಜರಧಿಕವಾದ್ವಿಜರಿಂ ವಿಪ್ರರಧಿಕವಾ ವಿಪ್ರರಿಂ ಕ್ರತುಬುದ್ಧಿಗಳಧಿಕವಾಕ್ರತು ಬುದ್ಧಿಗಳಿಂ ಕರ್ತಾರರಧಿಕವವ ರಿಂ ಸನ್ಯಾಸಿಗಳಧಿಕವಾ ಸನ್ಯಾಸಿಗಳಿಂ ಜ್ಞಾನಿಗಳಧಿಕವಾಜ್ಞಾನಿಗಳಿಂ ಶಿವಾರ್ಚಕರರಧಿಕವಾ ಶಿವಾರ್ಚಕರಿಂಲಿಂಗಾಂಗಸಂಗಿಗಳಧಿಕವವರಿಂ ಷಟ್ಸ್ಥಲಜ್ಞಾನಿಗಳಧಿಕವಾ ಷಟ್ಸ್ಥಲಜ್ಞಾನಿಗಳಿಗೆಲ್ಲಿಯುಂ ಸಮಾನವಿಲ್ಲವಾಗಿ ಆ ಷಟ್ಸ್ಥಲಜ್ಞಾನಿಯು ಸಂಸಾರ ಸಾಗರವಂ ದಾಂಟಲಿಚ್ಛೆಯುಳ್ಳವರಿಂ ಸರ್ವಕಾಲದಲ್ಲಿಯೂ ನಮಸ್ಕರಿಸಲ್ತಕ್ಕವನು ಪೂಜಿಸಲ್ತಕ್ಕವನು ಎಲೈ ಷಣ್ಮುಖನೇ ಬಹಳವಾಗಿ ಹೇಳಿದ್ದರಿಂದೇನು ಆ ಷಟ್ಸ್ಥಲಜ್ಞಾನಿಯೇ ನಾನು ನಾನೇ ಆತನು ಸಂಶಯವಿಲ್ಲ.

ಮೂ॥ ಷಟ್ಸುಸ್ಥಲೇಷುವಿಜಯಂತಿಹಿಯೇಮಹಾಂತೋವಂದ್ಯಾಸ್ತಏವ ವಿಜಿತೇಂದ್ರಿಯಶತ್ರವಸ್ತೇ । ಸಾಮ್ರಾಜ್ಯವರಾಡಪಿಚಯತ್ರತೃಣಾಯತೇತೇಷ್ವೈಪಂಪದಂಜಗತಿತೇಸಮವಾಪ್ನುವಂತಿ ॥ ॥ ೨೦ ॥

ಟೀ॥ ಆರು ಕೆಲಂಬರು ಮಹಾತ್ಮರುಗಳು ಷಟ್ಸ್ಥಲಂಗಳಲ್ಲಿ ಒಪ್ಪುತ್ತಿಹರೋ ಅವರುಗಳೇ ಲೋಕದಲ್ಲಿ ವಂದಿಸಿಕೊಳ್ಳಲು ಯೋಗ್ಯರು. ಅವರುಗಳು ಗೆಲ್ಲುತ್ತಿದ್ದಂಥಾ ಇಂದ್ರಿಯಂಗಳಿಗೆ ಶತ್ರುಗಳೆನಿಸುವರು. ಅವನಾಸೋರ್ವ ಷಟ್ಸ್ಥಲಬ್ರಹ್ಮಿಯಲ್ಲಿ ಸಾಮ್ರಾಜ್ಯವನ್ನುಳ್ಳಂಥಾ ಪ್ರಭುವು ಸ್ವರ್ಗಕ್ಕೆ ಒಡೆಯನಾದ ಇಂದ್ರನಾದರು ತೃಣವಾಗುತ್ತಿಹನು ಆ

ಷಟ್ಸ್ಥಲ ಬ್ರಹ್ಮಿಗಳಪ ಶಿವಭಕ್ತರುಗಳು ಶಿವನ ಸಂಬಂಧವಹ ಆ ಪದವಿಯನ್ನು ಯ್ಯೆದುತ್ತಿಹರು.

ಮೂ ॥ ಏವಂಷಟ್ಸ್ಥಲನಿರ್ಣಯಂಶಿವಪದಪ್ರಾಪ್ತಿಕೈಕಹೇತುಂಸದಾ।
ಯಸ್ಸೈವೇತರಾಬ್ಜಪೀಠನಿಹಿತಶ್ರೀಕಂಠಲಿಂಗಾರ್ಚಕಃ ॥೨೧॥
ಸಜ್ಞಾನೀಸಪುರಾತನಸ್ಸಹಿಮಹಾಮಹೇಶ್ವರೇಷೂತ್ತಮೊ
ಮತ್ತ್ಯರ್ಸ್ತನಜಗತ್ರಯೇನಸದೃಶೊವಿದ್ಯೇತದೇವೋಪಿವಾ ॥೨೨॥

ಟೀ ॥ ಕರಕಮಲವೆಂಬ ಸಿಂಹಾಸನದಲ್ಲಿ ಇರಿಸಲ್ಪಟ್ಟ ಶಿವಲಿಂಗದ ನರ್ಚನೆಯಂ ಮಾಡುವಂಥಾ ಆವನಾನೊರ್ವನೀ ಪ್ರಕಾರದಲ್ಲಿ ಶಿವನ ಪದವಿಯನೆಯ್ದುವದಕ್ಕೆ ಒಂದೇ ಕಾರಣವಾದಂಥಾ ಷಟ್ಸ್ಥಲದ ನಿರ್ಣಯವನ್ನು ಯಾವಾಗಲೂ ಅಭ್ಯಾಸಿಸುವನೊ ಆತನು ಜ್ಞಾನಿಯೆನಿಸುವನು. ಆತನು ಪುರಾತನನೆನಿಸುವನು. ಆತನು ಮಹಾ ಮಾಹೇಶ್ವರರುಗಳಲ್ಲಿ ಉತ್ತಮನೆನಿಸುವನು. ಆತನೊಡನೆ ಸಮಾನನಹಮನುಷ್ಯನು ದೇವತೆಯಾದರೂ ಮೂರುಲೋಕದಲ್ಲಿಯೂ ಇಲ್ಲವು.

ಮೂ ॥ ಯಸ್ಯೈವಂಷಟ್ಸ್ಥಲಜ್ಞಾನಸಾಮಗ್ರೀಕಲನಾದ್ದೃಢಾ ।
ಭಾತಿಧೀದರ್ಪಣೆಸ್ವಚ್ಛೆಸವೈಮಾಹೇಶ್ವರೊಜನಃ ॥ ೨೩ ॥

ಟೀ ॥ ಮತ್ತಂ । ಆವನಾನೊರ್ವನ ನಿರ್ಮಲವಹಬುದ್ಧಿಯೆಂಬ ಕನ್ನಡಿಯಲ್ಲಿ ಈ ಪ್ರಕಾರ ಷಟ್ಸ್ಥಲಜ್ಞಾನದ ಅಧಿಕವಹ ಸಂಬಂಧವು ದೃಢವಾಗಿ ಬೆಳಗುತ್ತಿಹುದೋ ಆತನೇ ವೀರಮಾಹೇಶ್ವರನೆನಿಸುವನು.

ಮೂ ॥ ಸಭವಾರ್ಣವಮುತ್ತ್ಯಗ್ರಂದುಷ್ಪ್ರಾರಂದುಸ್ತರಂಗಕಂ ।
ತೀರ್ತ್ವಾಮಾಂಪರಮಾತ್ಮಾನಮೇತಿನಾವರ್ತತೆಪುನಃ ॥ ೨೪ ॥
ತಸ್ಮಾನ್ಮಾಹೆಶ್ವರಸ್ಯೈಷಾನಿಷ್ಠಾವಕ್ತುಂನಶಕ್ಯತೆ ।
ಮಯಾಸರ್ವವಿದಾವತ್ಸಕಿಮುತಾನ್ಯೈರಜಾದಿಭಿಃ ॥ ॥ ೨೫ ॥
ಬಹುನೊಕ್ತೇನಕಿಂಸಾಕ್ಷಾತ್ಸಏವಾಹಂನಸಂಶಯಃ ।

ಟೀ ॥ ಈ ಪ್ರಕಾರವಾದ ಷಟ್ಸ್ಥಲಜ್ಞಾನಿಯು ಅತ್ಯಂತ ಭಯಂಕರವಾದಂಥಾ ಕಡೆ ಇಲ್ಲದಂಥಾ ಸ್ಥೈರಿಸಲು ಬಾರದತೆರೆಗಳನ್ನುಳ್ಳಂಥಾ ಸಂಸಾರವೆಂಬ ಸಮುದ್ರವನ್ನು ದಾಟಿ ಪರಮಾತ್ಮನಹ ನನ್ನನ್ನು ಐದುತ್ತಿಹನು ಮರಳಿ ಬರುತ್ತಿರನು ಅದುಕಾರಣವಾಗಿ ವೀರಮಾಹೇಶ್ವರನ ಈನಿಷ್ಠೆಯು ಸರ್ವಜ್ಞನಾದನನ್ನಿಂದ ನುಡಿಯಲು ಶಕ್ಯವಾಗುತ್ತಿರದು । ಎಲೈ ಷಣ್ಮುಖನೇ ಬ್ರಹ್ಮ ಮೊದಲಾದ ವಿಕಾಕ್ಯದವರುಗಳಿಂ ಹೇಳತಕ್ಕದ್ದೇನು

ಬಹಳವಾಗಿ ನುಡಿದುದರಿಂದೇನು ಪ್ರಯೋಜನವು ಸಾಕ್ಷಾತ್ ನಾನೇ ಅವ
ನು ಈ ಅರ್ಥದಲ್ಲಿ ಸಂದೇಹವಿಲ್ಲ.

ಮೂ ॥ ಸುದುರ್ಲಭಮಿದಂಜ್ಞಾನಂ ನರಾಣಾಮುತ್ತಮೋತ್ತಮಂ ।
ಮದ್ಭಕ್ತಿರಹಿತಾನಾಂಚದುರ್ವೃತ್ತಾನಾಂಷಡಾನನ ॥ ೨೬ ॥

ಟೀ ॥ ಎಲೈ ಷಣ್ಮುಖನೇ ನನ್ನಲ್ಲಿ ಭಕ್ತಿಯಿಲ್ಲದೆ ಇದ್ದಂಥಾ
ದುರ್ನಡತೆಯುಳ್ಳಂಥಾ ಮನುಷ್ಯರುಗಳಿಗೆ ಅತ್ಯುತ್ತಮವಹ ಈ ಷ
ಟ್ಸ್ಥಲಜ್ಞಾನವು ಅತ್ಯಂತ ದುರ್ಲಭವು.

ಮೂ ॥ ಮದ್ಭಾವಾಮೃತತೃಪ್ತಾನಾಂಸದಾಚಾರಾನುವರ್ತಿನಾಂ ।
ಜಾಯತೇತತ್ಪರಂಜ್ಞಾನಂಸ್ಥಲಷಟ್ಕೋದ್ಭವಂನೃಣಾಂ ॥ ೨೭ ॥

ಟೀ ॥ ನನ್ನ ಧ್ಯಾನವೆಂಬ ಅಮೃತದಿಂ ತೃಪ್ತರಾದಂಥಾ ಸದಾ
ಚಾರದಲ್ಲಿ ವರ್ತಿಸುತ್ತಿದ್ದಂಥಾ ಮನುಷ್ಯರುಗಳಿಗೆ ಷಟ್ಸ್ಥಲಗಳಲ್ಲಿಹುಟ್ಟಿ
ದಂಥಾ ಉತ್ಕೃಷ್ಟವಾದ ಜ್ಞಾನವು ಉಂಟಾಗುತ್ತಿಹುದು.

ಮೂ ॥ ಅತಸ್ಸದಾಚಾರರತಸ್ಸಮಾಧಿಮಾಂಶ್ಚಯಸ್ಯ ಲಿಂಗಾರ್ಚನ ತತ್ಪ
ರೋಜನಃ । ಶಿವಸ್ವರೂಪಂಪರಮಾರ್ಥಮಾದರಾತ್ಸದಾಭ್ಯಸೇತ್
ಷಟ್ಸ್ಥಲಮೇಕಭಾವತಃ ॥ ೨೮ ॥

ಟೀ ॥ ಅದುಕಾರಣವಾಗಿ ಶ್ರೀ ವೀರಶೈವಾಗಮೋಕ್ತವಪ್ಪ ಸದಾ
ಚಾರದಲ್ಲಿ ತತ್ಪರನಾಗಿಯೂ, ಚಿತ್ತಸಮಾಧಾನವನುಳ್ಳವನಾಗಿಯೂ, ಶಿವ
ಲಿಂಗಾರ್ಚನೆಯಲ್ಲಿ ತಾತ್ಪರ್ಯವನುಳ್ಳವನಾಗಿಯೂ ಇರುವ ಮನುಷ್ಯನು
ಶಿವಸ್ವರೂಪವಹ ಪರಮಾರ್ಥವಾದ ಷಟ್ಸ್ಥಲವನ್ನು ಏಕಚಿತ್ತದಿಂದಾದರ
ದೊಡನೆ ಯಾವಾಗಲೂ ಅಭ್ಯಾಸವಮ್ಮಾಡುವದು.

ಮೂ ॥ ಸರ್ವಮುಕ್ತಂಸಮಾಸೇನಸ್ಥಲನಿರ್ಣಯವೇದನಂ ।
ಗೋಪ್ಯಂಸಮಸ್ತಶಾಸ್ತ್ರೇಷುತವಸ್ನೇಹಾನ್ಮಯೋದಿತಂ ।
ತಸ್ಮಾದೇವಂವಿದಿತ್ವಾತ್ವಂಷಟ್ಸ್ಥಲಜ್ಞಾನವಾನ್ಭವ ॥ ೨೯ ॥

ಟೀ ॥ ಸಮಸ್ತ ಶಾಸ್ತ್ರಗಳಲ್ಲಿಯೂ ನನ್ನಿಂದ ಹೇಳಲ್ಪಟ್ಟ ರಹ
ಸ್ಯವಹ ಸಮಸ್ತವಾದ ಷಟ್ಸ್ಥಲ ನಿರ್ಣಯಜ್ಞಾನವು ಸಂಗ್ರಹವಾಗಿ ನಿನಗೆ
ಸ್ನೇಹದ ದೆಸೆಯಿಂ ಹೇಳಲ್ಪಟ್ಟಿತು. ಅದುಕಾರಣವಾಗಿ ನೀನು ಈಪ್ರಕಾ
ರದಲ್ಲಿ ತಿಳಿದು ಸದಾ ಷಟ್ಸ್ಥಲಜ್ಞಾನವುಳ್ಳಂಥಾವನಾಗು.

ಮೂ ॥ ಸಕಲನಿಗಮಸಾರಂ ಷಟ್ಸ್ಥಲಜ್ಞಾನಮೇತದ್ಭವವಿಪಿನಕುಠಾರಂಸ
ರ್ವತಂತ್ರಪ್ರಸಿದ್ಧಂ । ಪರಮಸುಖಸಮಾಪ್ತ್ಯೈಕಹೇತ

ತ್ರಮಾಖ್ಯಂತವಕಥಿತಮಶೇಷಂತೇಸದಾಪ್ರೇಮಭೂಮ್ನೇ ॥

ಟೀ ॥ ಎಲೈ ಸ್ಕಂದನೆ ಯಲ್ಲಾಗಳೂ ನಮ್ಮ ಪ್ರೇಮಕ್ಕೆ ಸ್ಥಾನನಾದ ನಿನಗೆ ಸಮಸ್ತ ವೇದಂಗಳಸಾರವಾದ ಸಮಸ್ತಶಾಸ್ತ್ರಂಗಳಲ್ಲಿ ಪ್ರಸಿದ್ಧವಾದ ಸಂಸಾರವೆಂಬಮವಿಗೆ ಕೊಡಲಿಯಾದ ಪರಮಾನಂದವನ್ನೈದುವದಕ್ಕೆ ಒಂದೇ ಕಾರಣವಾದುತ್ತಮವಾದ ಹೆಸರುಳ್ಳಂಥಾ ಸಂಪೂರ್ಣವಾದ ಷಟ್ಸ್ಥಲಜ್ಞಾನವು ಹೇಳಲ್ಪಟ್ಟಿತು.

ಮೂ ॥ ತ್ವಮಪಿಕಥಯಶೈವಾಚಾರಯುಕ್ತಾಯಸರ್ವಂ
ವಿಜಿತಮದನರಾಗದ್ವೇಷಲೋಭೇಂದ್ರಿಯಾಯ ॥೨೦॥
ಗುಣಗಣನಿಲಯಾಯಪ್ರಾಣಲಿಂಗೈಕ್ಯಭಾಜೆ
ಗುರುಚರಣಸರೋಜಧ್ಯಾನಯುಕ್ತಾಯವತ್ಸ ॥೨೧॥

ಟೀ ॥ ಎಲೈಷಣ್ಮುಖನೇನೀನು ಶೈವಾಗಮೋಕ್ತವಹ ಸದಾಚಾರದೊಡನೆ ಕೂಡಿದಂಥಾ ಮತ್ತಂ ಗೆಲಲ್ಪಟ್ಟ ಮನ್ಮಥರಾಗದ್ವೇಷಲೋಭೇಂದ್ರಿಯಂಗಳನುಳ್ಳಂಥಾ ಸದ್ಗುಣಂಗಳ ಸಮೂಹಕ್ಕೆ ಸ್ಥಾನವಾದಂಥಾ ಶ್ರೀಗುರುವಿನ ಚರಣ ಕಮಲದೊಳ್ ಧ್ಯಾನದೊಡನೆ ಕೂಡಿದಂಥಾ ಪ್ರಾಣಲಿಂಗೈಕ್ಯವನ್ನು ಪಡೆದುಕೊಂಡಿದ್ದಂಥಾ ಮಹಾತ್ಮನಿಗೋಸ್ಕರ ಈ ಯಲ್ಲವನ್ನು ಹೇಳು.

ಮೂ ॥ ಅಶಿಷ್ಟಾಯಾವಿರಕ್ತಾಯಾದೇವತಾದೂಷಕಾಯಚ ।
ಲಿಂಗಧಾರಣದೂರಾಯಮಾವಾದೀಸ್ತ್ವಂಕದಾಚನ ॥೨೨॥

ಮತ್ತಂ ॥ ಸದಾಚಾರರಹಿತನಾದಂಥಾ ಸಂಸಾರದಲ್ಲಿ ವಿರಕ್ತಿಯಿಲ್ಲದಿದ್ದಂಥಾ ಜಗದೀಶ್ವರನಾದ ಶಿವನನ್ನು ನಿರಾಕರಿಸುತ್ತಿದ್ದಂಥಾ ಲಿಂಗಧಾರಣವಿಲ್ಲದಾತಂಗೋಸ್ಕರ ನೀನು ಒಂದು ಬಾರಿಯು ನುಡಿಯದಿರು.

ಮೂ ॥ ಇತ್ಯುಕ್ತ್ವಾಶಂಕರಃಕ್ರೌಂಚಧಾರಣಾಯಾಮಿತೌಜಸೇ ।
ಗೌರೀಮುಖಾಬ್ಜೇವಿನ್ಯಸ್ತದೃಷ್ಟಿಸ್ತೂಷ್ಣೀಂಬಭೂವಸಃ ॥೨೩॥

ಟೀ ॥ (ಅನಂತರಂ ಸೂತಮುನಿವಾಕ್ಯವು) ಸುಖವನ್ನು ಮಾಡುವಂಥಾ ಪರಮೇಶ್ವರನು ಹವಣಿಸಲು ಬಾರದ ತೇಜಸ್ಸುಳ್ಳಂಥಾ ಕುಮಾರಸ್ವಾಮಿಗೋಸ್ಕರ ಹೀಗೆಂದು ನುಡಿದು ಪಾರ್ವತೀದೇವಿಯ ಮುಖ ಕಮಲದಲ್ಲಿ ಇರಿಸಲ್ಪಟ್ಟ ನಯನಂಗಳುಳ್ಳಾತನಾಗಿ ಸುಮ್ಮಗಿದ್ದನು.

ಮೂ ॥ ಶ್ರುತ್ವಾಶಿವಮುಖೋದ್ಗೀತಂ ಸ್ಕಂದಷ್ಷಟ್ಸ್ಥಲನಿರ್ಣಯಂ ।
ಪ್ರಣಮ್ಯದಂಡವದ್ಭೂಮೌಭಕ್ತ್ಯಾಪರವಶೋಭವೇತ್ ॥೨೪॥

ಟೀ ॥ ಅನಂತರದಲ್ಲಿ ಕುಮಾರಸ್ವಾಮಿಯು ಶಿವನ ಮುಖದಿಂ ಹೇಳಲ್ಪಟ್ಟಂಥಾ ಷಟ್ಸ್ಥಲದ ನಿರ್ಣಯವನ್ನು ಕೇಳಿ, ಭಕ್ತಿಯಿಂ ಭೂಮಿಯಲ್ಲಿ ಸಾಷ್ಟಾಂಗವಾಗಿ ನಮಸ್ಕರಿಸಿ ಪರವಶವಾದಂಥಾವನಾದನು.

ಮೂ ॥ ತತಃಪರವಶೋಭೂತ್ವಾ ಕಿಂಚಿತ್ಕಾಲಂಮಹೇಶ್ವರೇ ।
ಲಬ್ಧಸಂಜ್ಞೋಮಹಾದೇವಂಸ್ಕಂದಸ್ತುಷ್ಟಾವಶಂಕರಂ ॥೩೫॥

ಟೀ ॥ ಅನಂತರಂ ಕುಮಾರಸ್ವಾಮಿಯು ಶಿವನಲ್ಲಿ ಒಂದಿಷ್ಟುಹೊತ್ತು ಪರವಶನಾಗಿದ್ದು ಪಡೆಯಲ್ಪಟ್ಟ ಎಚ್ಚರಿಕೆಯನುಳ್ಳಾತನಾಗಿ ಸುಖವನ್ನ ಮಾಡುವಂಥಾ ಪರಮೇಶ್ವರನಂ ಸ್ತುತಿಸಿದನು.

ಸ್ಕಂದಃ ॥ ನಮಶ್ಶಿವಾಯಸೋಮಾಯಷಟ್ಸ್ಥಲಬ್ರಹ್ಮರೂಪಿಣೇ ।
ಸದಾನಂದಸ್ವರೂಪಾಯಸದ್ಯೋಜ್ಞಾನಪ್ರದಾಯಿನೇ ॥ ೧ ॥
ನೀಲಕಂಠಾಯನಿತ್ಯಾಯನಿರ್ವಿಕಾರಾಯಶಂಭವೇ ।
ನಿರಂಜನಾಯಸರ್ವಾಯತ್ರ್ಯಂಬಕಾಯನಮೋನಮಃ ॥ ೨ ॥
ಗಂಗಾಧರಂವಿರೂಪಾಕ್ಷಂಚಂದ್ರಲೇಖಾವತಂಸಕಂ ।
ಸರ್ವಜ್ಞಂಸರ್ವಗಂಸರ್ವಂವಂದೇಸರ್ವಾಶ್ರಯಂಶಿವಂ ॥
ಆಧಾರಂಸರ್ವಲೋಕಾನಾಮನಾಧಾರಮವಿಕ್ರಿಯಂ ।
ನಿಸ್ತರಂಗಸುಖಾಂಭೋಧಿಂನಮಾಮೀಶಾನಮವ್ಯಯಂ ॥ ೪ ॥
ಕಲಾಧರಂಕಲಾತೀತಂಕಾಲಕಾಲಂಕಪರ್ದಿನಂ ।
ಕರ್ಮಾದಿರಹಿತಂಶುದ್ಧಂವಂದೇಭೂತೇಶಮಕ್ಷರಂ ॥ ೫ ॥
ಬ್ರಹ್ಮವಿಷ್ಣುಸುರೇಶಾನಾಂಕಾರಣಂಕಾರಣಾತಿಗಂ ।
ನಾಗಾಲಂಕೃತಸರ್ವಾಂಗಂನಮಾಮಿಸಕಲೇಶ್ವರಂ ॥ ೬ ॥
ನಿಷ್ಕಳಂನಿರ್ಮಲಂಸಚ್ಚಿನ್ಮಯಂಸಂಸಾರಮೋಚಕಂ ।
ಸಾಂಬಂಸರ್ವಾತ್ಮಕಂವಂದೇಸದಾಶಿವಮನೀಶ್ವರಂ ॥ ೭ ॥
ಅದ್ವೈತಾದ್ವೈತಸದ್ಭಾವಕಾರಣಂಕೃತ್ತಿವಾಸಸಂ ।
ಕಲ್ಯಾಣಮಾದಿಪುರುಷಂನಮಾಮಿಗಿರಿಜಾಧವಂ ॥ ೮ ॥
ಗೀರ್ವಾಣಾರ್ಚಿತಪಾದಾಬ್ಜಂಗೀತತಾಂಡವವತ್ಸಲಂ ।
ಗಿರಿಶಂಗೀಷ್ಪತಿಸ್ತುತ್ಯಂವಂದೇಹಂಸರ್ವಸಾಕ್ಷಿಣಂ ॥ ೯ ॥
ಉಮಾಕುಚಾಜ್ಜಲಾವಣ್ಯಮಧುಮತ್ತೇಕ್ಷಣಾಳಯೇ ।
ನಮೋವಿಶ್ವಾತ್ಮನೇತುಭ್ಯಂಸ್ವಭಾವಾಮಲತೇಜಸೇ ॥ ೧೦ ॥
ಯಸ್ಯಪ್ರಸಾದಾದ್ಯೋಗೀಂದ್ರಾಜ್ಞಾನವಂತಃ ಪರಂಯಯುಃ ।

ತಂತ್ವಾಂಪ್ರಪದ್ಯೆದೆವೇಶಸರ್ವಮಂಗಳಕಾರಣಂ ‖ ೧೧ ‖
ಯಸ್ಮಾಚ್ಚರಾಚರಂವಿಶ್ವಂಜಾಯತೆಯತ್ರತಿಷ್ಠತಿ ।
ಲೀಯತೆಯತ್ರಸತತಂತ್ರಂಪ್ರಪದ್ಯೆಮಹೇಶ್ವರಂ ‖ ೧೨ ‖

ಟೀ ‖ ಷಟ್ಸ್ಥಲಬ್ರಹ್ಮಸ್ವರೂಪನಾದ ಸಮ್ಯಜ್ಞಾನವಂ ಕೊಡುತ್ತಿದ್ದಂಥಾ ಉಮಾದೇವಿಯಿಂ ಸಹಿತನಾದ ಶಿವಂಗೋಸ್ಕರ ನಮಸ್ಕಾರವು ‖ ೧ ‖ ಕಪ್ಪುಗೊರಳನಾದ ನಿತ್ಯನಾದ ಮಾಯಾಪ್ರಪಂಚವಿಲ್ಲದಿದ್ದಂಥಾ ನಿರ್ಲೇಪನಾದ ಸುಖಕ್ಕೆ ಕಾರಣಭೂತನಾದ ಸಂಹಾರಕಾರಣನಾದ ತ್ರಿಲೋಚನನಾದ ಶಿವಂಗೋಸ್ಕರ ನಮಸ್ಕಾರವು ‖ ೨ ‖ ಜಟಾಮುಕುಟದಲ್ಲಿ ಗಂಗೆಯನ್ನು ಧರಿಸಿದಂಥಾಮೂರುಕಣ್ಣುಗಳಿಂದ ಕೂಡಿದಂಥಾ ಚಂದ್ರಕಳಾಭರಣನಾದ ಸರ್ವಜ್ಞನಾದ ಸರ್ವವ್ಯಾಪಕನಾದ ಜಗತ್ಪ್ರಪಂಚವೆಲ್ಲವೂ ತಾನೆಯಾದಂಥಾ ಸರ್ವಕರ್ತೃ ಅಕ್ರಿಯನಾದಶಿವನಂ ನಮಸ್ಕರಿಸುತ್ತಿದ್ದೇನೆ ‖ ೩ ‖ ಸಮಸ್ತ ಲೋಕಂಗಳಿಗೆ ಆಧಾರವಾದ ತನಗೆ ಯಾವ ಆಧಾರವೂ ಇಲ್ಲದಂಥಾ ಮಾಯಾಪ್ರಪಂಚಿನ ವಿಕಾರವಿಲ್ಲದ ತೆರೆಯಿಲ್ಲದ ಆನಂದಸಮುದ್ರನಾದ ನಿತ್ಯನಾದ ಪರಮೇಶ್ವರನನ್ನು ನಮಸ್ಕರಿಸುತ್ತಿದ್ದೇನೆ ‖ ೪ ‖ ನಾನಾಕಲೆಗಳಿಗೂ ಆಧಾರನಾದ ನಾದ ಬಿಂದು ಕಲೆಗಳನ್ನು ಮೀರಿದ ಕಾಲಂಗೆ ಕಾಲನಾದ ಜಟಾಮುಕುಟವನ್ನುಳ್ಳಂಥಾ ಕರ್ಮಮೊದಲಾಗಿ ಇಲ್ಲದ ನಿರ್ಮಲನಾದ ಕೇಡಿಲ್ಲದೆ ಇದ್ದ ಪಂಚಮಹಾಭೂತಂಗಳಿಗೆ ಒಡೆಯನಾದ ಪರಮಾತ್ಮನನ್ನು ನಮಸ್ಕರಿಸುತ್ತಿದ್ದೇನೆ ‖ ೫ ‖ ಬ್ರಹ್ಮ ವಿಷ್ಣು ಇಂದ್ರರುಗಳಿಗೆ ಕಾರಣನಾದ ಕಾರಣವನ್ನು ಮೀರಿದ ಶ್ವೇತಕಂಬಳಾಶ್ವತರಮಯಂತಾದ ಸರ್ಪಗಳಿಂದಲಂಕರಿಸಲ್ಪಟ್ಟ ಸರ್ವಾಂಗವನ್ನುಳ್ಳ ಸಕಲಲೋಕಂಗಳಿಗೆ ಒಡೆಯನಾದ ಶಿವನಂ ನಮಸ್ಕರಿಸುತ್ತಿದ್ದೇನೆ ‖ ೬ ‖ ನಾದ ಬಿಂದು ಕಳೆಗಳಿಲ್ಲದ ಶುದ್ಧನಾದ ಸಚ್ಚಿದಾನಂದಸ್ವರೂಪನಾದ ಭಕ್ತ ಜನರುಗಳಂ ಸಂಸಾರ ಪಾಶದತ್ತಣಿಂ ಬಿಡಿಸುವಂಥಾ ಪಾರ್ವತೀದೇವಿಯಿಂ ಸಹಿತನಾದ ವಿಶ್ವರೂಪನಾದ ಬೇರೊಬ್ಬ ಒಡೆಯನಿಲ್ಲದಂಥಾ ಸದಾ ಮಂಗಳಸ್ವರೂಪನಾದ ಪರಮೇಶ್ವರನನ್ನು ನಮಸ್ಕರಿಸುತ್ತಿದ್ದೇನೆ ‖ ೭ ‖ ಅರಿಯಲುಬಾರದ, ಅರಿಯಲುಬಹ, ಸತ್ಸ್ವರೂಪಕ್ಕೆ ಕಾರಣನಾದ ಗಜಾಸುರನಚರ್ಮಾಂಬರವನುಳ್ಳಂಥಾ ಮಂಗಳಸ್ವರೂಪನಾದ ಬ್ರಹ್ಮ ವಿಷ್ಣು ರುದ್ರಾದಿಗಳಿಗೆ ಆದಿಪುರುಷನಾದ ಪಾರ್ವತೀ ರಮಣನಾದ ಶಿವನನ್ನು ನಮಸ್ಕರಿಸುತ್ತಿದ್ದೇನೆ ‖ ೮ ‖ ದೇವತೆಗಳಿಂದರ್ಚಿಸಿಕೊಳ್ಳಲ್ಪಟ್ಟ ಚರಣಕಮಲವನ್ನುಳ

ಗೀತನೃತ್ಯಂಗಳಲ್ಲಿಪ್ರೀತಿಯುಳ್ಳ ಶ್ರೀ ಕೈಲಾಸಗಿರಿಯಲ್ಲಿ ಶಯನವಂಮಾಡು
ತ್ತಿದ್ದಂಥಾ ಬೃಹಸ್ಪತಿಯಿಂ ಸ್ತೋತ್ರವಂ ಮಾಡಿಸಿಕೊಳಲು ಯೋಗ್ಯನಾ
ದ ನಾನಾಜೀವರ ಹೃದಯದಲ್ಲಿದ್ದು ಸರ್ವಕ್ಕೂ ಸಾಕ್ಷಿಯಾದ ಶಿವನನ್ನು
ನಮಸ್ಕರಿಸುತ್ತಿದ್ದೇನೆ॥೯॥ಪಾರ್ವತೀದೇವಿಯ ಕುಚ ಕಮಲಗಳ ಸೌಂದ
ರ್ಯವೆಂಬ ಪುಷ್ಪ ರಸದಿಂ ಮದೋನ್ಮತ್ತಂಗಳಾದ ನಯನಂಗಳೆಂಬ ಭ್ರಮ
ರಂಗಳನುಳ್ಳಂಥಾ ವಿಶ್ವರೂಪನಾದಂಥ ಸ್ವಭಾವದಿಂ ನಿರ್ಮಲವಹ ತೇಜ
ಸ್ಸುಳ್ಳಂಥಾ ನಿನಗೋಸ್ಕರ ನಮಸ್ಕಾರವು ॥ ೧೦ ॥ಆವನಾನೊರ್ವನ ಪ್ರಸ
ನ್ನತಿಕೆಯದೆಸೆಯಿಂ ಯೋಗೀಶ್ವರರುಗಳು ಜ್ಞಾನವನುಳ್ಳವರಾಗಿ ಪರಮಪ
ದವನ್ನೈದುವರೋ ಎಲೈ ಬ್ರಹ್ಮ ವಿಷ್ಣು ರುದ್ರೇಂದ್ರಾದಿಗಳಿಗೆ ಒಡೆಯ
ನಾಥ ಶಿವನೇ ಸರ್ವಮಂಗಳಗಳಿಗೆ ಕಾರಣನಾದ ಆ ನಿನ್ನಂ ಐದುತ್ತಿದ್ದೇ
ನೆ ॥ ೧೧ ॥ ಆವಪರಮೇಶ್ವರನ ದೆಸೆಯಿಂ ಚರಿಸುವಂಥಾಚರಿಸದೆ ಇದ್ದ
ಥಾ ಸಮಸ್ತಲೋಕವುಹುಟ್ಟುತ್ತಿಹುದೋ ಆವಶಿವನಲ್ಲಿ ಈ ಚರಾಚರಪ್ರ
ಪಂಚವು ಇರುತ್ತಿಹುದೋ ಆವಶಿವನಲ್ಲಿ ಲೀನವಾಗುತ್ತಿಹುದೋ ಸೃಷ್ಟಿ
ಸ್ಥಿತಿಸಂಹಾರಾತ್ಮಕರಹ ಬ್ರಹ್ಮ ವಿಷ್ಣು ರುದ್ರರುಗಳಂಮೀರಿದಮಹದೈಶ್ವ
ರ್ಯವನ್ನುಳ್ಳಂಥಾ ಆ ಪರಶಿವನನ್ನು ಯಾವಾಗಲೂ ಐದುತ್ತಿದ್ದೇನೆ ॥ ೧೨॥
ಎಂದೀಪ್ರಕಾರದಲ್ಲಿ ಕುಮಾರಸ್ವಾಮಿಯು ಸಾಕ್ಷಾತ್ಪರಶಿವನನ್ನು ಸ್ತುತಿ
ಸಿದನು.

ಮೂ ॥ ತ್ವತ್ಪ್ರಸಾದಾಜ್ಜಗನ್ನಾಥ ಜ್ಞಾತಂಸರ್ವಂಮಯಾಧುನಾ ।
ಶೈವಸಿದ್ಧಾಂತಸರ್ವಸ್ವಂಷಟ್ಸ್ಥಲಬ್ರಹ್ಮವೇದನಂ ॥ ೧೩ ॥

ಟೀ ॥ ಎಂದೀಪ್ರಕಾರದಲ್ಲಿ ಕುಮಾರಸ್ವಾಮಿಯು ಸಾಕ್ಷಾತ್ಪರ
ಶಿವನನ್ನು ಸ್ತುತಿಸಿದ ನಂತರ ಎಲೈ ಲೋಕಂಗಳಿಗೆ ಒಡೆಯನಾದ ಶಿವನೇ
ನಿನ್ನ ಪ್ರಸನ್ನತಿಕೆಯದೆಸೆಯಿಂದೀಗ ವೀರಶೈವ ಸಿದ್ಧಾಂತದ ಸರ್ವಸ್ವವಹ
ಷಟ್ಸ್ಥಲ ಬ್ರಹ್ಮದಜ್ಞಾನವು ಎನ್ನಿಂದರಿಯಲ್ಪಟ್ಟಿತು.

ಮೂ ॥ ತತ್ಸ್ವರೂಪಪರಿಜ್ಞಾನಾದಾಸಂಸಂಪೂರ್ಣವೇದನಃ ।
ತಸ್ಮಾತ್ಸರ್ವಂಪರಿತ್ಯಜ್ಯತ್ವಾಮಹಂಶರಣಂಗತಃ ॥ ೧೪ ॥

ಟೀ ॥ ನಿನ್ನ ಸ್ವರೂಪನರಿವುದರ ದೆಸೆಯಿಂ ಸಂಪೂರ್ಣ ಜ್ಞಾನವಂ
ಐದಿದೆನು. ಅದುಕಾರಣವಾಗಿ ಸರ್ವವಂ ಪರಿತ್ಯಜಿಸಿ ನಿನ್ನಂ ಮರೆಹೊಕ್ಕ
ವನಾದೆನು.

ಸೂತಃ ॥ ಸ್ತುತ್ವೈತಿಶಂಕರಮಜಂಕರುಣಾಲಯಂ ತಂಸಂಸಾರಮೋಚಕ

ಮಖಂಡಸುಖಸ್ವರೂಪಂ । ಸ್ಕಂದೋಂಬಿಕಾಧವಪದಾಂಬುಜ
ಭಕ್ತಿ ಭಾವಾದಾನಂದನಿರ್ಭರಮನಾಸ್ಸನವೇದಬಾಹ್ಯಂ ।

ಟೀ । ಈ ಪ್ರಕಾರವಾಗಿ ಕುಮಾರಸ್ವಾಮಿಯು ಉತ್ಪತ್ತಿರಹಿತ ನಾಗಿಯೂ, ಕರುಣಕ್ಕೆ ಸ್ಥಾನವಾಗಿಯೂ ಸಂಸಾರವಂಬಿಡಿಸುವವನಾಗಿ ಯೂ, ಪರಿಪೂರ್ಣವಾದಾನಂದ ಸ್ವರೂಪನಾಗಿಯೂ ಇರುವ ಪರಮೇಶ್ವರ ನನ್ನು ಸ್ತುತಿಸಿ, ಆತನಪಾದಕಮಲದಲ್ಲಿಟ್ಟ ಭಕ್ತಿಯಭಿಪ್ರಾಯದದೆಸೆಯಿಂ ದಾನಂದದಿಂ ತುಂಬಿದಮನಸ್ಸುಳ್ಳಾತನಾಗಿ ಹೊರಗಣ ಪ್ರಪಂಚವನ್ನೆಲ್ಲವನ ರಿಯಲಿಲ್ಲವೆಂದು ಸೂತಮುನಿ ಹೇಳಿದನು.

ಮೂ ॥ ಯುಷ್ಮಾಕಮದ್ಯಕಥಿತಶ್ರುತಿತಂತ್ರಗೋಪ್ಯೋಮುಕ್ತ್ಯಂಗನೋ
ದ್ವಹನಸಂಘಟನಾಪಟೀಯಾನ್ । ಸಾರಸ್ತುಷಟ್ಸ್ಥಲವಿನಿರ್ಣಯ
ಏಷಲೋಕೇನಾನ್ಯೋಸ್ತ್ಯತಃಪರತರೋಭವಬಂಧಶಾಂತ್ಯೈ ॥೧೫॥

ಟೀ ॥ ಎಲೈ ನೈಮಿಷಾರಣ್ಯವಾಸಿಗಳಾದ ಋಷಿಗಳಿರಾ ನಿಮಗೆ ಈಗ ವೇದಶಾಸ್ತ್ರಂಗಳಲ್ಲಿ ಗೋಪ್ಯವಾಗಿದ್ದಂಥಾ ಮುಕ್ತಿಕಾಂತೆಯ ವಿವಾಹವಂ ಕೈಗೂಡಿಸುವಲ್ಲಿ ಸಮರ್ಥವಾಗಿಯೂ ಸಾರವಾಗಿಯೂ ಇರು ವ ಈ ಷಟ್ಸ್ಥಲ ನಿರ್ಣಯವು ಹೇಳಲ್ಪಟ್ಟಿತು. ಲೋಕದಲ್ಲಿ ಸಂಸಾರ ಬಂಧದಶಾಂತಿಗೋಸ್ಕರ ಈ ಷಟ್ಸ್ಥಲ ಜ್ಞಾನದಿಂದತ್ಯಂತ ಅಧಿಕವಾದ ಮತ್ತೊಂದು ಇಲ್ಲವು.

ಮೂ । ಯೂಯಂಶ್ರದ್ಧಾನ್ವಿತಾವಿಪ್ರಾಸ್ಸ್ಥಲಷಟ್ಕವಿನಿರ್ಣಯಂ ।
ವ್ಯಾಕುರುಧ್ವಂಪ್ರಶಾಂತೇಭ್ಯೋಭಕ್ತಿಮದ್ಭ್ಯೋತಿಮುಕ್ತಿದಂ ।

ಟೀ । ಎಲೈ ಬ್ರಾಹ್ಮಣರುಗಳಿರಾ ನೀವು ವಿಶ್ವಾಸದೊಡನೆ ಕೂ ಡಿದವರುಗಳಾಗಿ ಅತ್ಯಂತ ಮೋಕ್ಷವ ಕೊಡುವಂಥಾ ಭಕ್ತ, ಮಾಹೇಶ್ವ ರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್ಸ್ಥಲಗಳ ನಿರ್ಣಯವ ನ್ನು ಭಕ್ತಿಯನುಳ್ಳಂಥಾ ಅತ್ಯಂತ ಶಾಂತರುಗಳಾದವರಿಗೋಸ್ಕರ ವ್ಯಾ ಖ್ಯಾನವಂ ಮಾಡಿರಿ.

ಮೂ । ಮುಕ್ತ್ಯೈಕಶಾಸ್ತ್ರಕಥನಂ ಪ್ರಕಟೀಕರೋತಿಲಿಂಗಾಂಗಸಂಗವಿ
ಷಯಂ ಪರಮಾರ್ಥಭೂತಂ । ಲೋಕೇತಿದುರ್ಜನಘನೇಸಹಿಲಿಂಗ
ಧಾರೀಮಾಹೇಶ್ವರಶ್ಶ್ರುತಿಪುರಾಣವಿದಾಗಮಜ್ಞಃ ॥ ।೧೬॥

ಟೀ ॥ ವೇದಶಾಸ್ತ್ರಪುರಾಣಂಗಳನ್ನು ಬಲ್ಲಂಥಾ ಆಗಮಂಗಳ ನ್ನು ಬಲ್ಲಂಥಾ ಶಿವನಲ್ಲಿ ಭಕ್ತಿಯುಳ್ಳ ಅವನಾನೋರ್ವ ವೀರಮಾಹೇಶ್ವರ

ನು ಭವಬಂಧವಲ್ಲಿ ಸಿಕ್ಕಿರುವ ದುರ್ಜನರುಳ್ಳಂಥಾ ಲೋಕದಲ್ಲಿ ಅವರು ಸದ್ಗತಿಯಂ ಹೊಂದುವವರ್ಕ್ಕೋಸ್ಕರ ಪರಮಾರ್ಥವಾದ ಲಿಂಗಾಂಗ ಸಂಬಂಧ ವಿಷಯವಾದ ವೀರಶೈವಶಾಸ್ತ್ರದ ಕಥನವನ್ನು ಪ್ರಖ್ಯಾತವಂಮಾಡುತ್ತಿಹನೋ ಆತನು ಶಿವಲಿಂಗಧಾರಣವನುಳ್ಳಾತನೆನಿಸುವನು.

ಮೂ ॥ ತಸ್ಮಾಚ್ಛಿವಕಥಾವಕ್ತ್ರೌರಕ್ಷೆತ್ಸರ್ವಪ್ರಯತ್ನತಃ ।
ತದ್ರಕ್ಷಣಾದ್ಭವಿಷ್ಯಂತಿಮರ್ತ್ಯಾರ್ಧರ್ಮಪರಾಯಣಾಃ ॥ ೧೮ ॥

ಟೀ ॥ ಅದುಕಾರಣ ಶಿವಕಥೆಗಳನ್ನು ಹೇಳುವಂಥಾವರುಗಳನ್ನು ಸರ್ವಪ್ರಯತ್ನದಿಂದಲೂ ರಕ್ಷಿಸಬೇಕು. ಅದರಿಂ ಮನುಷ್ಯರುಗಳು ಶಿವ ಸಂಬಂಧವಹ ಧರ್ಮದಲ್ಲಿ ತಾತ್ಪರ್ಯವನುಳ್ಳವರಾಗುವರು.

ಮೂ ॥ ಯೂಯಂಶ್ರದ್ಧಾನ್ವಿತಾವಿಪ್ರಾರಕ್ಷಧ್ವಂಸರ್ವಭಾವತಃ ।
ಶಿವಾಗಮರಹಸ್ಯಜ್ಞಾಂಛ್ಛಿವಲಿಂಗಾರ್ಚನಾಪರಾ ॥ ೧೯ ॥

ಟೀ ॥ ಎಲೈ ಬ್ರಹ್ಮಋಷಿಗಳಿರಾ ನೀವು ವಿಶ್ವಾಸದೊಡನೆ ಕೂಡಿದವರುಗಳಾಗಿ ಶಿವಲಿಂಗಾರ್ಚನೆಯಲ್ಲಿ ತತ್ಪರರಾದಂಥಾ ಶಿವಾಗಮ ರಹಸ್ಯಂಗಳನ್ನು ಬಲ್ಲಂಥಾ ಮಹಾಪುರುಷರುಗಳನ್ನು ಸರ್ವಪ್ರಯತ್ನದಿಂದಲೂ ರಕ್ಷಿಸಿಕೊಂಡಿರಿ.

ಮೂ ॥ ಯಇಮಂಪಠತೆಧ್ಯಾಯಂವರೋಭಕ್ತಿಸಮನ್ವಿತಃ ।
ಸಸಮ್ಯಜ್ಞಾನವಾನ್ಭೂತ್ವಾಶಿವಸಾಯುಜ್ಯಮಾಪ್ನುಯಾತ್ ॥

ಟೀ ॥ ಆವನಾನೊರ್ವಮನುಷ್ಯನು ಭಕ್ತಿಯೊಡನೆ ಕೂಡಿದಾತನಾಗಿ ಈ ಅಧ್ಯಾಯವನ್ನು ಪಠಿಸುತ್ತಿಹನೋ ಆತನು ಸಮ್ಯಜ್ಞಾನವುಳ್ಳಾತನಾಗಿ ಶಿವಸಾಯುಜ್ಯವನ್ನು ಹೊಂದುವನು.

ಮೂ ॥ ಶೃಣೋತಿಪೂಜಾವೇಳಾಯಾಂಶ್ರಾವಯೆದ್ವಾಸಮಾಹಿತಃ ।
ಪ್ರಸೀದತಿಶಿವಸ್ತಸ್ಯ ನೀಲಕಂಠೋಂಬಿಕಾಪತಿಃ ॥ ॥ ೨೧ ॥

ಟೀ ॥ ಶಿವಪೂಜೆಯ ವೇಳೆಯಲ್ಲಿ ಯಾವನು ಸಮಾಧಾನವನುಳ್ಳಂಥಾವನಾಗಿ ಈ ಅಧ್ಯಾಯವನ್ನು ಕೇಳುತ್ತಿಹನೋ ಕೇಳಿಸುವನೋ ಆತಂಗೆ ಕಪ್ಪು ಗೊರಳನಾದ ಪಾರ್ವತೀರಮಣನಾದ ಮಂಗಳಸ್ವರೂಪನಾದ ಶ್ರೀ ಪರಮೇಶ್ವರನು ಪ್ರಸನ್ನನಾಗುತ್ತಿಹನು.

ಮೂ ॥ ನವಕ್ತವ್ಯಮಿದಂಶಾಸ್ತ್ರಂಭಕ್ತಿಹೀನಾಯಪಾಪಿನೆ ।
ನಾಸ್ತಿಕಾಯಕೃತಘ್ನಾಯಶ್ರದ್ಧಾಹೀನಾಯಜಾತುಚಿತ್ ॥

ಈ ವೀರಶೈವಶಾಸ್ತ್ರವಂ ಶಿವನಲ್ಲಿ ಭಕ್ತಿಯಿತವೆಇದ್ದಂಥಾ ಪಾಪಿ

ಟಾದಂಥಾ ವೇದಶಾಸ್ತ್ರಂಗಳನ್ನು ಹುಸಿಯೆಂದು ನಿರಾಕರಿಸುವಂಥಾ ವಿಶ್ವಾಸವಿಲ್ಲದೆ ಇಪ್ಪಂಥಾ ಕೃತಘ್ನಂಗೋಂಕ್ಕರ ಕದಾಚಿತ್ತಾದರೂ ಹೇಳಲಾಗದು.

ಈಗ ಹೇಳಲ್ಪಟ್ಟ ಭಕ್ತಸ್ಥಲಾದಿ ಷಟ್ಸ್ಥಲಗಳಲ್ಲಿ ಕೆಲವು ಶ್ಲೋಕಗಳು ಸ್ಕಾಂದಪುರಾಣಸ್ಥವಾದ ಶಂಕರ ಸಂಹಿತೆಯಿಂದಲೂ, ಮಿಕ್ಕವುಗಳು ಆಗಮಗಳಿಂದಲೂ ಸಂಗ್ರಹಿಸಿ ಬರೆಯಲ್ಪಟ್ಟವು.

ಇಂತು ನಿರಾಭಾರ ವೀರಶೈವ ಸಾಮ್ರಾಜ್ಯ ಧುರಂಧರ
ನಾದ ತೋಂಟದಸಿದ್ಧೇಶ್ವರನಿಂ ಸಂಗ್ರಹಿಸಲ್ಪ
ಟ್ಟ ವೀರಶೈವಪ್ರದೀಪಿಕೆಯೊಳ್ ಭಕ್ತಾ
ದಿ ಷಟ್ಸ್ಥಲ ಲಕ್ಷಣಂ ಸಂಪೂರ್ಣಂ.

---

## ಅಥಾಷ್ಟಾವರಣ ನಿರೂಪಣಂ.

+*+

ಅವ. "ಗುರುರ್ಲಿಂಗಂಚರಶ್ಚೈವ ಪ್ರಸಾದಃಪಾದವಾರಿಚ । ಭೂತಿರುದ್ರಾಕ್ಷಮಂತ್ರಾಶ್ಚ ಭಕ್ತಾಂಗಮಿತಿಕಥ್ಯತೆ,, ಎಂಬ ಚಂದ್ರಜ್ಞಾನಾಗಮ ವಚನಾನುಸಾರವಾಗಿ ಅಷ್ಟಾವರಣಸ್ವರೂಪವಂ ನಿರೂಪಿಸುವೆನು. ತದಾದಿಯೊಳ್ ಗುರುಲಕ್ಷಣವೆಂತೆನೆ.

ಮೂ ॥ ಏವಮಾಚಾರಸಂಯುಕ್ತೋವೀರಶೈವೋಮಹಾವ್ರತೀ।
ಪೂಜಯೇತ್ಸತತಂಭಕ್ತ್ಯಾಗುರುಂಲಿಂಗಂಚಜಂಗಮಂ ॥ ೧ ॥

ಟೀ ॥ ಈ ಪೂರ್ವೋಕ್ತಪ್ರಕಾರವಾಗಿ ಶಿವಾಚಾರಸಂಪನ್ನನಾದ ವೀರಶೈವ ಮಹಾವ್ರತಿಯು ಉತ್ಕೃಷ್ಟವಾದ ಭಕ್ತಿಯಿಂ ನಿರಂತರದಲ್ಲಿಯೂ ಶ್ರೀ ಗುರುವನ್ನೂ, ಲಿಂಗವನ್ನೂ, ಜಂಗಮವನ್ನೂ, ಪೂಜಿಸಬೇಕು.

ಮೂ ॥ ಗುರೋರಭ್ಯರ್ಚನೇನಾಪಿಸಾಕ್ಷಾದಭ್ಯರ್ಚಿತಶ್ಶಿವಃ ।
ತಯೋರ್ನಾಸ್ತಿಭಿದಾಕಿಂಚಿದೇಕತ್ವಾತ್ತತ್ಸ್ವರೂಪತಃ॥ ॥ ೨ ॥
ಯಥಾದೇವೇಜಗನ್ನಾಥೆ ಸರ್ವಾನುಗ್ರಹಕಾರಕೆ ।
ತಥಾಗುರುವರೇಕುರ್ಯಾದುಪಚಾರಾನ್ನಿವೇದಿತೆ। ॥ ೩ ॥

ಟೀ ॥ ಯಸ್ಯದೇವೇ ಪರಾಭಕ್ತಿ ರ್ಯಥಾದೇವೆ ತಥಾಗುರೌ ॥ ಎಂಬ ಶ್ವೇತಾಶ್ವತರಶ್ರುತಿಯುಂಟಾಗಿ ಪೂಜಕನು ತನಗುಪದೇಶವಂ ಮಾಡಿದ

ಸದ್ಗುರುವಂ ಪೂಜಿಸುವದರಿಂ ಪ್ರತ್ಯಕ್ಷ ಶಿವನೇ ಪೂಜಿಸಲ್ಪಡುವನು. ಅದ
ಕಾರಣದಿಂ ಶಿವಗುರುಗಳು ಪರಮಾರ್ಥ ಪರಾಮರ್ಶದತ್ತಣಿಂದೇಕರೂಪ
ವಾದುದರಿಂ ಕಿಂಚಿತ್ತಾದರೂ ಭೇದವಿಲ್ಲವದುಕಾರಣವಾಗಿ ಸರ್ವ ಜಗನ್ನಾ
ಥಕನಾದ ಸರ್ವಾನುಗ್ರಹಕನಾದ ಪರಶಿವನಲ್ಲಿ ಹ್ಯಾಗೆ ಉಪಚಾರಂಗಳಂ
ಮಾಡುತ್ತಿಹನೋ ಹಾಗೆ ಗುರುಶ್ರೇಷ್ಠನಾದ ಸದ್ಗುರುವಿನಲ್ಲಿ ಛಕ್ತ್ಯು
ಪಚಾರಂಗಳಂ ಪ್ರತಿದಿವಸದಲ್ಲಿಯೂ ಭಕ್ತಸ್ಥಲ ಪ್ರವಿಷ್ಟನು ಬಿಡ
ದಾಚರಿಸತಕ್ಕದು.

ಮೂ ॥ ಅಪ್ರತ್ಯಕ್ಷೋಮಹಾದೇವಸ್ಸರ್ವೇಷಾಮಾತ್ಮಮಾಯಯಾ।
ಪ್ರತ್ಯಕ್ಷೋಗುರುರೂಪೇಣವರ್ತತೇಭಕ್ತಿಸಿದ್ಧಯೆ ॥ ೪ ॥

ಟೀ ॥ ಶಿವನಿಗೂ ಗುರುವಿಗೂ ಅಭೇದವಾದ ಪಕ್ಷದಲ್ಲಿ ಶಿವನಂತೆ
ಗುರುವು ಅಪ್ರತ್ಯಕ್ಷವಾಗಲೆಂದು ಶಂಕೆ ಪ್ರಾಪ್ತಮಾದಲ್ಲಿ ಸಚ್ಚಿದಾನಂದ
ಸ್ವರೂಪಿಯಾದ ಆ ಪರಮೇಶ್ವರನು ತನ್ನ ಮಾಯಾಶಕ್ತಿಯಿಂ ಸಕಲರಿಗೂ
ಅಪ್ರತ್ಯಕ್ಷನಾದರೂ ಭಕ್ತಿ ಸಿಧ್ಯರ್ಥವಾಗಿ ಶ್ರೀ ಸದ್ಗುರು ರೂಪದಿಂ ಪ್ರ
ತ್ಯಕ್ಷನಾಗಿಹನು.

ಮೂ ॥ ಶಿವಜ್ಞಾನಂಮಹಾಘೋರಸಂಸಾರಾರ್ಣವತಾರಕಂ ।
ದೀಯತೇಯೇನಸಗುರುಃಕಸ್ಯವಂದ್ಯೋನಜಾಯತೇ ॥ ೫ ॥

ಟೀ ॥ ಹಾಗಾದರೆ ಶಿವನಂತೆಗುರುವು ಇಷ್ಟಾರ್ಥವಂ ಕೊಡುವ
ದಿಲ್ಲವದರಿಂದೀತನನೇಕೆ ಪೂಜಿಸಬೇಕೆಂದರೆಯಾವನಾನೊಬ್ಬ ಸದ್ಗುರುವಿನಿಂ
ಮಹಾ ಭಯಂಕರವಾದ ಸಂಸಾರ ಸಮುದ್ರವಂ ದಾಟಿಸುವಂಥಾ ಶಿವಜ್ಞಾ
ನ ಮುಪದೇಶಿಸಲ್ಪಡುತ್ತಿಹುದೋ ಅಂಥಾಸದ್ಗುರುವು ಯಾವನಿಂ ನಿಂದಿಸ
ಲು ಪೂಜಿಸಲು ಯೋಗ್ಯನಲ್ಲವಾಗಿರುವನು? ಜನನ ಮರಣ ಪೀಡಿತರಾದ
ಸಕಲಜನರಿಂದಲೂ ವಂದ್ಯನೇಸರಿ. ಎಂದರ್ಥ.

ಮೂ ॥ ಯತ್ಕಟಾಕ್ಷಕಲಾಮಾತ್ರಾತ್ಪರಮಾನಂದಲಕ್ಷಣಂ ।
ಲಭ್ಯತೇಶಿವರೂಪತ್ವಂಸಗುರುಃಕೇನನಾರ್ಚ್ಯತೇ ॥ ೬ ॥

ಟೀ ॥ ಬಳಿಕ ಆ ಶಿವಜ್ಞಾನವೆಂಥಾದ್ದೆಂದರೆ ಅವನಾನೋರ್ವ
ಶ್ರೀಗುರುವಿನ ಕಟಾಕ್ಷ ಲೇಶಮಾತ್ರದಿಂ ಪರಮಾನಂದರೂಪವಾದ ಸ್ವಾತ್ಮ
ಶಿವತ್ವವು ದಶಮದೃಷ್ಟಾಂತದಿಂ ಪ್ರಾಪ್ತಮಾಗುತ್ತಿಹುದೋ ಅಂಥಾ ಗುರು
ವು ಯಾರಿಂದರ್ಚಿಸಲ್ಪಡನು? ಮಾಯಾಮೋಹಿತರಾದ ಸಮಸ್ತರಿಂದಲೂ
ಅರ್ಚಿಸಲ್ಪಡುವನೆಂದಭಿಪ್ರಾಯ.

ಮೂ ॥ ಪಿತವೇವಚರೆನ್ನಿತ್ಯಂ ಶರೀರೇಣಧನೇನಚ ।
ಆಚಾರ್ಯಸ್ಯೋಪಕಾರಂತಸ್ಯ ಶಿವಜ್ಞಾನಮಹೋದಧೇಃ ॥ ೭ ॥
ಗುರೋರಾಜ್ಞಾಂನಲಂಘೇತ ಸಿದ್ಧಿಕಾಮೋಮಹಾಮತಿಃ ।
ತದಾಜ್ಞಾಲಂಘನೇನಾಪಿಶಿವಾಜ್ಞಾಘಾತಕೋಭವೇತ್ ॥ ೮ ॥

ಟೀ ॥ ರಾಗದ್ವೇಷರಹಿತನಾಗಿಯೂ ಶಿವಜ್ಞಾನಕ್ಕೆಸಮುದ್ರನಾಗಿಯೂ ಇರುವ ಶ್ರೀಸದ್ಗುರುವಿನ ಶರೀರದಿಂ ದ್ರವ್ಯದಿಂ ಪಿತವನ್ನೇ ಆಚರಿಸಬೇಕು. ನಿತ್ಯಾನಿತ್ಯವಸ್ತು ವಿವೇಕವುಳ್ಳವನಾಗಿ ಮೋಕ್ಷಾರ್ಥಿಯಾದ ಶಿಷ್ಯನು ಆತನಾಜ್ಞೆಯುಂ ಮೀರಲಾಗದು. ಏನಾದರೂ ಮೀರಿದರೆ ಶಿವನಾಜ್ಞಾಭಂಗವಂಮಾಡಿದವನಹನು. ಅದರಿಂ ನರಕವೇ ಪ್ರಾಪ್ತವಹುದು.

ಮೂ ॥ ಗುರುರೇವಾತ್ರಸರ್ವೇಷಾಂಕಾರಣಂಸಿದ್ಧಿಕರ್ಮಣಿ ।
ಗುರುರೂಪೋಮಹಾದೇವೋಯತಸ್ಸಾಕ್ಷಾದುಪಸ್ಥಿತಃ ॥ ೯ ॥

ಟೀ ॥ ಯಾವುದಾನೊಂದು ಕಾರಣದಿಂ ಶಿವನೇ ಪ್ರತ್ಯಕ್ಷವಾದ ಗುರುವಾಗಿರುತ್ತಿಹನೋ ಅದುಕಾರಣದಿಂದೀಲೋಕದಲ್ಲಿ ಭೋಗ ಮೋಕ್ಷಪ್ರದವಾದ ಸಕಲ ಸಿದ್ಧಿ ಕರ್ಮಗಳಿಗೂ ಶ್ರೀ ಸದ್ಗುರುವೇ ಕಾರಣನಾಗಿರುವನು.

ಮೂ ॥ ನಿಷ್ಕಳೋಹಿಮಹಾದೇವೋನಿತ್ಯಜ್ಞಾನಮಹೋದಧಿಃ ।
ಸಕಲೋಗುರುರೂಪೇಣಸರ್ವಾನುಗ್ರಾಹಕೋಭವೇತ್ ॥ ೧೦ ॥

ಟೀ ॥ ಮತ್ತಂ ನಿಷ್ಕಲನಾದ ಶಿವನದೇನುಕಾರಣ ಸಕಲನಾದ ಗುರುರೂಪದಿಂ ಪ್ರಕಾಶಿಸುತ್ತಿಹನೆಂದರೆ ನಿತ್ಯಜ್ಞಾನ ಸಮುದ್ರನಾದ ಮಹೇಶ್ವರನು ನಿಷ್ಕಳನೂನಿರವಯವನೂ ಆದರೂ ಗುರುರೂಪದಿಂ ಸಕಲನಾಗಿ ಸಕಲಾನುಗ್ರಾಹಕನಾಗಿರುವನು ಅದುಕಾರಣದಿಂ ಶಿವಗುರುಗಳಿಗೆಭೇದವಿಲ್ಲವು.

ಮೂ ॥ ಹಸ್ತಪಾದಾದಿಸಾಮ್ಯೇನ ನೇತರೈಸ್ಸದೃಶಂವದೇತ್ ।
ಆಚಾರ್ಯಂಜ್ಞಾನದಂಶುದ್ಧಂ ಶಿವರೂಪತಯಾಸ್ಥಿತಂ ॥ ೧೧ ॥
ಆಚಾರ್ಯಸ್ಯಾವಮಾನೇನಶ್ರೇಯಃಪ್ರಾಪ್ತಿರ್ವಿಹನ್ಯತೇ ।
ತಸ್ಮಾನ್ನಿಶ್ಶ್ರೇಯಸಃಪ್ರಾಪ್ತ್ಯೈಪೂಜಯೇತ್ತಂಸಮಾಹಿತಃ ॥೧೨

ಟೀ ॥ ಯಥಾಹಂ ಸರ್ವಲೋಕಾನಾಂ ಗುರುರಂಬಿಕಯಾಸಹ ಎಂಬಾಗಮಪ್ರಮಾಣದಿಂ ನಿರ್ಮಲಾಂತಃಕರಣನಾದ ಶಿವಜ್ಞಾನಪ್ರದಾಯಕನಾದ ಉಮಾಮಹೇಶ್ವರರೂಪದಿಂದಿರುವ ಶ್ರೀಗುರುಸ್ವಾಮಿಯಂ ಹಸ್ತ

ಪಾದಾದಿ ಸಾವ್ಯದಿಂ ಪ್ರಾಕೃತರಿಗೆ ಸಮಾನನನ್ನಾಗಿ ನುಡಿಯಲಾಗದು. ಅದರಿಂದೇನಾಗುವದೆಂದರೆ ಆಚಾರ್ಯ ನಿಗವಮಾನವಂಮಾಡಿದ್ದರಿಂ ಭೋಗ ಮೋಕ್ಷರೂಪವಾದ ಶ್ರೇಯಸ್ಸು ಕೆಡುವದು. ಆದುಕಾರಣದಿಂ ಭೋಗಮೋಕ್ಷಾರ್ಥವಾಗಿ ಏಕಾಗ್ರಚಿತ್ತದಿಂದ ಶ್ರೀ ಸದ್ಗುರುವಂ ಪೂಜಿಸಲ್ತಕ್ಕುದು.

ಮೂ ॥ ಗುರುಭಕ್ತಿವಿಹೀನಸ್ಯ ಶಿವಭಕ್ತಿರ್ನಜಾಯತೆ ।
ತತಶ್ಶಿವೆಯಥಾಭಕ್ತಿಸ್ತಥಾಭಕ್ತಿರ್ಗುರಾವಪಿ॥ ॥ ೧೨ ॥

ಟೀ ॥ ಗುರುಭಕ್ತಿ ಇಲ್ಲದವಂಗೆ ಶಿವಭಕ್ತಿಯೇ ಹುಟ್ಟದು. ಅದು ಕಾರಣವಾಗಿ ಶ್ರೀ ಪರಶಿವನಲ್ಲಿ ಹ್ಯಾಗೆ ಭಕ್ತಿಯು ಮಾಡಲ್ಪಡುತ್ತಿಹುದೋ ಹಾಗೆ ಗುರುವಿನಲ್ಲಿಯೂ ಭಕ್ತಿಯಂ ಮಾಡಬೇಕು.

ಮೂ ॥ ಪೂಜಯೆಲ್ಲೋಕವಿಖ್ಯಾತಂಲೊಭಮೋಹವಿವರ್ಜಿತಂ ।
ಆತ್ಮತತ್ವವಿಚಾರಜ್ಞಂವಿಮುಕ್ತವಿಷಯಭ್ರಮಂ ॥ ॥ ೧೪ ॥
ಶಿವಸಿದ್ಧಾಂತತತ್ವಜ್ಞಂಛಿನ್ನಸಂದೇಹವಿಭ್ರಮಂ ।
ಸರ್ವತಂತ್ರಪ್ರಯೊಗಜ್ಞಂಧಾರ್ಮಿಕಂಸತ್ಯವಾದಿನಂ ॥ ೧೫ ॥
ಕುಲಕ್ರಮಗತಾಚಾರಂಕುಮಾರ್ಗಾಚಾರವರ್ಜಿತಂ ।
ಶಿವಜ್ಞಾನಪರಂಶಾಂತಂಶಿವತತ್ವವಿವೇಕಿನಂ॥ ॥ ೧೬ ॥
ಭಸ್ಮೋದ್ಧೂಳನನಿಷ್ಣಾತಂಭಸ್ಮತತ್ವವಿವೆಕಿನಂ ।
ತ್ರಿಪುಂಡ್ರಧಾರಣೊತ್ಕಂಠಂ ಧೃತರುದ್ರಾಕ್ಷಮಾಲಿಕಂ ॥ ೧೭ ॥
ಲಿಂಗಧಾರಣಸಂಯುಕ್ತಂಲಿಂಗಪೂಜಾಪರಾಯಣಂ ।
ಲಿಂಗಾಂಗಯೊಗತತ್ವಜ್ಞಂಸಿರೂಢಾದ್ವೈತ್ಯವಾಸಿನಂ ॥ ೧೮ ॥
ಲಿಂಗಾಂಗಸ್ಥಲಭೆದಜ್ಞಂಶ್ರೀ ಗುರುಂಶಿವವಾದಿನಂ ।

ಟೀ ॥ ಯಾವ ಲಕ್ಷಣವಿಶಿಷ್ಟನಾದವನು ಸದ್ಗುರುವು ಎಂದರೆ ಲೋಕಪ್ರಸಿದ್ಧನು ಲೊಕಜ್ಞಾನರಹಿತನು. ದೆಹೇಂದ್ರಿಯಾದಿ ವ್ಯತಿರಿಕ್ತವಾದ ಆತ್ಮನ ಯಥಾರ್ಥಸ್ವರೂಪವಂ ಬಲ್ಲವನು ಶಬ್ದಾರ್ಥಮಯ ಪ್ರಪಂಚವೆಲ್ಲಂ ಶಿವಶಕ್ತ್ಯಾತ್ಮಕವೆಂಬ ವಿಷಯಬಲದಿಂ ಘಟಾದಿ ವಿಷಯಂಗಳಲ್ಲಿ ಬಿಡಲ್ಪಟ್ಟ ಭೇದ ಭ್ರಾಂತಿಯುಳ್ಳವನು ಅದುಕಾರಣದಿಂದಲೇ ಪೃಥವಾದ ಅದ್ವೈತಸಂಸ್ಕಾರವುಳ್ಳವನು ಶಿವಾಗಮ ಸಿದ್ಧಾಂತವಂಬಲ್ಲಾತನು ಭೇದಿಸಲ್ಪಟ್ಟ ಸಂಶಯವುಳ್ಳವನು ಚತುಷ್ಷಷ್ಟಿತಂತ್ರಪ್ರಯೋಗಂಗಳಂ ತಿಳಿದಾತನು ಶಿವಧರ್ಮನಿಷ್ಠನು ಯಥಾರ್ಥವನ್ನೇ ನುಡಿವವನು ಗುರುಪಾರಂಪರ್ಯಪ್ರಾಪ್ತವಾದ ಶಾಸ್ತ್ರೀಯವಾದ ಸದಾಚಾರವು

ಳ್ಳವನು ಶಿವಮಾರ್ಗಾಚಾರರಹಿತನು ಕುಲಪ್ರಾಪ್ತಕು ಸಮಯಾಚಾರ ಶೂನ್ಯನು ಶಿವಲಿಂಗಚಿಂತಾರತನು ರಾಗದ್ವೇಷರಹಿತನು ಶಿವಪರಶಿವ ಸ್ವರೂಪವಂತಿಳಿದವನು ಭಸ್ಮೋದ್ಧೂಳನ ಕ್ರಿಯೆಯಲ್ಲಿ ನಿಪುಣನು ಭಸ್ಮಸ್ವರೂಪ ವಿವೇಕವುಳ್ಳವನು ತ್ರಿಪುಂಡ್ರಧಾರಣದಲ್ಲಿಲವಲವಿಕೆಯುಳ್ಳವನು ಧರಿಸಲ್ಪಟ್ಟ ರುದ್ರಾಕ್ಷಮಾಲೆಯುಳ್ಳವನು ಬಾಹ್ಯಾಂತರಗಳಲ್ಲಿ ಲಿಂಗಧಾರಿಯಾದವನು ತತ್ಪೂಜಾನಿಷ್ಠನು ಶಿವಜೀವರ ಸಂಬಂಧವಂ ತಿಳಿದವನು ಲಿಂಗಾಂಗಸ್ಥಲಗತವಾದ ಏಕೋತ್ತರ ಶತಸ್ಥಲ ಭೇದವಂ ತಿಳಿದವನು ಶುಭವಾಕ್ಯವನ್ನೇ ನುಡಿಯುವವನು ಏವಮಾದಿಸದ್ಗುಣ ವಿಶಿಷ್ಟನಾದ ಸದ್ಗುರುವಂತನು ಮನೋಧನಂಗಳಿಂದ ಸರ್ವಥಾ ಪೂಜಿಸಬೇಕು.

ಇಂತು ನಿರಾಭಾರ ವೀರಶೈವ ಸಾಮ್ರಾಜ್ಯ ಧುರಂಧರನಾದ ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ವೀರಶೈವಪ್ರದೀಪಿಕೆಯೊಳ್ ಅಷ್ಟಾವರಣಪ್ರಕರಣೆ ಗುರುಲಕ್ಷಣ ನಿರೂಪಣಂ.

---

## ಅಥಲಿಂಗಲಕ್ಷಣನಿರೂಪಣಂ.

—:*:—

ಅವ. ಗುರುಲಕ್ಷಣವಂ ಪೇಳಿದನಂತರಂ ಶಿವಲಿಂಗಮೂರ್ತಿಯ ಲಕ್ಷಣವಂ ನಿರೂಪಿಸುವೆನೆಂತೆನೆ.

ಮೂ। ಗುರುಮಾಹಾತ್ಮ್ಯಯೋಗೇನನಿಜಜ್ಞಾನಾತಿರೇಕತಃ।
ಲಿಂಗಸ್ಯಾಪಿಚಮಹಾತ್ಮ್ಯಂಸರ್ವೋತ್ಕೃಷ್ಟಂವಿಭಾವ್ಯತೆ। ೧।

ಟೀ। ಗುರುಮಹತ್ವಜ್ಞಾನಯೋಗದಿಂ ನಿಜಜ್ಞಾನೊದ್ರೇಕದತ್ತಣಿಂ ಶಿವಲಿಂಗದ ಮಹತ್ವವು ಸರ್ವೋತ್ಕೃಷ್ಟವಾಗಿ ತಿಳಿಯಲ್ಪಡುವದು.

ಮೂ। ✓ಶಿವಸ್ಯಬೊಧಲಿಂಗಂಯದ್ಗುರುಬೊಧಿತಚೆತಸಾ।
ತದೆವಲಿಂಗಂವಿಜ್ಞೇಯಂಶಾಂಕರಂಸರ್ವಕಾರಣಂ। ೨।

ಟೀ। ಲಿಂಗಜ್ಞಾನ ಹೊರತಾಗಿ ಲಿಂಗಮಹತ್ವಜ್ಞಾನಕೂಡದಲ್ಲಾ! ಅದರಿಂ ಲಿಂಗಸ್ವರೂಪವೇತರಿಂ ತಿಳಿಯಲ್ಪಟ್ಟತೆಂದರೆ ಶಿವನಯಾವುದಾನೊಂದು ಚಿನ್ಮಯ ಲಿಂಗವುಂಟೋ ಅದು ವಿಷ್ಣ್ವಾದಿ ಸಕಲ ವಿಶ್ವಕ್ಕೂ ಮೂಲಕಾರಣವಾದ ಲಿಂಗವೆಂದು ಗುರುವಿನಿಂದ ತಿಳುಹಲ್ಪಟ್ಟ ಅಂತಃಕರಣವುಳ್ಳವನಿಂ ತಿಳಿಯಲುಯೋಗ್ಯವು.

ಮೂ ॥ ಪರಂಪವಿತ್ರಮಮಲಂಲಿಂಗಂಬ್ರಹ್ಮಸನಾತನಂ।
ಶಿವಾಭಿಧಾನಂಚಿನ್ಮಾತ್ರಂಸನಾನಂದಂನಿರಂಕುಶಂ ॥ ೩ ॥
ಕಾರಣಂಸರ್ವಲೋಕಾನಾಂದೇವಾನಾಮಪಿಕಾರಣಂ ।
ಪೂರಣಂಸರ್ವತತ್ವಸ್ಯತಾರಣಂಜನ್ಮವಾರಿಧೇಃ ॥ ೪ ॥
ಜ್ಯೋತಿರ್ಮಯಮನಿರ್ದೇಶ್ಯಂಯೋಗಿನಾಮಾತ್ಮನಿಸ್ಥಿತಂ ।
ಕಥಂವಿಜ್ಞಾಯತೇಲೋಕೇಮಹಾಗುರುದಯಾಂವಿನಾ ॥ ೫ ॥

ಟೀ ॥ ಆ ಶಿವಲಿಂಗಮೂರ್ತಿ ಎಂಥಾದ್ದೆಂದರೆ ಚರಾಚರಪ್ರಪಂಚಕ್ಕಿಂತಲೂ ಶ್ರೇಷ್ಠವಾಗಿ ಪವಿತ್ರವಾಗಿ ನಿರ್ಮಲವಾಗಿ ನಿತ್ಯವಾಗಿ ಶಿವನೆಂಬ ಹೆಸರುಳ್ಳದ್ದಾಗಿ ಚಿದಾನಂದರೂಪವಾಗಿ ತಡೆಯಿಲ್ಲದ್ದಾಗಿ ಸರ್ವಲೋಕಕ್ಕೂ ಕಾರಣವಾಗಿ ವಿಷ್ಣ್ವಾದಿ ದೇವತೆಗಳಿಗೂ ಕಾರಣವಾಗಿ ಮಯೂರಾಂಡರಸನ್ಯಾಯದಿಂ ಸಕಲ ತತ್ವಂಗಳಿಂದಲೂ ಪೂರ್ಣವಾಗಿ ಸಂಸಾರ ಸಮುದ್ರವಂದಾಟಿಸುವದಾಗಿ ಜ್ಯೋತಿರ್ಮಯವಾಗಿ ಯೋಗಿಗಳಿಂದಲೂ ಕಂಡುಹಿಡಲ್ಬಾರದ್ದಾಗಿ ತನ್ನ ನಿಜಸ್ವರೂಪದಲ್ಲಿಯೇ ಇರುವಂಥಾ ಪರಬ್ರಹ್ಮ ಮಹಾಲಿಂಗವು "ತದ್ವಾಜ್ಞಾನಂಸದ್ಗುರೋ ಜ್ಞೇಯಂನಾನ್ಯಥಾ ಶಾಸ್ತ್ರಕೋಟಿಭಿಃ" ಹೀಗೆಂಬ ಶಿವರಹಸ್ಯವಚನಾನುಸಾರದಿಂ ಲೋಕದಲ್ಲಿ ಮಹಾ ಗುರುದಯೆ ಹೊರತಾಗಿ ಯಾವಪ್ರಕಾರದಿಂದಲೂ ತಿಳಿಯಲ್ಪಡದು.

ಅವ. ಬಳಿಕ ಅಸ್ಮದಾದಿಗಳಿಗಾ ಲಿಂಗಮೂರ್ತಿಯು ಳಿಯದೆಂಬುದರಿಂ ಗುರುಕೃಪೆ ಬೇಕಲ್ಲದೆ ಸರ್ವಜ್ಞರಾದ ಬ್ರಹ್ಮಾದಿಗಳಿಗೆ ಗುರುಕೃಪೆ ಬೇಡವಲಾ ಎಂದರೆ.

ಮೂ ॥ ಬ್ರಹ್ಮಣಾವಿಷ್ಣುನಾಪೂರ್ವಂಯಲ್ಲಿಂಗಂಜ್ಯೋತಿರಾತ್ಮಕಂ ।
ಅಪರಿಚ್ಛೇದ್ಯಮಭವತ್ಕೇನವಾಪರಿಚೋದ್ಯತೇ ॥ ॥ ೬ ॥

ಟೀ ॥ ವರಾಹೋವಿಷ್ಣುರ್ನಿಮಮಜ್ಜ ಭೂಮೌಬ್ರಹ್ಮೋತ್ಪಪಾತದಿವಮಾಶುಗೃಧ್ರಃ ॥ ಹೀಗೆಂಬ ಲಿಂಗಸೂತ್ರಾನುಸಾರದಿಂ ಜ್ಯೋತಿರ್ಮಯವಾದ ಯಾವುದಾನೊಂದು ಲಿಂಗವುಪೂರ್ವದಲ್ಲಿ ಬ್ರಹ್ಮನಿಂದಲೂ ವಿಷ್ಣುವಿನಿಂದಲೂ ತಿಳಿಯಲುಶಕ್ಯವಲ್ಲದಂಥಾದ್ದಾಯಿತು. ಅಂಥಾ ಮಹಾಲಿಂಗವು ಯಾರಿಂದಲೂ ತಿಳಿಯಲುಶಕ್ಯವಲ್ಲ.

ಅವ. ಹಾಗಾದರೆ ಬ್ರಹ್ಮಾದಿಗಳಿಗೂ ಅಗೋಚರವಾದ ಆ ಶಿವಲಿಂಗಮೂರ್ತಿಯು ಎಂಥಾದ್ದೆಂದರೆ.

ಮೂ ॥ ಬಹುನಾಥಕಿಮುಕ್ತೈನಲಿಂಗಂಬ್ರಹ್ಮಸನಾತನಂ।
ಯೇಗಿನೋಯತ್ರಲೀಯಂತೆಮುಕ್ತಾಪಾಶೈಬಂಧನಾಃ ॥ ೭ ॥

ಟೀ ॥ ಈ ವಿಷಯದಲ್ಲಿ ಬಹುಮಾತಿನಿಂದೇನು ಪ್ರಯೋಜನವು? ವಿಶ್ವದಲಯ ಗಮನ ಕಾರಣವಾದ ಬ್ರಹ್ಮವೇ ಲಿಂಗವು. ಯಾವುದಾನೊಂದು ಪರಬ್ರಹ್ಮ ಮಹಾಲಿಂಗದಲ್ಲಿ ಸನಕಾದಿಯೋಗಿಗಳು ಬಿಡಲ್ಪಟ್ಟ ಅವಿದ್ಯಾದಿ ಪಂಚಪಾಶ ಸಮೂಹವುಳ್ಳವರಾಗಿ ತಾದಾತ್ಮ್ಯವಂಪಡೆದರು.

ಮೂ ॥ ಪೀಠಿಕಾಪರಮಾಶಕ್ತಿರ್ಲಿಂಗಂಸಾಕ್ಷಾತ್ಪರಶ್ಶಿವಃ।
ಶಿವಶಕ್ತಿಸಮಾಯೋಗೋವಿಶ್ವಂಲಿಂಗಂತದುಚ್ಯತೆ ॥ ೮ ॥

ಟೀ॥ ಬಳಿಕ ಬ್ರಹ್ಮವೇ ಲಿಂಗವಹೆಡರೆ ತತ್ಪೀಠವಾವುದೆನೆ "ಕ್ರಿಯಾಶಕ್ತ್ಯಾತ್ಮಕಂಪೀಠಂ ಜ್ಞಾನಶಕ್ತ್ಯಾತ್ಮಕಃಪ್ರಭೋಃ" ಹೀಗೆಂಬ ಶಿವಾಗಮ ವಚನದಿಂ ಸರ್ವೋತ್ಕೃಷ್ಟಮಾದ ಕ್ರಿಯಾಶಕ್ತಿಯೇ ಪೀಠವು ಚಿದ್ರೂಪನಾದ ಪರಮೇಶ್ವರನೇ ಲಿಂಗವು ಈ ಪ್ರಕಾರಮಾದ ಶಿವಶಕ್ತಿಯೋಗವುಳ್ಳ ಅ "ಶಿವಲಿಂಗವುಜ್ಞಾನಕರ್ಮೇಂದ್ರಿಯೈರ್ವಿಶ್ವಂಚಿತ್ರಿನಾಲಿಂಗರೂಪಕಂ" ಹೀಗೆಂಬ ಪುರಾಣವಚನಗಳಿಂ ಸಕಲ ಜಗದ್ರೂಪಮಾದದ್ದೆಂದು ತಾತ್ಪರ್ಯ.

ಅವ. ಹಾಗಾದರೆ ಶಿವನಿಗೂ ವಿಶ್ವಾಧಿಕತ್ವಾದಿ ಮಹೈಶ್ವರ್ಯಂಮತ್ತೊಬ್ಬ ಮಹಾಪುರುಷನ ಪೂಜೆಯಿಂದುಂಟಾಯಿತೋ ಎಂದರೆ.

ಮೂ ॥ ಬ್ರಹ್ಮಾದಯಸ್ಸುರಾಸ್ಸರ್ವೇಮುನಯಶ್ಶೌನಕಾದಯಃ।
ಶಿವಲಿಂಗಾರ್ಚನಾದೇವಸ್ವಂಸ್ವಂಪದಮವಾಪ್ನುಯುಃ ॥ ೯ ॥

ಟೀ ॥ ಬ್ರಹ್ಮಾದಿ ದೇವತೆಗಳು ಶೌನಕಾದಿ ಋಷಿಗಳು ಶಿವಲಿಂಗ ಪೂಜೆಯಿಂದಲೇ ತಮ್ಮ ತಮ್ಮ ಸತ್ಯಲೋಕಾದಿ ಸ್ಥಾನಂಗಳಂ ಪಡದರು. ಅದಕಾರಣ ತಪಶ್ರಿಯೆಮರುತ್ಃ ಎಂಬ ಶ್ರುತಿಯುಂಟಾಗಿ ಪರಬ್ರಹ್ಮ ಮಹಾಲಿಂಗವೇ ಸಕಲರಿಂದಲೂ ಪೂಜ್ಯವೆಂದರ್ಥ.

ಮೂ ॥ ವಿಶ್ವಾಧಿಕತ್ವವಿಶಸ್ಯಲಿಂಗಮೂರ್ತೇಸ್ಸ್ವಭಾವಜಂ।
ಅನನ್ಯದೇವಸಾಧ್ಯಶ್ಚಂಶ್ರುತಿರಾಹಸನಾತನೀ ॥ ॥ ೧೦ ॥

ಟೀ ॥ ವಿಶ್ವಾಧಿಕೋರುದ್ರೋ ಮಹರ್ಷಿರ್ಹಿರಣ್ಯಗರ್ಭಂ ಜನಯಾಮಾಸಪೂರ್ವಂ। ನತತ್ಸಮಶ್ಚಾಭ್ಯಧಿಕಶ್ಚದೃಶ್ಯತೆ॥ ಹೀಗೆಂಬ ಶ್ವೇತಾಶ್ವತರ ಶ್ರುತಿಯಿಂ ಚಿಲ್ಲಿಂಗಮೂರ್ತಿಯಾದ ಪರಮೇಶ್ವರಂಗೆ ವಿಶ್ವಾಧಿಕತ್ವ ವಿಶ್ವಸೃಷ್ಟ್ಯಾದಿ ಮುಂತಾದವು ಸ್ವಾಭಾವಿಕವು ದೇವತಾಂತರ ಸಾಧಾರಣವಲ್ಲವೆಂದು ನಿತ್ಯವಾದ ಶ್ರುತಿ ಹೇಳುತ್ತಿಹುದು.

ಮೂ ‖ ಮಹನೀಯಂಪ್ರೂಜ್ಯತರಂಲಿಂಗಂಲಕ್ಷತ್ರಿಚೆಯಸ್ಯತು ।
ತನ್ಮಹಾಲಿಂಗಮಿತ್ಯುಕ್ತಂವೀರಶೈವವಿಶಾರದೈಃ ‖

ಟೀ ‖ ಯಾವಲಿಂಗಕ್ಕೆ ಅತ್ಯುತ್ತಮವಾಗಿಯೂ, ಅತ್ಯಂತವಾಗಿ ಪೂಜಿಸಲ್ಪಡುವದಕ್ಕೆ ಯೋಗ್ಯವಾದದ್ದಾಗಿಯೂ, ಇರುವ ಚಿಹ್ನೆಯುಂಟೋ ಆ ಲಿಂಗವು ವೀರಶೈವ ಸಿದ್ಧಾಂತವಂ ಬಲ್ಲವರಿಂದ ಮಹಾಲಿಂಗವೆಂದು ಹೇಳಲ್ಪಟ್ಟಿತು.

ಮೂ ‖ ನಾದಸ್ಸ್ಯಾನ್ನಿಷ್ಕಲಗುರುರ್ಬಿಂದುಸ್ಸ್ಯಾಚ್ಛೂನ್ಯಲಿಂಗಕಂ।
ನಿರಂಜನೋಜಂಗಮೋಯಂಕಲಾರೂಪಇತೀರಿತಃ ‖
ತ್ರಿಭಿರೇತೈಸ್ಸಮಾಯುಕ್ತಂ ಮಹಾಲಿಂಗಮಭೂತ್ಸ್ವಯಂ ‖

ಟೀ ‖ ನಾದವೇ ಗುರುವು, ಬಿಂದುವೇ ಶೂನ್ಯಲಿಂಗವು, ನಿರಂಜನ ಜಂಗಮವೇ ಕಲೆಯು, ಈ ಮೂರರಿಂದ ಕೂಡಿದುದೇ ಮಹಾಲಿಂಗವೆನಿಸುವದು.

ಮೂ ‖ ಮಹಾಲಿಂಗಮಿದಂದೇವಿಮನೋತೀತಮಗೋಚರಂ ।
ನಿರ್ನಾಮನಿರ್ಗುಣಂನಿತ್ಯಂನಿರಂಜನನಿರಾಮಯಂ ‖
ನಿರ್ಮಲಂನಿಷ್ಕಲಂಜ್ಞೇಯಂನಿರ್ಭೇದಂನಿರುಪಾಧಿಕಂ ।
ಅದ್ವೈತಾನಂದಮಕ್ಷೀಣಮಸಾದೃಶ್ಯಮಿದಂಶೃಣು ‖

ಟೀ ‖ ಮೇಲೆ ಹೇಳಲ್ಪಟ್ಟ ಮಹಾಲಿಂಗವು ಮನಸ್ಸನ್ನು ಅತಿಕ್ರಮಿಸಿದ್ದಾಗಿಯೂ, ಕಣ್ಣಿಗೆ ಕಾಣಿಸದೆ ಇರುವದಾಗಿಯೂ, ಹೆಸರಿಲ್ಲದ್ದಾಗಿಯೂ, ಕಲಾರಹಿತವಾದದ್ದಾಗಿಯೂ, ಸ್ವಗತ,ಸಜಾತೀಯ, ವಿಜಾತೀಯ ಭೇದಗಳಿಲ್ಲದ್ದಾಗಿಯೂ, ದೀಪಕ್ಕೆ ತೈಲಾದಿಗಳಂತೆ ತನಗೆ ಯಾವಉಪಾಧಿಯೂ ಇಲ್ಲದುದಾಗಿಯೂ, ಸಂಪೂರ್ಣವಾದ ಆನಂದಸ್ವರೂಪವಾಗಿಯೂ, ಕ್ಷೀಣಿಸದೆ ಇರುವದಾಗಿಯೂ, ಹೋಲಿಕೆಯಿಲ್ಲದ್ದಾಗಿಯೂ ಇರುವದು.

ಮೂ ‖ ಗೋಳಕಂಪರತತ್ವಂಚಚಿನ್ಮಯಂಸದ್ವಿಲಾಸಕಂ ।
ಶರಣ್ಯಂಸರ್ವತತ್ವಾನಾಂಲಿಂಗಾಕಾರೇಣವರ್ತತೆ ‖

ಟೀ ‖ ಜ್ಞಾನಸ್ವರೂಪವಾಗಿಯೂ, ಸದ್ರೂಪವಾಗಿಯೂ, ಸಕಲ ತತ್ವಗಳಿಗೂ ಆಶ್ರಯುವಾಗಿಯೂ, ಇರುವ ಪರತತ್ವ ಮಂಡಲವು ಲಿಂಗಾಕಾರದಿಂದಿರುವದು.

ಮೂ ‖ ನಾದೋಲಿಂಗಮಿತಿಜ್ಞೇಯಂಬಿಂದುಃಪೀಠಮುದಾಹೃತಃ ।
ನಾದಬಿಂದುಯುತಂರೂಪಂಲಿಂಗಾಕಾರಮಿಹೋಚ್ಯತೆ ‖

ಬಿಂದುಶ್ಶಕ್ತಿಶ್ಶಿವೋನಾದಃಕಲಾಸಂಯೋಗಪವಚ ।
ಶಿವಶಕ್ತ್ಯೋರ್ಭವೇದ್ಯೋಗೋಜಗತ್ಸೃಷ್ಟ್ಯರ್ಥಕಾರಣಂ ॥

ಟೀ ॥ ನಾದವೇ ಲಿಂಗವಾಗಿಯೂ, ಬಿಂದುವೇ ಪೀಠವಾಗಿಯೂ ಹೇಳಲ್ಪಡುತ್ತದೆ. ಈ ನಾದ ಬಿಂದುಗಳಿಂದ ಕೂಡಿದ ರೂಪವೇ ಲಿಂಗಾಕಾರವೆಂದು ಹೇಳಲ್ಪಡುತ್ತದೆ. ಬಿಂದುವೇ ಶಕ್ತಿಯು, ನಾದವೇ ಶಿವನು, ಕಲೆಯೇ ಸಂಯೋಗವು. ಶಿವಶಕ್ತಿಗಳ ಸಂಯೋಗವೇ ಜಗತ್ತಿನ ಸೃಷ್ಟಿಗೆ ಕಾರಣವು.

ಮೂ ॥ ಚರಾಚರಾತ್ಮಕಮಿದಂಗವ್ಯತೆಯತ್ರಲೀಯತೆ ।
ಉತ್ಪದ್ಯತೆಯತೋಭೂಯಸ್ತಲ್ಲಿಂಗಂಪರಮಿಷ್ಯತೆ ॥
ಬ್ರಹ್ಮಾಂಡಕೋಟಯಸ್ತಸ್ಯನಿರ್ಮಾತುರ್ಲಿಂಗರೂಪಿಣಃ ।
ಶಿವಸ್ಯಕುಕ್ಷಿಜಲಧೌಜಾಯಂತೆಬುದ್ಬುದೋಪಮಾಃ ।
ಬ್ರಹ್ಮವಿಷ್ಣ್ವಾದಯಸ್ಸರ್ವೆದೇವಾವೆದಾದಯಸ್ತಥಾ ॥
ಲೀಯಮಾನಾಶ್ಚಗವ್ಯಂತೆತಲ್ಲಿಂಗಂಬ್ರಹ್ಮಕೇವಲಂ ॥

ಟೀ ॥ ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವು ಎಲ್ಲಿ ತೋರುವದೋ ಎಲ್ಲಿ ಅಡಗುವದೋ ತಿರಿಗಿ ಯಾತರಿಂದ ಹುಟ್ಟುವದೋ ಅದೇ ಲಿಂಗವೆನಿಸುವದು. ಪ್ರೇರಕನಾದ ಲಿಂಗಮೂರ್ತಿಯಾದ ಶಿವನ ಉದರವೆಂಬ ಸಮುದ್ರದಲ್ಲಿ ಅನೇಕ ಬ್ರಹ್ಮಾಂಡಗಳು ಗುಳ್ಳೆಗಳಿಗೆ ಸಮಾನವಾಗಿ ಹುಟ್ಟುತ್ತವೆ. ಬ್ರಹ್ಮ ವಿಷ್ಣು ಮೊದಲಾದ ಸಕಲ ದೇವತೆಗಳೂ ವೇದ ಮೊದಲಾದವುಗಳೂ ಯಾವದರಲ್ಲಿ ಅಡಗಿದ್ದು ಹೊರಗೆ ತೋರುವವೋ ಅದೇ ಬ್ರಹ್ಮವು ಲಿಂಗವೆನಿಸುವದು.

ಮೂ ॥ ನಮಃಪೀಠಮಿತಿಪ್ರೋಕ್ತಂಶಿಕಾರಂಮಧ್ಯಮಿರಿತಂ ।
ವಾಕಾರಂಗೋಮುಖಂಪ್ರೋಕ್ತಂ ಯಕಾರಂಗೋಳಕಂಸ್ಮೃತಂ ॥
ಓಂಕಾರಂಲಿಂಗಮಾಖ್ಯಾತಂಷಡ್ವರ್ಣಂಲಿಂಗಮುಚ್ಯತೆ ॥

ಟೀ ॥ ನಕಾರ ಮಕಾರಗಳೇ ಪೀಠವು, ಶಿಕಾರವೇ ನಡುವು, ಮಕಾರವೇ ಗೋಮುಖವು, ಓಂಕಾರವೇ ಲಿಂಗವು. ಹೀಗೆ ಷಡಕ್ಷರವೇ ಲಿಂಗವೆಂದು ಹೇಳಲ್ಪಟ್ಟಿತು.

ಮೂ ॥ ಶ್ರವಣಂಕೀರ್ತನಂಶಂಭೋರ್ಮನನಂವೆದಸಂಮತಂ ।
ತ್ರಿಪುಟಂಸಾಧನಂಮುಕ್ತ್ಯೈವಿದ್ಯತೆವೆದಸಂಮತಂ ॥

ಟೀ ॥ ಶಿವಕಥಾಶ್ರವಣವು, ಶಿವಸ್ತೋತ್ರ ಪಠನವು, ಶಿವಧ್ಯಾ

ನವ್ರು, ಈ ಮೂರು ಮೋಕ್ಷಸಾಧನವಾದ ಉಪಾಯಗಳು ಇದು ವೇದ
ಸಂಮತವಾದದ್ದು.

ಮೂ ॥ ಶ್ರವಣಾದಿತ್ರಿಕಾಶಕ್ತೋ ಲಿಂಗಂಬೇರಂಚಶಾಂಕರಂ ।
ಸಂಸ್ಥಾಪ್ಯನಿತ್ಯಮಭ್ಯರ್ಚ್ಯತರೇತ್ಸಂಸಾರಮಂಡಲಂ ॥
ಅಪಿದ್ರವ್ಯಂಚದೇಹಂಚಯಥಾಬಲಮವಂಚಕಃ ।
ಅರ್ಪಯೇಲ್ಲಿಂಗಬೇರಾರ್ಥಮರ್ಚಯೇದಪಿಸಂತತಂ ॥

ಟೀ ॥ ಶ್ರವಣ ಮೊದಲಾದ ಮೂರರಲ್ಲಿ ಅಶಕ್ತನಾದವನು ಶಿವಸಂ
ಬಂಧಿಯಾದ ಲಿಂಗವನ್ನೂ ವಿಗ್ರಹವನ್ನೂ ಸ್ಥಾಪಿಸಿ, ನಿತ್ಯದಲ್ಲಿಯೂ ಪೂಜಿ
ಸಿ ಸಂಸಾರಸಮುದ್ರವನ್ನು ದಾಂಟಬೇಕು. ಶಿವಲಿಂಗಕ್ಕೂ ಶಿವನ ವಿ
ಗ್ರಹಕ್ಕೂ ಶಕ್ತ್ಯನುಸಾರವಾಗಿ ದ್ರವ್ಯವನ್ನೂ ದೇಹವನ್ನೂ ನಿರ್ವಂಚಕ
ತ್ವದಿಂದ ಸಮರ್ಪಿಸಿ ಯಾವಾಗಲೂ ಪೂಜಿಸಬೇಕು.

ಅವ. ಸಕಲ ದೇವತೆಗಳೂ ವಿಗ್ರಹಗಳಲ್ಲಿ ಪೂಜಿಸಲ್ಪಡುತ್ತಾರೆ.
ಶಿವನುಮಾತ್ರ ಲಿಂಗದಲ್ಲಿಯೂ ವಿಗ್ರಹದಲ್ಲಿಯೂ ಪೂಜಿಸಲ್ಪಡುವದಕ್ಕೆ ಕಾ
ರಣವೇನಂದರೆ;—

ಮೂ ॥ ಶಿವಏಕೋಬ್ರಹ್ಮರೂಪತ್ವಾನ್ನಿಷ್ಕಲಃಪರಿಕೀರ್ತಿತಃ ।
ರೂಪಿತ್ವಾತ್ಸಕಲಸ್ತದ್ವತ್ತಸ್ಮಾತ್ಸಕಲನಿಷ್ಕಲಃ ॥
ನಿಷ್ಕಲತ್ವಾನ್ನಿರಾಕಾರಂಲಿಂಗಂತಸ್ಯಸಮಾಗತಂ ।
ಸಕಲತ್ವಾತ್ತಥಾಬೇರಂಸಾಕಾರಂತಸ್ಯಸಂಗತಂ ॥
ಅಪಿಲಿಂಗೇಚಬೇರೇಚನಿತ್ಯಮಭ್ಯರ್ಚ್ಯತೇಜನೈಃ ।
ಅಬ್ರಹ್ಮತ್ವಾತ್ತದನ್ಯೇಷಾಂನಿಷ್ಕಲತ್ವಂನಹಿಕ್ವಚಿತ್ ॥
ತಸ್ಮಾತ್ತೇನಿಷ್ಕಲೇಲಿಂಗೇನಾರಾಧ್ಯಂತೇಸುರೇಶ್ವರಾಃ ॥
ಅಬ್ರಹ್ಮತ್ವಾಚ್ಚಜೀವತ್ವಾತ್ತಥಾನ್ಯೇದೇವತಾಗಣಾಃ ।
ತೂಷ್ಣೀಂಸಕಲಮಾತ್ರತ್ವಾದರ್ಚ್ಯಂತೇಬೇರಮಾತ್ರಕೇ ॥

ಟೀ ॥ ಶಿವನೊಬ್ಬನೇ ಪರವಸ್ತುವಾಗಿರುವದರಿಂದ ನಿಷ್ಕಳನಾಗಿ
ಯೂ ಮತ್ತು ರೂಪವುಳ್ಳವನಾಗಿರುವದರಿಂದ ಸಕಲನಿಷ್ಕಲನಾಗಿಯೂ ಇ
ರುವನು. ನಿಷ್ಕಲನಾಗಿರುವದರದೆಸೆಯಿಂದ ಆತನಿಗೆ ನಿರಾಕಾರವಾದ ಲಕ್ಷ
ಣವು ಪ್ರಾಪ್ತವಾಯಿತು. ಸಕಲನಾಗಿರುವದರಿಂದ ಸಾಕಾರವಾದ ವಿಗ್ರಹ
ವು ಪ್ರಾಪ್ತವಾಯಿತು. ಆದಕಾರಣ ಶಿವನು ಸಕಲರಿಂದಲೂ ಲಿಂಗದಲ್ಲಿಯೂ
ವಿಗ್ರಹದಲ್ಲಿಯೂ ಪೂಜಿಸಲ್ಪಡುತ್ತಾನೆ. ಶಿವೇತರ ದೇವತೆಗಳಿಗೆ ಪರಬ್ರಹ್ಮ

ತ್ವವಿಲ್ಲದುದರಿಂದ ಯಾವಾಗಲೂ ನಿಷ್ಕಳತ್ವವಿಲ್ಲ. ಆದ್ದರಿಂದ ಅವರು ನಿಷ್ಕಲ ಲಿಂಗದಲ್ಲಿ ಪೂಜಿಸಲ್ಪಡುವದಿಲ್ಲ. ಇತರ ದೇವತೆಗಳು ಬ್ರಹ್ಮವಲ್ಲದ್ದರಿಂದಲೂ ಜೀವರಾಗಿರುವದರಿಂದಲೂ ಸಕಲತ್ವದಿಂದ ಮಾತ್ರ ಕೂಡಿದವರಾದ್ದರಿಂದಲೂ ವಿಗ್ರಹದಲ್ಲಿ ಮಾತ್ರ ಪೂಜಿಸಲ್ಪಡುತ್ತಾರೆ.

ಮೂ ॥ ಬಿಂದುನಾದಾತ್ಮಕಂಸರ್ವಂಜಗತ್‌ಸ್ಥಾವರಜಂಗಮಂ ।
ಬಿಂದುಶ್ಶಕ್ತಿಶ್ಶಿವೋನಾದಶ್ಶಿವಶಕ್ತ್ಯಾತ್ಮಕಂಜಗತ್ ॥
ನಾದಾಧಾರಮಿದಂಬಿಂದುರ್ಬಿಂದ್ವಾಧಾರಮಿದಂಜಗತ್ ।
ಜಗದಾಧಾರಭೂತೌಹಿಬಿಂದುನಾದೌವ್ಯವಸ್ಥಿತೌ ।
ಬಿಂದುನಾದಯುತಂಸರ್ವಂಸಕಲೀಕರಣಂಭವೇತ್ ।

ಮೂ ॥ ಬಿಂದುನಾದಾತ್ಮಕಂಲಿಂಗಂಜಗತ್ಕಾರಣಮುಚ್ಯತೇ ।
ಬಿಂದುರ್ದೇವಿಶ್ಶಿವೋನಾದಶ್ಶಿವಲಿಂಗಂತುಕಥ್ಯತೇ ॥

ಟೀ । ಸ್ಥಾವರ ಜಂಗಮಾತ್ಮಕವಾದೀಪ್ರಪಂಚವು ಬಿಂದು ನಾದಮಯವಾದದ್ದು ಶಕ್ತಿಯೇ ಬಿಂದು, ಶಿವನೇ ನಾದವು, ಈ ಲೋಕವು ಶಿವಶಕ್ತಿಸ್ವರೂಪವಾದದ್ದು. ನಾದವೇ ಆಶ್ರಯವಾಗಿವುಳ್ಳದ್ದು ಬಿಂದುವು; ಬಿಂದುವೇಅಶ್ರಯವಾಗಿಉಳ್ಳದ್ದು ಜಗತ್ತು; ಅದಕಾ ಈ ಬಿಂದುನಾದಗಳು ಪ್ರಪಂಚಕ್ಕೆ ಆಧಾರವಾದವುಗಳು. ಬಿಂದು ನಾದಗಳಿಂದ ಕೂಡಿದ್ದೆಲ್ಲವೂ ಸಕಲೀಕರಣವೆನಿಸುವದು. ಬಿಂದು ನಾದಾತ್ಮಕವಾದ ಲಿಂಗವು ಜಗತ್ಕಾರಣವೆಂಬದಾಗಿಯೂ, ಬಿಂದುವೇ ಪೀಠವು ನಾದವೇ ಶಿವಲಿಂಗವೆಂಬದಾಗಿಯೂ ಹೇಳಲ್ಪಡುತ್ತದೆ.

ಮೂ ॥ ಅತಸ್ಸತ್ಯಚಿದಾನಂದಲಕ್ಷಣಃಪರಮೇಶ್ವರಃ ।
ಸ್ವಯಮೇವಸದಾಲಿಂಗಂನಲಿಂಗಂತಸ್ಯವಿದ್ಯತೇ ॥

ಟೀ ॥ ಆದಕಾರಣದಿಂದ ಸತ್ಯಜ್ಞಾನಾನಂದಸ್ವರೂಪನಾದ ಪರಮೇಶ್ವರನು ತಾನೇಲಿಂಗವಾಗಿದ್ದಾನಲ್ಲದೆ ಆತನಿಗೆ ಲಿಂಗವಿಲ್ಲ.

ಅವ. ಜಗತ್ಕಾರಣವಾದ ಮಾಯೆಯೇಲಿಂಗವೆಂಬ ಮತವು ವೀರಶೈವರಿಂದ ನಿರಾಕರಿಸಲ್ಪಟ್ಟದೆಯೆಂಬರ್ಥದಲ್ಲಿ ಪ್ರಮಾಣವಂಹೇಳುತ್ತೇನೆ.

ಮೂ ॥ ಅವ್ಯಕ್ತಂಲಿಂಗಮಿತ್ಯಾಹುರ್ಜಗತಾಂಮೂಲಕಾರಣಂ ।
ಲಿಂಗೀಮಹೇಶ್ವರಶ್ಚೇತಿಮತಮೇತದಸಂಗತಂ ॥

ಟೀ ॥ ಪ್ರಪಂಚಕ್ಕೆ ಮೂಲಕಾರಣವಾದ ಮಾಯೆಯೇ ಲಿಂಗವೆಂದು ಕೆಲವರು ಹೇಳುವರು. ಅಂಥಾ ಮಾಯೆಯುಳ್ಳವನು ಪರಶಿವನು;

ಎಂಬ ಮತವು ಅಸಂಗತವು; ಹೀಗಿರುವದರಿಂದ ಶಿವನೇ ಲಿಂಗವೆಂದು ಸಿದ್ಧಾಂತವು.

ಮೂ ॥ ಭ್ರುವೋರ್ಘ್ರಾಣಸ್ಯಯಸ್ಸಂಧಿಸ್ತತ್ರವಾರಾಣಸೀಸ್ಥಿತಾ ।
ತತ್ರಾವಿಮುಕ್ತಕಂಕ್ಷೇತ್ರಂತಸ್ಮಿನ್ರುದ್ರಸ್ಸದಾಸ್ಥಿತಃ ॥
ಲಿಂಗಜ್ಯೋತಿಸ್ಸ್ವರೂಪೇಣಸಾಕ್ಷಾದ್ವಿಶ್ವೇಶ್ವರಾಹ್ವಯಃ ।

ಟೀ ॥ ಹುಬ್ಬುಗಳಿಗೂ ಮೂಗಿಗೂ ಯಾವ ಸಂಧಿಯುಂಟೋ ಅಲ್ಲಿ ಅಂದರೆ (ಭ್ರೂಮಧ್ಯದಲ್ಲಿ) ಕಾಶೀಪಟ್ಟಣವಿರುವದು. ಅದರಲ್ಲಿ ಅವಿಮುಕ್ತಕವೆಂಬ ಕ್ಷೇತ್ರವಿರುವದು. ಅಲ್ಲ ವಿಶ್ವೇಶ್ವರನೆಂಬಹೆಸರುಳ್ಳ ಪರಶಿವನು ಲಿಂಗಾಕಾರವಾದ ತೇಜೋರೂಪದಿಂದ ಪ್ರತ್ಯಕ್ಷವಾಗಿ ಇದ್ದಾನೆ.

ಮೂ ॥ ಲಿಂಗಮಧ್ಯೇಜಗತ್ಸರ್ವಂತ್ರೈಲೋಕ್ಯಂಸಚರಾಚರಂ ।
ಲಿಂಗಬಾಹ್ಯಾತ್ಪರಂನಾಸ್ತಿತಸ್ಮಾಲ್ಲಿಂಗಂಪ್ರಪೂಜಯೇತ್ ॥

ಟೀ ॥ ಸ್ಥಾವರ ಜಂಗಮಾತ್ಮಕವಾದ ಸ್ವರ್ಗ, ಮರ್ತ್ಯ, ಪಾತಾಳ ಎಂಬ ಮೂರು ಲೋಕಂಗಳೂ ಸಕಲ ಜಗತ್ತೂ ಲಿಂಗಮಧ್ಯದಲ್ಲಿವೆ. ಲಿಂಗದ ಹೊರಗೆ ಯಾವದೂ ಇಲ್ಲ. ಆದಕಾರಣ ಶಿವಲಿಂಗವನ್ನು ಪೂಜಿಸಬೇಕು.

ಅವ. ಆಲಿಂಗವು ಎಷ್ಟು ವಿಧವಾಗಿರುವದೆಂದರೆ,—

ಮೂ ॥ ಲಿಂಗಂತುತ್ರಿವಿಧಂಪ್ರೋಕ್ತಂಸ್ಥೂಲಂಸೂಕ್ಷ್ಮಂಪರಾತ್ಪರಂ ।
ಇಷ್ಟಲಿಂಗಮಿದಂಸ್ಥೂಲಂತದ್ಬಾಹ್ಯೇಧಾರಯೇತ್ತನೌ ॥ ೧೧ ॥
ಪ್ರಾಣಲಿಂಗಂತುತತ್ಸೂಕ್ಷ್ಮಂ ಯದಂತರ್ಭಾವನಾಮಯಂ ।
ಪರಾತ್ಪರಂತುಯತ್ಪ್ರೋಕ್ತಂತೃಪ್ತಿಲಿಂಗಂತದುಚ್ಯತೇ ॥ ೧೨ ॥

ಟೀ ॥ ಮಹಾಲಿಂಗವಾದೊಡೆ ಸ್ಥೂಲವೆಂದುಸೂಕ್ಷ್ಮವೆಂದು ಪರಾತ್ಪರವೆಂದು ಮೂರು ವಿಧವಾಗಿಹುದು. ಅಲ್ಲಿ ಯಾವುದಾನೊಂದು ಶರೀರಬಾಹ್ಯದಲ್ಲಿ ಧರಿಸಲ್ಪಡುತ್ತಿಹುದೋ ಅದು ಸ್ಥೂಲವೆಂದು ಇಷ್ಟಲಿಂಗವೆಂದುಹೇಳಿಸಿಕೊಂಬುವದು. ಯಾವಲಿಂಗವು ಹೃದಯಕಮಲದಲ್ಲಿ ಸನ್ಮಾತ್ರಭಾವನಾಮಯವಾಗಿರುವದೋ ಅದು ಸೂಕ್ಷ್ಮವೆಂದು ಪ್ರಾಣಲಿಂಗವೆಂದು ಹೇಳಿಸಿಕೊಂಬುವದು. ಯಾವಲಿಂಗವು ಪರಾತ್ಪರವೆಂದು ಹೇಳಲ್ಪಟ್ಟಿತು. ಅದು ತೃಪ್ತಿಲಿಂಗವೆಂದು ಭಾವಲಿಂಗವೆಂದುಹೇಳಲ್ಪಡುತ್ತಿಹುದು.

ಅವ. ಇಂಥಾ ಶಿವಲಿಂಗಮೂರ್ತಿಯನ್ನು ಸದಾಕಾಲದಲ್ಲಿಯೂ ಧರಿಸಬೇಕು. ಅದೆಂತೆನೆ.

ಮೂ । ಭಾವನಾತೀತಮವ್ಯಕ್ತಂಪರಬ್ರಹ್ಮಶಿವಾಭಿಧಂ ।
ಇಷ್ಟಲಿಂಗಮಿದಂಸಾಕ್ಷಾದನಿಷ್ಟಪರಿಹಾರಕಂ ॥
ಧಾರಯೇದವಧಾನೇನಶರೀರೇಸರ್ವದಾಬುಧಃ ।

ಟೀ । ಬಳಿಕೀರೂಪಾದಿಗಳಿಲ್ಲದ ಕಾರಣದಿಂ ಬಾಹ್ಯೇಂದ್ರಿಯಗೋಚರವಲ್ಲದ ಸದಮಲಾಂತಃಕರಣವೃತ್ತಿಗೋಚರವಾದ ಕಾರಣದಿಂ ಭಾವನಾತೀತವಾದ ನಿಗಮಾಗಮ ಪ್ರಸಿದ್ಧವಾದ ಶಿವನೆಂಬಪೆಸರುಳ್ಳ ಪರಬ್ರಹ್ಮವೇ ಮರದೃಷ್ಟಂಗಳಂಪರಿಹರಿಸಿ, ಭೋಗಮೋಕ್ಷಂಗಳ ನೀವುದರತ್ತಣಿಂ (ಇಷ್ಟಮೂರ್ಜಂತ್ರಪಸಾನುಯಚ್ಛತಿ) ಎಂಬಥರ್ವಶಿರಃಪ್ರಸಿದ್ಧವಾದ ಇಷ್ಟಲಿಂಗಮಂ ನಿಗಮಾಗಮ ನಿಪುಣನಾದವನು ಎಲ್ಲಾಗಳು ಎಚ್ಚರಿಕೆಯಿಂ ಶರೀರದಲ್ಲಿ ಧರಿಸಬೇಕು.

ಅವ. ಬಳಿಕೀ ಲಿಂಗಧಾರಣದಿಂದೇನು ಪ್ರಯೋಜನವೆಂದರೆ.

ಮೂ । ವೇದಶಾಸ್ತ್ರಪುರಾಣೇಷುಕಾಮಿಕಾದ್ಯಾಗಮೇಷುಚ ।
ಲಿಂಗಧಾರಣಮಾಖ್ಯಾತಂವೀರಶೈವಸ್ಯನಿಶ್ಚಯಾತ್ ॥
ಲಿಂಗಧಾರೀಸದಾಶುದ್ಧೋನಿಜಲಿಂಗಂಮನೋರಮಂ ।
ಅರ್ಚಯನ್ಗಂಧಪುಷ್ಪಾದ್ಯೈಃಕರಪೀಠೇಸಮಾಹಿತಃ ।
ಬಾಹ್ಯಪೀಠಾರ್ಚನಾದೇತತ್ಕರಪೀಠಾರ್ಚನಂಪರಂ ।
ಸರ್ವೇಷಾಂವೀರಶೈವಾನಾಂಮುಮುಕ್ಷೂಣಾಂನಿರಂತರಂ ।
ಬ್ರಹ್ಮವಿಷ್ಣ್ವಾದಯೋದೇವಾಮುನಯೋಗೌತಮಾದಯಃ ।
ಧಾರಯಂತಿಸದಾಲಿಂಗಮುತ್ತಮಾಂಗೇವಿಶೇಷತಃ ॥
ಲಕ್ಷ್ಮ್ಯಾದಿಶಕ್ತಯಸ್ಸರ್ವಾಶ್ಶಿವಭಕ್ತಿವಿಭಾವಿತಾಃ ।
ಧಾರಯಂತ್ಯಳಕಾಗ್ರೇಷುಶಿವಲಿಂಗಮಹರ್ನಿಶಂ ।

ಟೀ । ಲಿಂಗವನ್ನು ಧರಿಸಿದಾತನು ಅವಾಗಳು ಶುಚಿರ್ಭೂತನಾಗಿ ಮನೋಹರವಾದ ಸ್ವಕೀಯವಾದಿಷ್ಟಲಿಂಗವನ್ನು ಹಸ್ತಪೀಠನಲ್ಲಿ ಸಮಾಧಾನವುಳ್ಳಾತನಾಗಿ ಗಂಧಾಕ್ಷತೆ ಪುಷ್ಪ ಮೊದಲಾದವುಗಳಿಂದರ್ಚಿಸುವಾತನಾಗಿ ಸಮಸ್ತವಾದ ಮೋಕ್ಷಕಾಮಿಗಳಾಗಿದ್ದಂಥಾ ವೀರಶೈವರುಗಳಿಗೆ ನಿರಂತರವೂ ಹೊರಗಣ ಪೀಠಾರ್ಚನೆಯುದೆಶೆಯಿಂ ಈ ಕರ ಪೀಠಾರ್ಚನೆಯು ಶ್ರೇಷ್ಠವಾದುದು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಗೌತಮ ಮೊದಲಾದ ಋಷಿಗಳು ಅವಾಗಳಂ ಶಿರಸ್ಸನಲ್ಲಿ ವಿಶೇಷವಾಗಿ ಲಿಂಗವನ್ನು ಧರಿಸುತ್ತಿಹರು. ಸಮಸ್ತವಾದ ಲಕ್ಷ್ಮಿ ಮೊದಲಾದ ಶಕ್ತಿಗ

ಳು ಶಿವಭಕ್ತಿಯಿಂ ವಿಶೇಷವಾಗಿ ಭಾವಿಸುಶ್ರೇಷ್ಠರಾಗಿ ಶಿವಲಿಂಗವನ್ನ
ಹಗಲಿರುಳು ಲಲಾಟಾಗ್ರದಲ್ಲಿ ಧರಿಸುತ್ತಿಹರು. ವೇದಶಾಸ್ತ್ರ ಪುರಾಣಂ
ಗಳಲ್ಲಿಯೂ ಕಾಮಿಕಾದ್ಯಾಗಮಗಳಲ್ಲಿಯೂ ವೀರಶೈವಕ್ಕೆ ನಿಶ್ಚಯವಾದೆಸೆ
ಯಿಂ ಲಿಂಗಧಾರಣವು ಹೇಳಲ್ಪಟ್ಟಿತು.

ಮೂ ॥ ಬ್ರಹ್ಮೇತಿಲಿಂಗಮಾಖ್ಯಾತಂಬ್ರಹ್ಮಣಸ್ಪತಿರೀಶ್ವರಃ ।
ಪವಿತ್ರಂತದ್ಧಿವಿಖ್ಯಾತಂತತ್ಸಂಪರ್ಕಾತ್ತನುಶ್ಶುಚಿಃ ।

ಟೀ ॥ ಸೃಷ್ಟಿಗೆ ಕರ್ತನಾದ ಬ್ರಹ್ಮದೇವಂಗೊಡೆಯನಾದ ಶಿವ
ನೇ ಪರಬ್ರಹ್ಮನು. ಅದೇ ಲಿಂಗವೆಂದು ಪೂರ್ವದಲ್ಲಿಯೇ ಹೇಳಲ್ಪಟ್ಟಿ
ತು. ಆ ಲಿಂಗವು ಪವಿತ್ರವೆಂದು ಪ್ರಸಿದ್ಧವಾದಕಾರಣದಿಂದೀಲಿಂಗದ ಸಂಪ
ರ್ಕದತ್ತಣಿಂ ಶರೀರವು ಪವಿತ್ರವಹುದು ಪವಿತ್ರವೆಂದು ಆಪಶ್ರುತಿಯಲ್ಲಿ ಪ್ರ
ಸಿದ್ಧವೆಂಬರೆ ಪವಿತ್ರಂತೆವಿತತಂಬ್ರಹ್ಮಣಸ್ಪತೆ ಹೀಗೆಂದು ಋಗ್ವೇದವು ಹೇ
ಳುತ್ತಿಹುದು. ಇಲ್ಲಿ ಲಿಂಗವೆಂದು ವಿಶೇಷ್ಯವು ಈ ಅರ್ಥದಲ್ಲಿ ಬ್ರಹ್ಮಾಂಗಧಿಪ
ತಿಯಾದ ಶಿವನೇ! ನಿನ್ನ ಲಿಂಗವು ಶಿವಾದಿಭೂಮ್ಯಂತವಾಗಿ ಪಸರಿಸಲ್ಪಟ್ಟಿಂ
ಥಾದ್ದು ಪಾವನವಾದಂಥಾದ್ದು ಹೀಗೆಂದು ಋಗ್ವೇದವು ಹೇಳುತ್ತಿಹುದು.
ಆದುಕಾರಣವಾಗಿ ದೋಷರಹಿತವಾದ ಆ ಶಿವಲಿಂಗವು ಧರಿಸಲ್ತಕ್ಕುದು
ಎಂಬರ್ಥವುಳ್ಳ ಋಗಿತ್ಯಾಹಪವಿತ್ರಂತೆವಿತತಂ ಬ್ರಹ್ಮಣಸ್ಪತೆ । ತಸ್ಮಾತ್ಪ
ವಿತ್ರಂತಲ್ಲಿಂಗಂ ಧಾರ್ಯಂಶೈವಮನಾಮಯಂ ॥ ಎಂಬ ಉಪಬೃಹ್ಮಣವ
ಚನವು ಪ್ರಮಾಣವು.

ಅವ. ಬಳಿಕೀಪ್ರಕಾರವಾದ ಶಿವಲಿಂಗಮಂದೀಕ್ಷೆ ಇಲ್ಲದವಂ
ಧರಿಸಲಾಗದು.

ಮೂ । ಅತಪ್ತತನುರಜ್ಞೋವೈಆಮಸ್ಸಂಸ್ಕಾರವರ್ಜಿತಃ ।
ದೀಕ್ಷಯಾರಹಿತಸ್ಸಾಕ್ಷಾನ್ನಾಪ್ನುಯಾಲ್ಲಿಂಗಮುತ್ತಮಂ ॥

ಟೀ । ಅತಪ್ತತನೂರ್ನತದಾಮೋಶ್ನುತೆ ಎಂಬ ಶ್ರುತಿಯುಂ
ಟಾಗಿ ತಪ್ತರಹಿತಶರೀರವುಳ್ಳ ವೈರಾಗ್ಯವಿಲ್ಲದ ಕಾರಣದಿಂ ಪಕ್ವಹೃದಯ
ವಿಲ್ಲದ ನಿತ್ಯಾನಿತ್ಯವಸ್ತುವಿವೇಕವಿಲ್ಲದ ಶಿವಸಂಸ್ಕಾರ ಶೂನ್ಯನು ಗುರುಕೃ
ಪೆ ಇಲ್ಲದವನಾಗಿ ಶ್ರೇಷ್ಠವಾದ ಪ್ರತ್ಯಕ್ಷ ಶಿವಲಿಂಗಮಂ ಧರಿಸಲಾಗದು
ಧರಿಸಿದರೆ ವಿಫಲವೆಂದರ್ಥ.

ಮೂ ॥ ಅಘೋರಾಪಾಪಕಾಶೀತಿಯಾತೇರುದ್ರಶಿವಾತನೂಃ ।
ಯಜುಷಾಗೀಯತೇಯಸ್ಮಾತ್ತಸ್ಮೈಭ್ಯವ್ರೋಘವರ್ಜಿತಃ ॥

ಟೀ ॥ ಎಲೈ ರುದ್ರಮೂರ್ತಿಯಾದ ಶಿವನೇ ಭಯರಹಿತವಾದ ಮಂಗಳಸ್ವರೂಪವಾದ ಅವುದಾನೊಂದು ನಿನ್ನ ಶರೀರವು ಪಾಪರಹಿತರಲ್ಲಿ ಪ್ರಕಾಶಿಸುವದೆಂದು ಆವುದಾನೊಂದುಕಾರಣ ಯಜುರ್ವೇದವದಿಂದ ಕೊಂಡಾಡಿಸಿ ಕೊಳ್ಳುತ್ತಿರುವದೋ ಅದು ಕಾರಣವಾಗಿ ಶಿವಸಂಬಂಧವುಳ್ಳವರು ಪಾಪವರ್ಜಿತರು.

ಅವ. ಇಷ್ಟಲಿಂಗ ಮೊದಲಾದ ಲಿಂಗಗಳ ಸ್ವರೂಪವಂ ತಿಳಿಸುತ್ತೇನೆ.

ಮೂ ॥ ಸಕಲಂದೃಕ್ಕಲಾಗ್ರಾಹ್ಯಮಿಷ್ಟಲಿಂಗಂಸ್ಥೂಲಮುಚ್ಯತೇ ।
ಇಷ್ಟಸಿದ್ಧಿಕರಂಪುಂಸಾಮನಿಷ್ಟಪರಿಹಾರಕಂ ।
ಇಷ್ಟಿಃಪೂಜಾತಯಾನಿತ್ಯಮಿಷ್ಟಂಪೂಜಿತಮಾದರಾತ್ ।
ಇಷ್ಟಲಿಂಗಮಿತಿಪ್ರೋಕ್ತಮಾಚಾರ್ಯೈರ್ಲಿಂಗಪೂಜಕೈಃ ॥
ಪ್ರಾಣಲಿಂಗಂಮನೋಗ್ರಾಹ್ಯಂಭವೇತ್ಸಕಲನಿಷ್ಕಲಂ ।
ತತಃಪ್ರಾಣೇಷ್ವಂತರ್ಮನಸೋಲಿಂಗಮಾಹುರಿತಿಶ್ರುತೇಃ ॥
ನಿಷ್ಕಲಂಭಾವಲಿಂಗಂಸ್ಯಾದ್ಭಾವಗ್ರಾಹ್ಯಂಪರಾತ್ಪರಂ ।
ಸನ್ಮಾತ್ರಂಭಾವಲಿಂಗಂಸ್ಯಾದಿತಿಸಿದ್ಧಾಂತಮಹಾತ್ಮನಾಂ ॥

ಟೀ ॥ ನೇತ್ರೇಂದ್ರಿಯದಿಂದ ಗ್ರಹಿಸಲ್ಪಡತಕ್ಕದ್ದಾಗಿಯೂ, ಪುರುಷರಿಗೆ ಇಷ್ಟಾರ್ಥಸಿದ್ಧಿಯನ್ನುಂಟುಮಾಡುವದಾಗಿಯೂ, ದುಃಖನಿವಾರಕವಾಗಿಯೂ ಇರುವ ಲಿಂಗವೇ ಸಕಲವಾದ ಇಷ್ಟಲಿಂಗವೆನಿಸಿಕೊಳ್ಳುವದು. ( ಇಷ್ಟಲಿಂಗಶಬ್ದಕ್ಕೆ ನಿರ್ವಚನವೇನೆಂದರೆ:— ಇಷ್ಟಿಯೆಂದರೆ ಪೂಜೆಯು; ಆ ಪೂಜೆಯಿಂದ ಯಾವಲಿಂಗವು ನಿತ್ಯವಲ್ಲೂ ಆರಾಧಿಸಲ್ಪಡುತ್ತಿರುವದೋ ಆ ಲಿಂಗವನ್ನು ಲಿಂಗಪೂಜಕರಾದ ಆಚಾರ್ಯರು ಇಷ್ಟಲಿಂಗವೆಂದು ಹೇಳುವರು. ) ಮನಸ್ಸಿನಿಂದ ಗ್ರಹಿಸಲ್ಪಡತಕ್ಕದ್ದಾಗಿಯೂ, ಸಕಲ ನಿಷ್ಕಲವಾಗಿಯೂ ಇರುವ ಲಿಂಗವೇ ಪ್ರಾಣಲಿಂಗವೆನಿಸುವದು. ಅದಕಾರಣದಿಂದಲೇ ಪ್ರಾಣೇಷ್ವಂತರ್ಮನಸೋಲಿಂಗಮಾಹುಃ ,, ಎಂದು ವೇದವಚನವು. ಭಾವನೆಗೆಗೋಚರವಾಗಿಯೂ, ನಿಷ್ಕಲವಾಗಿಯೂ ಇರುವ ಲಿಂಗವೇ ಭಾವಲಿಂಗವೆನಿಸುವದು. ಆ ಭಾವಲಿಂಗವೇ ಸತ್ಸ್ವರೂಪವೆಂಬುವದು ಜ್ಞಾನಿಗಳ ಸಿದ್ಧಾಂತವು.

ಮೂ ॥ ಭಾವಲಿಂಗಂಪರಂತತ್ತ್ವಂಪ್ರಾಣಲಿಂಗಂತುಸೂಕ್ಷ್ಮಕಂ ।
ಇಷ್ಟಲಿಂಗಂಭವೇತ್ಸ್ಥೂಲಮೇವಂಲಿಂಗತ್ರಯಂಸ್ಮೃತಂ ॥

ಸ್ಥೂಲಂ ಬಾಹ್ಯಮಿತಿಪ್ರೋಕ್ತಂ ಸೂಕ್ಷ್ಮಮಾಭ್ಯಂತರಂ ಸ್ಮೃತಂ
ಸಬಾಹ್ಯಾಭ್ಯಂತರಂ ಯತ್ತತ್ಪರಮಿತ್ಯಭಿಧೀಯತೇ ॥

ಟೀ ॥ ಭಾವಲಿಂಗವೇ ಪರತತ್ವವೆಂದೂ, ಪ್ರಾಣಲಿಂಗವೇ ಸೂಕ್ಷ್ಮವೆಂದೂ, ಇಷ್ಟಲಿಂಗವೇ ಸ್ಥೂಲವೆಂದೂ, ಮೂರುವಿಧವಾಗಿ ಹೇಳಲ್ಪಟ್ಟಿತು. ಆ ಸ್ಥೂಲಲಿಂಗವು ಪಾಂಚಭೌತಿಕ ದೇಹಕ್ಕೆ ಸಂಬಂಧಪಟ್ಟಿಸಾಧ್ಯಗಿರುವದರಿಂದ ಹೊರಗಣದಾಗಿಯೂ, ಸೂಕ್ಷ್ಮಲಿಂಗವು ಜೀವವನ್ನವಲಂಬಿಸಿರುವದರಿಂದ ಒಳಗಣದಾಗಿಯೂ, ಆ ಪರಲಿಂಗವು ವ್ಯಾಪ್ತವಾಗಿರುವ ಶಿವಚೈತನ್ಯಸ್ವರೂಪವಾಗಿರುವದರಿಂದ ಒಳ ಹೊರಗಣದಾಗಿಯೂ ಇರುವದೆಂದು ಹೇಳಲ್ಪಡುವದು.

ಅವ. ಯಾವಯಾವ ಲಿಂಗವು ಯಾವಯಾವ ದೇಹವಲ್ಲಿದೆ. ಎಂಬ ವಿಷಯವಾಗಿ ಹೇಳುತ್ತೇನೆ.

ಮೂ ॥ ಇಷ್ಟಲಿಂಗಂತುಬಾಹ್ಯಾಂಗೆಪ್ರಾಣಲಿಂಗಂತಥಾಂತರೆ ।
ಭಾವಲಿಂಗಂಸದೈವಾಸ್ಮಿನ್ನಾತ್ಮಾಂಗೆಸುಪ್ರತಿಷ್ಠಿತಂ ॥

ಟೀ ॥ ಇಷ್ಟಲಿಂಗವು ಸ್ಥೂಲದೇಹದಲ್ಲಿಯೂ ಪ್ರಾಣಲಿಂಗವು ಸಪ್ತದಶತತ್ವಾತ್ಮಕವಾದ ಸೂಕ್ಷ್ಮದೇಹದಲ್ಲಿಯೂ, ಭಾವಲಿಂಗವು ಪ್ರಕೃತಿಮಾತ್ರಗೋಚರವಾದ ಕಾರಣದೇಹದಲ್ಲಿಯೂ ನೆಲೆಗೊಂಡಿರುವದು. ಆವಕಾರಣ ಭಾವಲಿಂಗಕ್ಕೆ ಪರಿಪೂರ್ಣತ್ವ ಸರ್ವಾಶ್ರಯತ್ವಾದಿಸ್ವರೂಪಸದ್ಭಾವವೇ ಪೂಜೆಯೆಂದು ತಿಳಿಯಬೇಕು. ಭಾವಪದವು ಭೂಸತ್ತಾಯಾಂ ಎಂದು ಸತ್ತಾರ್ಥಕವಾದ ಭೂಧಾತುವಿನಿಂದ ನಿಷ್ಪನ್ನವಾದದ್ದರಿಂದ ಸನ್ಮಾತ್ರಂ ಭಾವಲಿಂಗಂ ಎಂದು ಹೇಳಲ್ಪಟ್ಟಿತು. “ಆಕಾಶಶರೀರಂ ಬ್ರಹ್ಮ”, ಎಂಬುವದು ಮೊದಲಾದ ಶ್ರುತಿಗಳಿಂದ ಪ್ರತಿಪಾದಿಸಲ್ಪಟ್ಟ ಜ್ಞಾನಾಕಾಶಸ್ವರೂಪವಾಗಿಯೂ ಭಾವನಾಮಾತ್ರ ಗೋಚರವಾಗಿಯೂ ನಿರಾಕಾರವಾಗಿಯೂ ಇರುವ ಸತ್ತೆಯೇ ಭಾವಲಿಂಗವೆಂದರಿಯಲ್ವೇಳ್ಕುಂ.

ಅವ. ಪ್ರಾಣಲಿಂಗಪೂಜಾಕ್ರಮವಂ ನಿರೂಪಿಸುವೆನು.

ಮೂ ॥ ಅಂತರ್ಗತಂಚಿದಾಕಾರಂಲಿಂಗಂಶಿವಮಯಂಪರಂ ।
ಪೂಜ್ಯತೆಭಾವಪುಷ್ಪೈರ್ಯತ್ಪ್ರಾಣಲಿಂಗಾರ್ಚನಂಹಿತತ್ ॥
ಕ್ಷಮಾಭಿಷೇಕಸಲಿಲಂವಿವೇಕೋವಸ್ತ್ರಮುಚ್ಯತೇ ।
ಸತ್ಯೈವಾಭರಣಂಪ್ರೋಕ್ತಂವೈರಾಗ್ಯಂಪುಷ್ಪಮಾಲಿಕಾ ॥
ಗಂಧಸ್ಸಮಾಧಿಸಂಪತ್ತಿರಕ್ಷತಾನಿರಹಂಕ್ರಿಯಾ ।

ಶ್ರದ್ಧಾಧೂಪೋಮಹಾಜ್ಞಾನಂಜಗದ್ಭಾಸಿಪ್ರದೀಪಿಕಾ ॥
ಭ್ರಾಂತಿಮೂಲಪ್ರಪಂಚಸ್ಯನೈವೇದ್ಯಂತನ್ನಿವೇದಿತಂ ।
ಏತಾನಂಘಂಟಾಪರಿಸ್ಪಂದಸ್ತಾಂಬೂಲಂವಿಷಯಾರ್ಪಣಂ ॥
ವಿಷಯಭ್ರಾಂತಿರಾಹಿತ್ಯಂತತ್ಪ್ರದಕ್ಷಿಣಕಲ್ಪನಾ ।
ಬುದ್ಧೇಸ್ತದಾತ್ಮಿಕಾಶಕ್ತಿರ್ನಮಸ್ಕಾರಕ್ರಿಯಾಮತಾ ।
ಏವಂವಿಧೈರ್ಭಾವಶುದ್ಧ್ಯೈರುಪಚಾರೈರದೂಷಿತೈಃ ।
ಪ್ರತ್ಯಙ್ಮುಖಮನಾಭೂತ್ವಾಪೂಜಯೇಲ್ಲಿಂಗಮಾಂತರಂ ॥

ಟೀ ॥ ಹೃದಯ ಕಮಲವೆಂಬ ಪೀಠದಲ್ಲಿ ಕುಳಿತಿರುವ ಜ್ಞಾನಸ್ವರೂಪವಾದ ಶಿವಮಯವಾದ ಲಿಂಗವನ್ನು ಧ್ಯಾನಿಸಿ, ಶಮ ದಮಾದಿಪವಾದ ಭಾವಗಳೆಂಬ ಪುಷ್ಪಗಳಿಂದ ಮಾಡುವ ಪೂಜೆಯೇ ಪ್ರಾಣಲಿಂಗಾರ್ಚನೆಯೆಂದು ಹೇಳಲ್ಪಡುತ್ತದೆ.—ಹ್ಯಾಗೆಂದರೆ;—ಕಾಮ ಕ್ರೋಧಾದಿಗಳ ನಿಗ್ರಹವೇ ಅಭಿಷೇಕ ಜಲವು. ನಿತ್ಯಾನಿತ್ಯವಸ್ತು ವಿಚಾರವೇ ವಸ್ತ್ರವು, ಸತ್ಯವೇ ಆಭರಣವು. ವೈರಾಗ್ಯವೇ ಪುಷ್ಪಮಾಲಿಕೆಯು. ಚಿತ್ತೈಕಾಗ್ರತೆಯೇ ಗಂಧವು. ನಿರಹಂಕಾರವೇ ಅಕ್ಷತೆ. ಆಸ್ತಿಕ್ಯಬುದ್ಧಿಯೇ ಧೂಪವು. ಪ್ರಪಂಚವನ್ನೆಲ್ಲಾ ಬೆಳಗುವ ಘನವಾದ ಜ್ಞಾನವೇ ದೀಪವು. ಇಜ್ಞಾನದಿಂತೋರುವ ಪ್ರಪಂಚವಂಸಮರ್ಪಿಸುವದೇ ನೈವೇದ್ಯವು. ಮೌನವೇ ಘಂಟಾನಾದವು. ಶಬ್ದಾದಿವಿಷಯಗಳ ಅರ್ಪಣೆಯೇ ತಾಂಬೂಲವು. ವಿಷಯಸುಖಭ್ರಾಂತಿಯಿಲ್ಲದಿರುವದೇ ಪ್ರದಕ್ಷಿಣವು. ಬುದ್ಧಿಗೆ ತಾದಾತ್ಮ್ಯಶಕ್ತಿಯೇನಮಸ್ಕಾರವು. ಈ ರೀತಿಯಾಗಿ ಶಿವಭಕ್ತನು ಭಾವಶುದ್ಧಿಯಿಂ ಕೂಡಿದ ಶ್ಲಾಘ್ಯಗಳಾದ ಉಪಚಾರಗಳಿಂದ ಅಂತರ್ಮುಖವಾದ ಮನಸ್ಸುಳ್ಳವನಾಗಿ ಪ್ರಾಣಲಿಂಗವನ್ನು ಪೂಜಿಸಬೇಕು.

ಅವ. ಈ ವಿಧವಾದ ಇಷ್ಟಲಿಂಗವನ್ನು ಯಾವಸ್ಥಳದಲ್ಲಿ ಧರಿಸಬೇಕೆಂದರೆ;—

ಮೂ ॥ ಉತ್ತಮಾಂಗೇಗಲೇವಾಪಿಕುಕ್ಷೌವಕ್ಷಸ್ಥಲೇಪಿವಾ ।
ತಥಾಹಸ್ತತಲೇವಾಪಿಪ್ರಾಣಲಿಂಗಂಧರೇತ್ಸುಧೀಃ ॥

ಟೀ ॥ ವಿವೇಕಶಾಲಿಯಾದವನು ದೀಕ್ಷಾಕಾಲದಲ್ಲಿ ಗುರುವಿನಿಂದ ಕೊಡಲ್ಪಟ್ಟ ಇಷ್ಟಲಿಂಗವನ್ನು ಮಸ್ತಕದಲ್ಲಿಯಾಗಲಿ, ಕಂಠದಲ್ಲಿಯಾಗಲಿ, ಉದರದಲ್ಲಿಯಾಗಲಿ, ಎದೆಯಲ್ಲಾಗಲಿ, ಹಸ್ತದಲ್ಲಿಯಾಗಲಿ, ಧರಿಸಬೇಕು.

ಅವ. ಇಷ್ಟಲಿಂಗವನ್ನು ಎಲ್ಲಿ ಪೂಜಿಸಬೇಕೆಂದರೆ;—

ಮೂ । ಲಿಂಗಧಾರೀಸದಾಶುದ್ಧೋನಿಜಲಿಂಗಂಮನೋರಮಂ ।
ಅರ್ಚಯೇದ್ಗಂಧಪುಷ್ಪಾದ್ಯೈಃಕರಪೀಠೇಸಮಾಹಿತಃ ॥

ಟೀ ॥ ಯಾವಾಗಲೂ ನಿರ್ಮಲನಾದ ಲಿಂಗಧಾರಕನಾದ ವೀರಶೈವನು ತನ್ನ ಇಷ್ಟಲಿಂಗವನ್ನು ಹಸ್ತಪೀಠದಲ್ಲಿಟ್ಟು, ಗಂಧ, ಪುಷ್ಪ ಮೊದಲಾದ ಉಪಚಾರಗಳಿಂದ ಪೂಜಿಸಬೇಕು.

ಇಂತೀ ನಿರಾಭಾರ ವೀರಶೈವ ಸಾಮ್ರಾಜ್ಯಧುರಂಧರನಾದತೋಂಟದಸಿದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲ ಜ್ಞಾನಸಾರಾಮೃತದೊಳ್ ಷಟ್ಸ್ಥಲಪ್ರಕರಣದಲ್ಲಿ ಅಷ್ಟಾವರಣ ಪ್ರಕರಣದೊಳ್ ಶಿವಲಿಂಗಲಕ್ಷಣ ನಿರೂಪಣಂ.

---

## ಜಂಗಮಲಕ್ಷಣ ನಿರೂಪಣಂ.

—···:*:···—

ಅವ. ಅನಂತರಂ ಜಂಗಮಮೂರ್ತಿಯ ಲಕ್ಷಣವಂ ನಿರೂಪಿಸುವೆನದೆಂತೆನೆ.

ಮೂ । ಯಥಾಗುರೌಯಥಾಲಿಂಗೇಭಕ್ತಿಮಾನ್ಪರಿವರ್ತತೇ ।
ಜಂಗಮೇಷುತಥಾನಿತ್ಯಂಭಕ್ತಿಂಕುರ್ಯಾದ್ವಿಚಕ್ಷಣಃ ॥

ಟೀ । ಪ್ರವೀಣನಾದ ಶಿವಭಕ್ತನು ಗುರುವಿನಲ್ಲಿಯೂ ಲಿಂಗದಲ್ಲಿಯೂ ಹ್ಯಾಗೆ ಭಕ್ತಿಯುಳ್ಳವನಾಗಿರುವನೋ ಹಾಗೆಯೇ ಜಂಗಮಮೂರ್ತಿಯಲ್ಲಿಯೂ ನಿರಂತರವೂ ಭಕ್ತಿಯಂ ಮಾಡಬೇಕು

ಮೂ । ಏಕಏವಶಿವಸ್ಸಾಕ್ಷಾತ್ಸರ್ವಾನುಗ್ರಹಕಾರಕಃ ।
ಗುರುಜಂಗಮಲಿಂಗಾತ್ಮಾ ವರ್ತತೇಭುಕ್ತಿಮುಕ್ತಿದಃ ॥

ಟೀ । ಬಳಿಕ ಭಕ್ತಿಸಿದ್ಧ್ಯರ್ಥವಾಗಿ ಗುರುರೂಪದಿಂ ಶಿವನೇ ಅವತರಿಸಿದನೆಂದು ನಿರೂಪಿಸಿದ ಕಾರಣದಿಂ ಶಿವನಂತೆ ಗುರುವು ಪೂಜ್ಯನಾಗಲಿ ಜಂಗಮಮೂರ್ತಿಯನೇನುಕಾರಣಂ ಶಿವನಂತೆ ಪೂಜಿಸಬೇಕೆಂದರೆ “ ಅತೋಸ್ಮಿಲೋಕೇವೇದೇಚಪ್ರಥಿತಃಪುರುಷೋತ್ತಮಃ ,, ಎಂಬ ಗೀತಾವಚನದ ದೆಸೆಯಿಂ ಲೋಕವೇದಪ್ರಸಿದ್ಧನಾಗಿ ಸರ್ವರಿಗೂ ಹಿತವನ್ನೇ ಮಾಡುವಂಥಾ ಸ್ವತಂತ್ರನಾದ ಶಿವನೊಬ್ಬನೇ ಶ್ರೀ ಗುರುಲಿಂಗ ಜಂಗಮಸ್ವರೂಪನಾಗಿ ಭೋಗಮೋಕ್ಷಂಗಳಂ ಕೊಡುತ್ತಿರುವನು. ಆ ಕಾರಣದಿಂ ಶಿವನಂತೆ ಜಂಗಮದಲ್ಲಿಯೂ ಭಕ್ತಿಯಂ ಮಾಡಲ್ತಕ್ಕುದು.

ಮೂ ॥ ಲಿಂಗಂತುದ್ವಿವಿಧಂ ಪ್ರೋಕ್ತಂ ಜಂಗಮಾ ಜಂಗಮಾತ್ಮನಾ।
ಅಜಂಗಮೆಯಥಾಭಕ್ತಿರ್ಜಂಗಮೇಚತಥಾಸ್ಮೃತಾ ॥

ಟೀ. ಚರಸ್ಥಿರ ಭೇದದಿಂ ಲಿಂಗವು ಎರಡು ವಿಧವೆಂದು ಹೇಳಲ್ಪಟ್ಟಿತು. ಸ್ಥಿರಲಿಂಗದಲ್ಲಿ ಹ್ಯಾಗೆ ಭಕ್ತಿಯನ್ನಿಡಬೇಕೋ ಹಾಗೆಚರಲಿಂಗದಲ್ಲಿಯೂ ಭಕ್ತಿಯನ್ನಿಡಬೇಕು. (ಇಲ್ಲಿವಿಚಾರವುಂಟು.) ಶಿವಲಿಂಗವೂಜಂಗಮವೂ ಸಮವಾದರೆ ಜಂಗಮಮೂರ್ತಿಗೆ ಶಿವಲಿಂಗದಲ್ಲಿ ಭಕ್ತಿಯೂ, ಅರ್ಚನವಂದನಾದಿಗಳೂ, ಸಂಭವಿಸುವದಿಲ್ಲವೇ? ಎಂದು ಶಂಕೆಬಂದಲ್ಲಿ:- ಜ್ಯೇಷ್ಠಭ್ರಾತಾಪಿತೃಸಮಃ ಎಂಬಲ್ಲಿ ಜ್ಯೇಷ್ಠನು ಕನಿಷ್ಠ ಭ್ರಾತೃವಿಂ ಪಿತೃಸಮಾನನಾಗಿ ಭಾವಿಸಲ್ಪಟ್ಟವನಾದಾಗ್ಯೂ ತಾನು ತನ್ನ ಮಾತೃವಿಗೆ ಹ್ಯಾಗೆ ಪತಿಯಾಗನೋ ಹಾಗೂ, ಜನಿತಾಚೋಪನೇತಾಚ ಯಶ್ಚ ವಿದ್ಯಾಂ ಪ್ರಯಚ್ಛತಿ । ಶ್ವಶುರಶ್ಚಾಪರಾಜಾಚ ಪಂಚೈತೆಪಿತರಸ್ಸ್ಮೃತಾಃ,, ಎಂಬವಚನಪ್ರಕಾರಹುಟ್ಟಿಸಿದವನು, ಉಪನಯನವಂಮಾಡಿದವನು, ವಿದ್ಯೆಯಂ ಕಲಿಸಿದವನು, ಮಾವನು, ದೊರೆಯು, ಈ ಐದುಜನಗಳೂ ತಂದೆಗಳೆಂಬಲ್ಲಿ ಉಪನಯನಮಾಡಿದವನು ಮೊದಲಾದ ನಾಲ್ವರು ತಂದೆಗೆಸಮಾನರಾಗಿ ಭಾವಿಸಲ್ಪಟ್ಟಾಗ್ಯೂ ತಂದೆಯಂತೆ ತನ್ನ ತಾಯಿಗೆ ಹ್ಯಾಗೆಪತಿಗಳಾಗುವದಿಲ್ಲವೋ ಹಾಗೂ, ಭ್ರಾತೃಪತ್ನೀ ಗುರೋಃಪತ್ನೀ ರಾಜಪತ್ನೀತಥೈವಚ । ಪತ್ನೀ ಮಾತಾ ಚಾತ್ಮಮಾತಾ ಪಂಚೈತೆ ಮಾತರಸ್ಸ್ಮೃತಾಃ,, ಎಂಬವಚನದಿಂಮನುಷ್ಯನಿಗೆ ಹೆತ್ತವಳು, ಅತ್ತಿಗೆ, ಗುರುವಿನಹೆಂಡತಿ,ದೊರೆಯಹೆಂಡತಿ, ಅತ್ತೆ, ಈಐದುಮಂದಿಯೂ ತಾಯಿಗಳೆಂಬಲ್ಲಿ ಅತ್ತಿಗೆ, ಮೊದಲಾದವರು ತಾಯಿಗೆ ಸಮಾನವಾಗಿ ಭಾವಿಸಲ್ಪಟ್ಟವರಾದಾಗ್ಯೂ ತಂದೆಯು ಅವರಿಗೆ ಹ್ಯಾಗೆಗಂಡನಾಗಲಾರನೋ ಮತ್ತುಅವರೊಳಗೆಒಬ್ಬೊಬ್ಬರ ಪತಿಗಳು ಒಬ್ಬೊಬ್ಬರ ಸ್ತ್ರೀಯರಲ್ಲಿ ಹ್ಯಾಗೆ ಪ್ರವರ್ತಿಸಲಾಗದೋ ಈ ದೊರೆಯು ಸಾಕ್ಷಾದಿಂದ್ರನು ಎಂಬಲ್ಲಿ ದೊರೆಯು ಶಚೀದೇವಿಗೆ ಹ್ಯಾಗೆ ಪತಿಯಾಗಲಾರನೋ ಮತ್ತು ಕಪಿದರ್ಶನಕಾಲದಲ್ಲಿ ಇಂದ್ರಾಯ ಸ್ವಾಹಾಎಂಬುವದಕ್ಕೆ ಇಂದ್ರನುಪಾತ್ರನಲ್ಲದೆ ದೊರೆಯು ಹ್ಯಾಗೆಪಾತ್ರನಾಗುವದಿಲ್ಲವೋ“ ರಾಜಾಪಿತಾಹಿಜಗತಃ, ಎಂಬವಚನದಿಂದ ದೊರೆಯು ತನ್ನರಾಷ್ಟ್ರಕ್ಕೆ ತಂದೆಯೆಂಬಲ್ಲಿ ದೊರೆಯು ತಂದೆಯಂತೆ ಪ್ರಜೆಗಳನ್ನು ರಕ್ಷಿಸಬೇಕೆಂಬ ಭಾವನೆಯಂಬಿಟ್ಟು, ರಾಷ್ಟ್ರದಲ್ಲಿರತಕ್ಕ ಹಿರಿಷ್ಟಸ್ತ್ರೀಯರಿಗೂ ಪತಿಯಾಗುವದರಿಂದೀಪ್ರಪಂಚ ಮರ್ಯಾದೆ [illegible]

ಮಾಗಿ ರಾಷ್ಟ್ರಾದಿಗಳಿಂ ಹಾಗೆ ಭಾವಿಸಲ್ಪಡುವದಕ್ಕೆ ಯೋಗ್ಯನೆಂಬರ್ಥ ವಲ್ಲದೆ ವಿಪರೀತಾರ್ಥವಂ ಹ್ಯಾಗೆಮಾಡಕೂಡದೋ ಹಾಗೆಪ್ರಕೃತ್ರದಲ್ಲಿ ಪೂಜಕನಾದಭಕ್ತನು ಗುರುವನ್ನೂ ಜಂಗಮಮೂರ್ತಿಯನ್ನೂ ಶಿವನಿಗೆ ಸಮಾನರೆಂದೂ ಶ್ರೇಷ್ಠರೆಂದೂ ತಿಳಿಯಬೇಕಾದಾಗ್ಯೂ ಜಂಗಮನಾಗಲಿ ಗುರುವಾಗಲಿ, ಶಿವನಿಗಿಂತಲೂ ತಾವು ಅಧಿಕರೆಂದು ತಿಳಿಯಕೂಡದು. ಆದಕಾರಣವೇ'' ಗುರುಭಕ್ತಿ ಶ್ಶಿವೆ ಭಕ್ತಿ ಶ್ಶಿವಧ್ಯಾನಪರಾಯಣಃ ॥ ನಿತ್ಯಮಭ್ಯಾಸಯೋಗಸ್ಥ ಸ್ಸಯಂ ಭೂರ್ಜಂಗಮೋತ್ತಮಃ,, ಜ್ಞಾನಂಶಿವಮಯಂ ಭಕ್ತಿ ಶ್ಶೈವೀಧ್ಯಾನಂ ಶಿವಾತ್ಮಕಂ ॥ ಶಿವವ್ರತಂ ಶಿವಾರ್ಚೇತಿ ಶಿವಯೋಗೋಹಿಪಂಚಧಾ,, ಎಂಬುವದು ಮೊದಲಾದ ಶಿವಾಗಮವಚನ ಪ್ರಮಾಣವಿರುವದರಿಂದ ಜಂಗಮನುತಾನು ಶಿವಭಕ್ತನೆಂದೂ, ಶಿವನುತನಗೆ ಪೂಜ್ಯನಾದ ಸ್ವಾಮಿಯೆಂದೂ ತಿಳಿದುಕೊಳ್ಳಬೇಕಲ್ಲದೆ, ತಾನು ಶಿವಸಮಾನನೆಂದಾಗಲಿ, ಶಿವನಿಗಿಂತಲೂ ಪೂಜ್ಯನೆಂದಾಗಲಿ ತಿಳಿದುಕೊಂಡಿರುವದು ದುರ್ಗತಿಗೆ ಕಾರಣವೆಂದು ಸಿದ್ಧಾಂತವು. ಪ್ರಕೃತವನ್ನನುಸರಿಸೋಣ.

ಅವ. ಸಂಸ್ಕಾರದಿಂದಲೋ ಅಲ್ಲವೆ ಶಾಸ್ತ್ರಾಧ್ಯಯನದಿಂದುಂಟಾದಶಿವತತ್ವವಿವೇಕದಿಂದಲೋ ಯೆಂದುಶಂಕೆಪ್ರಾಪ್ತಮಾದಲ್ಲಿ ಸಂಸ್ಕಾರದಿಂದಲ್ಲವೆಂದು ಜಂಗಮ ಮಾಹಾತ್ಮ್ಯಪೂರ್ವಕವಾಗಿ ತತ್ಸ್ವರೂಪವನ್ನಿರೂಪಿಸುವೆನದೆಂತನೆ.

ಮೂ ॥ ✓ ಶಿವಯೋಗೀಶಿವಸ್ಸಾಕ್ಷಾದಿತಿಕೈಂಕರ್ಯಭಕ್ತಿತಃ ।
ಪೂಜಯೆದಾದರಣ್ಮೈವಯಥಾಲಿಂಗಂಯಥಾ ಗುರುಂ ॥

ಟೀ.॥ ಶಿವಯೋಗೀಶ್ವರನಾದ ಜಂಗಮನು ಪ್ರತ್ಯಕ್ಷಶಿವನೇಯೆಂದು ಭಯಭಕ್ತಿಪ್ರೀತಿಯಿಂ ಗುರುಮೂರ್ತಿಯನ್ನೂ ಲಿಂಗವನ್ನೂ ಪೂಜಿಸುವಂತೆ ಜಂಗಮಮೂರ್ತಿಯನ್ನೂ ಪೂಜಿಸಬೇಕು.

ಮೂ ॥ ಗುರುಶಿಷ್ಯಸಮಾರೂಢಲಿಂಗಮಾಹಾತ್ಮ್ಯಸಂಪದಃ ।
ಸರ್ವಂಚಿದ್ರೂಪವಿಜ್ಞಾನಾಜ್ಜಂಗಮಾಧಿಕ್ಯಮುಚ್ಯತೆ ॥

ಟೀ. ॥ ಆಚಾರ್ಯಃಪೂರ್ವರೂಪಮುಂ ತೆವಾ ಸ್ಯುತ್ತರ ರೂಪಂವಿಧ್ಯಾಸಂಧಿಃ ,, ಹೀಗೆಂಬಶ್ರುತಿಯಿಂ ಗುರುಶಿಷ್ಯಮಧ್ಯಗತ ಶಿವಲಿಂಗ ಮಹತ್ವಸಂಪತ್ತಿಯತ್ತಣಿಂ ಸಕಲಪ್ರಪಂಚವು ಚಿತ್ಕ್ರಿಯಾರೂಪನೆಂಬಜ್ಞಾನದಪೆಸೆನಿಂ ಜಂಗಮಾಧಿಕ್ಯವು ಹೇಳಲ್ಪಡುತ್ತದೆ. ಗುರುಶಿಷ್ಯರ ಇಷ್ಟ

ಪ್ರಾಣಭಾವಗಳಲ್ಲಿ ತಾದಾತ್ಮ್ಯಭಾವನೆಯಿಂದಾ ರೂಢವಾದಲಿಂಗ ಮಹತ್ವಸಂಪತ್ತಿಯಿಂ ಸಕಲವಿಶ್ವವೂ ಶಿವಶಕ್ತ್ಯಾತ್ಮಕವೆಂಬಲೈಜ್ಞಾನವೇ ಜಂಗಮಾಧಿಕ್ಯವೆಂಬ ತಾತ್ಪರ್ಯವು.

ಮೂ ॥ ಜಾನಂತ್ಯತಿಶಯಾದ್ಯೇತುಶಿವಂವಿಶ್ವಪ್ರಕಾಶಕಂ ।
ಸ್ವಸ್ವರೂಪತಯಾತೇತುಜಂಗಮಾಇತಿಕೀರ್ತಿತಾಃ ॥

ಟೀ॥ ಬಳಿಕ ಯಾರುಜಂಗಮ ಮೂರ್ತಿಯೆಂದರೆ " ತಸ್ಯಭಾಸಾ ಸರ್ವಮಿದಂವಿಭಾತಿ ,, ಎಂಬ ಶ್ರುತಿಯುಂಟಾಗಿ ತನ್ನ ಚಿತ್ಕ್ರಿಯಾಶಕ್ತಿಗಳಿಂ ವಿಶ್ವಪ್ರಕಾಶಕನಾದ ಶಿವನಂ ಯಾರು ಕೆಲಂಬರು ಅತಿಶಯದಿಂ ಮಾಯಾಕಾರ್ಯಕೋಟಿ ಪ್ರವಿಷ್ಟಂಗಳಾದ ಸಮಸ್ತ ಪದಾರ್ಥಂಗಳಂ ಅನಿತ್ಯವೆಂದು ಅದ ಮಿಥ್ಯಾರಿ ಅವಕ್ಕೆ ಜೀವನಭೂತವಾದ ಜ್ಞಾತೃತ್ವಕರ್ತೃತ್ವ ಸ್ವಭಾವವುಳ್ಳವನನ್ನಾಗಿ ತಿಳಿದು ಅಂಥಾ ಜೀವೇಶ್ವರ ಸಾಧಾರಣಮಾದ ಅಸ್ಮದೂಪಾತ್ಮಕತ್ವಾಭಿನ್ನನಾದ ಶಿವನೇ ತಾನೆಂಬ ದೃಢ ನಿಶ್ಚಯದಿಂ ಸ್ವಸ್ವರೂಪಮಂ ತಿಳಿದಿಹರೋ ಅವರೇ ಜಂಗಮರು.

ಮೂ ॥ ಯೆಪಶ್ಯಂತಿಜಗಜ್ಜಾಲಂಚಿದ್ರೂಪಂಶಿವಯೋಗತಃ ।
ನಿರ್ಧೂತಮಲಸಂಸ್ಪರ್ಶಾಸ್ತೇಪ್ರೋಕ್ತಾಸ್ತೇಶಿವಯೋಗಿನಃ ॥

ಟೀ ॥ ಮತ್ತಂಯಾರು ಜಂಗಮರೆಂದರೆ ಕೊಡಹಲ್ಪಟ್ಟ ಮಲತ್ರಯದ ಸೋಂಕನುಳ್ಳ ಯಾರು ಕೆಲಂಬರು ಶಿವಯೋಗದದೆಸೆಯಿಂದೀವಿಶ್ವಂ ಶಿವಸಂಬಂಧಮುಳ್ಳದ್ದಾಗಿರುವದರಿಂ ಶಿವಸ್ವರೂಪವೇ ಸರಿಯೆಂದುತಿಳಿದು ಬ್ರಹ್ಮ ಪ್ರಪಂಚಗಳಿಗೆ ಸಂಯೋಗ ಸಂಬಂಧವು ಕೂಡದೆಂದು ಖಂಡಿಸಿಹ ಕಾರಣದಿಂ ತಾದಾತ್ಮ್ಯವನಂಗೀಕರಿಸಬೇಕಾಗಿ ಶಿವಸ್ವರೂಪವೇ ಸರಿಯೆಂದುತಿಳಿದು ಕಾಣುತ್ತಿಹರೋ ಅವರು ಜಂಗಮರಾದಶಿವಯೋಗಿಗಳೆಂದರ್ಥ.

ಮೂ ॥ ಘೋರಸಂಸಾರತಿಮಿರಪರಿಧ್ವಂಸನಕಾರಣಂ ।
ಯೆಷಾಮಸ್ತಿಶಿವಜ್ಞಾನಂತೆಮತಾಶ್ಶಿವಯೋಗಿನಃ ॥

ಟೀ ॥ ಮತ್ತಂ॥ ಭಯಂಕರಮಾದ ಸಂಸಾರವೆಂಬ ಕತ್ತಲೆಯಂ ಕೆಡಿಸುವದಕ್ಕೆ ಕಾರಣವಾದ ಶಿವಾಧಿಕ್ಯಜ್ಞಾನವು ಯಾರಿಗುಂಟೋ ಅವರುಗಳು ಜಂಗಮರುಗಳಾದ ಶಿವಯೋಗಿಗಳು.

ಮೂ ॥ ಜಿತಕಾಮಾಜಿತಕ್ರೋಧಾಮೋಹಗ್ರಂಥಿವಿಭೇದಿನಃ ।
ಸಮಲೋಷ್ಠಾಶ್ಮಕನಕಾಸ್ಸಾಧವಶ್ಶಿವಯೋಗಿನಃ ॥

ಟೀ॥ ಮತ್ತಂ ಜಂಗಮರು ಎಂಥಾವರು? ಹ್ಯಾಗಿರುವರು? ಎಂದರೆ

ಕಾಮ ಕ್ರೋಧಳಿಗಲ್ಲದವರಾಗಿ ಅಜ್ಞಾನಗ್ರಂಥಿಯಂಛೇದಿಸಿದವರಾಗಿ ಮಣ್ಣು ಹೆಂಟೆ, ಪಾಷಾಣ, ಚಿನ್ನಗಳಲ್ಲಿ ಸಮವಾದ ಬುದ್ಧಿಯುಳ್ಳವರಾಗಿ ಸಾಧುಗಳಾಗಿ ಶಿವಯೋಗನಿಷ್ಠರಾಗಿ ಶತ್ರು ಮಿತ್ರರಲ್ಲಿ ಏಕಪ್ರಕಾರವಾಗಿ ಪ್ರತ್ಯಕ್ಷೀಕರಿಸಲ್ಪಟ್ಟ ಶಿವಸ್ವರೂಪವುಳ್ಳವರಾಗಿ ಇಹಾಮುತ್ರ ಫಲಭೋಗಂಗಳಲ್ಲಿ ವಿರಾಗಿಗಳಾಗಿ ಶರೀರಾಹಂಭಾವಶೂನ್ಯರಾಗಿ ಇರುವವರೇ ಜಂಗಮರು.

ಅವ. ಬಳಿಕೀಪ್ರಕಾರದಿಂ ಹೇಳಲ್ಪಟ್ಟ ಜ್ಞಾನದ್ವಯಸಂಪಂನರಾರುಂಟೋ ಆವರು ಸಾಕ್ಷಾಚ್ಛಿವರೂಪರೇ ಎಂಬಲ್ಲಿ ಹೇಳುತ್ತೇನೆ.

ಮೂ ॥ ದುರ್ಲಭಂಹಿಶಿವಜ್ಞಾನಂದುರ್ಲಭಂಶಿವಚಿಂತನಂ ।
ಯೆಷಾಮೇತದ್ದ್ವಯಂಚಾಸ್ತಿತೆಹಿಸಾಕ್ಷಾಚ್ಛಿವಾತ್ಮಕಾಃ ॥

ಟೀ ॥ ಶಿವನೇ ಅಧಿಕನೆಂಬಜ್ಞಾನವು ಪೂರ್ವದಲ್ಲಿಹೇಳಿದ ಯುಕ್ತಿಗಳಿಂ ಶಿವಾಭೇದ ಚಿಂತನೆಯು ಈ ಯೆರಡೂ ದುರ್ಲಭವು. ಈ ಯೆರಡು ಯಾರಿಗುಂಟೋ ಅವರುಗಳು ಪ್ರತ್ಯಕ್ಷ ಶಿವಮೂರ್ತಿಗಳು.

ಮೂ ॥ ಸಮಾಶ್ಶತ್ರೌಚಮಿತ್ರೇಚಸಾಕ್ಷಾತ್ಕೃತಶಿವಾತ್ಮಕಾಃ ।
ನಿಸ್ಪೃಹಾನಿರಹಂಕಾರಾವರ್ತಂತೆಶಿವಯೋಗಿನಃ ॥

ಟೀ ॥ ಮತ್ತಂ ಶತ್ರುವಿನಲ್ಲಿಯೂ ಮಿತ್ರನಲ್ಲಿಯೂ ಸಮಬುದ್ಧಿಯುಳ್ಳವರಾಗಿ ಸಾಕ್ಷಾತ್ಕರಿಸಲ್ಪಟ್ಟ ಶಿವಸ್ವರೂಪರಾಗಿ ನಿಸ್ಪೃಹರುಗಳಾಗಿ ಅಹಂಕಾರ ಮಮಕಾರವಿಲ್ಲದವರುಗಳಾಗಿ ಇರುತ್ತಿಹರೋ ಅವರು ಶಿವಯೋಗಿಗಳಾದ ಜಂಗಮರು.

ಮೂ ॥ ಸ್ವರೂಪಜ್ಞಾನಸಂಪನ್ನೋಥ್ಯಸ್ತಾಹಂಮಮತಾಕೃತಿಃ ।
ಸ್ವಯಮೆವಸ್ವಯಂಭಾವಾಚ್ಚರತೀತಿಚರಾಭಿಧಃ ॥

ಟೀ ॥ ಮತ್ತಂ ಯಾರು ಚರಮೂರ್ತಿಯೆಂದರೆ ॥ ನಿವಾರಿಸಲ್ಪಟ್ಟ ಅಹಂಕಾರ ಮಮಕಾರವುಳ್ಳವನಾಗಿ ಸ್ವರೂಪಜ್ಞಾನಸಂಪನ್ನನಾದ ಸ್ವಯಂಲಿಂಗಿಯು ತಾನೇ ತಾನಾಗಿ ಸಂಚರಿಸುವದರಿಂ ಚರಮೂರ್ತಿಯೆನಿಸಿಕೊಳ್ವಂ.

ಮೂ ॥ ಕಾಮಕ್ರೋಧಾದಿನಿರ್ಮುಕ್ತಶ್ಶಾಂತಿದಾಂತಿಸಮನ್ವಿತಃ ।
ಸಮಬುಧ್ಯಾಚರೆದ್ಯೋಗೀಸರ್ವತ್ರಶಿವಬುದ್ಧಿಮಾನ್ ॥

ಟೀ ॥ ಮತ್ತಂ ॥ ಆಚರಮೂರ್ತಿಯ ಆಚಾರವೇನೆನೆ ಕಾಮಕ್ರೋಧಾದಿ ಅರಿಷಡ್ವರ್ಗಶೂನ್ಯನಾಗಿ ಅಂತರ್ಬಾಹ್ಯೇಂದ್ರಿಯ ನಿಗ್ರಹವುಳ್ಳವ

ನಾಗಿ ಸಕಲ ಪ್ರಪಂಚವೂ ಶಿವಸ್ವರೂಪವೆಂಬ ಬುದ್ಧಿಯುಳ್ಳವನಾಗಿ ಶತ್ರು ಮಿತ್ರರಲ್ಲಿ ಸಮಾನವಾದ ಬುದ್ಧಿಯುಳ್ಳವನಾಗಿ ಇರುವನು.

ಮೂ ॥ ನಸನ್ಮಾನೇಷುಸಂಪ್ರೀತಿಂನಾಪಮಾನೇಷುಚವ್ಯಥಾಂ ।
ಕುರ್ವಾಣಸ್ಸಂಚರೇದ್ಯೋಗೀಕೂಟಸ್ಥಸ್ಸ್ವಾತ್ಮನಿಸ್ಥಿತಃ ॥

ಟೀ ॥ ಮತ್ತಂ ತ್ಯಾಗಿರುವನು;—ತುರ್ಯಸಾಕ್ಷಿಕ ಪ್ರತ್ಯಗಾತ್ಮ ನಿಜಸ್ವರೂಪದಲ್ಲಿ ಇರುತ್ತಿಹ ಶಿವಯೋಗೀಶ್ವರಂ ಸನ್ಮಾನಂಗಳಲ್ಲಿ ಪ್ರೀತಿಯಂ ಅವಮಾನಂಗಳಲ್ಲಿ ದುಃಖಮಂಮಾಡದೆ ಸಂಚರಿಸುತ್ತಿಹನು.

ಮೂ ॥ ಅಪ್ರಾಕೃತೈರ್ಗುಣೈಸ್ಸ್ವೀಯೈಸ್ಸರ್ವಂವಿಸ್ಮಾಪಯನ್ಜನಂ ।
ಅವ್ಯಕ್ತಪರಮಾನಂದಮುದಿತೋದೇಹಿವಚ್ಚರೇತ್ ॥

ಟೀ ॥ ಮತ್ತಂ ತ್ಯಾಗಿರುವನೆಂದರೆ,-ಶಿವಾದ್ವೈತಜ್ಞಾನದಿಂದಾವಿರ್ಭೂತವಾದ ಪರಮಾನಂದದಿಂ ಸಂತುಷ್ಟನಾದ ಶಿವಯೋಗೀಶ್ವರಂ ಮಾಯಾಸಂಬಂಧವಲ್ಲದ ಲೋಕೋತ್ತರವಾದ ತನ್ನ ಗುಣಾವಳಿಯಿಂ ಸಮಸ್ತ ಜನವಂ ಆಶ್ಚರ್ಯದೊಡನೆ ಕೂಡಿದವರನ್ನಾಗಿಮಾಡಿ ದೇಹಿಯೋಪಾದಿಯಲ್ಲಿ ಚರಿಸುವನು.

ಮೂ ॥ ನಿರ್ಮಮೋನಿರಹಂಕಾರೋನಿರಸ್ತಕ್ಲೇಶಪಂಚಕಃ ।
ಭಿಕ್ಷಾಶೀಸಮಬುದ್ಧಿಶ್ಚ ಮುಕ್ತಪ್ರಾಯೋಮುನಿರ್ಭವೇತ್ ॥

ಟೀ॥ (ಮತ್ತಂತ್ಯಾಗಿರುವನು) ಸಮಸ್ತ ವಿಷಯಂಗಳಲ್ಲಿಯೂ ಮಮಕಾರ ಶೂನ್ಯನಾಗಿ ಶರೀರಾದಿಳಗಲ್ಲಿ ನಾನೆಂಬ ಅಹಂಕಾರಾಭಿಮಾನ್ಯಶೂನ್ಯನಾಗಿ ಅವಿದ್ಯಾದಿ ಪಂಚಕ್ಲೇಶರಹಿತನಾಗಿ ಭಿಕ್ಷಾನ್ನ ಭೋಕ್ತೃವಾಗಿ ಮಣ್ಣು, ಹೆಂಟೆ, ಪಾಷಾಣ, ಸ್ವರ್ಣಗಳಲ್ಲಿ ಸಮಬುದ್ಧಿಯುಳ್ಳವನಾಗಿ ಸ್ವಯಲಿಂಗಾಭಿಧಾನಯತಿಯು ಇದೇಕೊನೆಯ ದೇಹವಾಗಿರುವದರ ದೆಸೆಯಿಂ ಪರಮುಕ್ತ ಸದೃಶನಾಗಿ ಚರಿಸುವನು.

ಮೂ ॥ ಯದೃಚ್ಛಾಲಾಭಸಂತುಷ್ಟೋಭಸ್ಮನಿಷ್ಠೋ ಜಿತೇಂದ್ರಿಯಃ ।
ಸಮಸ್ಸ್ಯಾತ್ಪಾರ್ಥಿವೇಯೋಗೀಭಿಕ್ಷುಕೇವಾಽಪ್ಯಪಥವಾ ॥

ಟೀ ॥ (ಮತ್ತಂ ತ್ಯಾಗಿರುವನು) ಶಿವಯೋಗಿಯು ಯಥಾಲಾಭ ಸಂತುಷ್ಟನಾಗಿ ಭಸ್ಮಸ್ನಾನಾದಿಗಳಲ್ಲಿ ನಿಷ್ಠನಾಗಿ ಜಿತೇಂದ್ರಿಯನಾಗಿ ಭಿಕ್ಷುಕನಲ್ಲಿಯೂ ರಾಜನಲ್ಲಿಯೂ ಸಮಾನವಾದ ಬುದ್ಧಿಯುಳ್ಳವನಾಗಿಹನು.

ಮೂ ॥ ಪಶ್ಯಂತ್ಸರ್ವಾನಿಭೂತಾನಿಸಂಸಾರಸ್ಥಾನಿಸರ್ವಶಃ ॥
ಸ್ಮಯಮಾನಃಪರಾನಂದೇಲೀನಾತ್ಮಾವರ್ತತೇಸುಧೀಃ ।

ಟೀ ॥ ಮತ್ತಂ ಹ್ಯಾಗಿರುವನೆಂದರೆ ಶೋಭನವಾದ ಬುದ್ಧಿಯು
ಳ್ಳ ಸ್ವಯಲಿಂಗಯತೀಶ್ವರಂ ಎಲ್ಲಾಕಡೆಯಲ್ಲೂ ಸಂಸಾರ ಚಕ್ರದಲ್ಲಿ ಸಂಚ
ರಿಸುತ್ತಿಹ ಸಕಲಪ್ರಾಣಿಗಳಂ ಕಾಣುತ್ತಾ ಆಶ್ಚರ್ಯವುಳ್ಳವನಾಗಿ ಪರಮಾ
ನಂದಮಯವಾದ ಮಹಾಲಿಂಗದಲ್ಲಿ ಅಡಗಿದವನಾಗಿರುವನು.

ಮೂ ॥ ಧ್ಯಾನಂಶೈವಂತಥಾಜ್ಞಾನಂ ಭಿಕ್ಷಾಚೈಕಾಂತಶೀಲತಾ ।
ಏತೆಚತ್ವಾರಿಕರ್ಮಾಣಿನಪಂಚಮಮಿಹೆಷ್ಯತೆ ॥

ಟೀ ॥ ಮತ್ತಂ ಶಿವಾಧಿಕ್ಯಜ್ಞಾನವು ಶಿವಚಿಂತನೆಯು ಭಿಕ್ಷಾಹಾ
ರವು ಏಕಾಂತವಾಸವು ಈ ನಾಲ್ಕು ಸ್ವಯಲಿಂಗಯೋಗಿಗೆ ವಿಹಿತವಾದಂ
ಥಾದ್ದು. ಐದನೆಯದು ಇಲ್ಲವು.

ಮೂ ॥ ನಿತ್ಯೆನಿರ್ಮಲಭಾವನೆನಿರುಪಮೆನಿರ್ಧೂತವಿಶ್ವಭ್ರಮೆ
ಸತ್ತಾನಂದಚಿದಾತ್ಮಕೆಪರಶಿವೆಸಾಮ್ಯಂಗತಸ್ಸಂಯಮೀ ॥
ಪ್ರಧ್ವಸ್ತಾಶ್ರಮವರ್ಣಧರ್ಮನಿಗಳಸ್ಸ್ವಛಂದಸಂಚಾರವಾ ।
ದೆಹೀವಾದ್ಭುತವೈಭವೊವಿಜಯತೆಜೀವನ್ವಿಮುಕ್ತಸ್ಸುಧೀಃ ॥

ಟೀ ॥ (ಮತ್ತಂ ಹ್ಯಾಗಿರುವನು) ನಿತ್ಯ ನಿರ್ಮಲಸ್ವರೂಪನಾದಉಪ
ಮಾತೀತನಾದ ನಿವಾರಿಸಲ್ಪಟ್ಟ ಸಮಸ್ತ ದೋಷವುಳ್ಳ ಸಚ್ಚಿದಾನಂದಸ್ವ
ರೂಪನಾದ ಪರಶಿವನಲ್ಲಿ ಜ್ಞಾತೃತ್ವ ಕರ್ತೃತ್ವಯೋಗದಿಂ ಸಾಮ್ಯವನ್ನೈದಿದ
ಶಿವಯೋಗಿಯು ನಿವಾರಿಸಲ್ಪಟ್ಟ ವರ್ಣಾಶ್ರಮ ಧರ್ಮವೆಂಬ ಸಂಕೋಲೆ
ಯುಳ್ಳವನಾಗಿ ಸ್ವೇಛ್ಛಾಚಾರವುಳ್ಳವನಾದರೂ ಆಶ್ಚರ್ಯವಾದಮಹತ್ವದ ಸಂ
ಪತ್ತಿಯುಳ್ಳವನಾಗಿ ಸರ್ವೋತ್ಕೃಷ್ಟನಾಗಿ ಜೀವನ್ಮುಕ್ತನಾಗಿಹನು.

ಮೂ ॥ ಪ್ರಕಾಶತೆಯಥಾನಾಗ್ನಿರರಣ್ಯಾಂಮಂಥನಂವಿನಾ ।
ಕ್ರಿಯಾಂವಿನಾತಥಾಂತಸ್ಥೊನಪ್ರಕಾಶೊಭವೆಚ್ಛಿವಃ ॥

ಟೀ॥ ಹಾಗಾದರೆ ಈ ಪ್ರಕಾರವಾದ ಚರಮೂರ್ತಿಗೆ ಬಾಹ್ಯಕ್ರಿಯೆ
ಗಳುಂಟೋ ಇಲ್ಲವೋ ಎಂದರೆ;—ದಾರುಪಾತ್ರೆಯಲ್ಲಿ ವಹ್ನಿಯುಮಂಥನ
ಹೊರತಾಗಿ ಹ್ಯಾಗೆ ಪ್ರಕಾಶಿಸದೋ ಹಾಗೆಸದಾಚಾರದೊಡನೆ ಕೂಡಿದ
ಪೂಜಾದಿಕ್ರಿಯೆಗಳಿಲ್ಲದೆ ಲಿಂಗಮಧ್ಯಸ್ಥವಾದ ಶಿವನು ಪ್ರಕಾಶನಾಗನು.

ಮೂ ॥ ನಯಥಾವಿಧಿಲೊಪಸ್ಸ್ಯಾದ್ಯಥಾದೆವಃಪ್ರಸೀದತಿ ।
ಯಥಾಗಮಃಪ್ರಮಾಣಂಸ್ಯಾತ್ತಥಾಕರ್ಮಸಮಾಚರೇತ್ ॥

ಟೀ ॥ ಬಳಿಕ ಪೂಜೆಯು ಎಂತುಮಾಡಲ್ತಕ್ಕುದು ಎನೆ;—ಇತಿಕರ್ತ
ವ್ಯತಾರೂಪವಾದ ನಿಯಮಲೋಪವಾದರೆ ಶಿವಂ ಪ್ರಸನ್ನನಾಗನು. ಶಿವಂ

ಪ್ರಸನ್ನನಾಗದಿರ್ದೊಡೆ ಆಗಮಕ್ಕೆ ಅಪ್ರಾಮಾಣ್ಯಮುಂಟಾಗುವದು. ಅದರಿಂ ನರಕಪ್ರಾಪ್ತಿಯಹುದು. ಆಕಾರಣದಿಂ ವಿಧಿಲೋಪವಾಗದಂತೆ ಶಿವನುಪ್ರಸನ್ನನಾಗುವಂತೆ ಆಗಮಂಪ್ರಮಾಣವಪ್ಪಂತೆ ಪೂಜೆಯುಮಾಡಲ್ತಕ್ಕದು.

ಮೂ ॥ ಮಹಾಕಾಶಪ್ರಭಾಕಾರೇಮಹಾನಂದಂಸ್ವಕಂಮನಃ ।
ಯೋಜಯೇತ್ಸರ್ವಸಿದ್ಧ್ಯರ್ಥಮುತ್ತಮಂಜಂಗಮಸ್ಥಲಂ ॥

ಟೀ ॥ ತೇಜೋಮಯವಾದ ಚಿದಾಕಾಶದಲ್ಲಿ ಅಪರಿಮಿತವಾದ ಆನಂದದಿಂ ತುಂಬಲ್ಪಟ್ಟ ಮನಸ್ಸನ್ನು ಸಕಲ ಸಿದ್ಧಿಗೋಸ್ಕರ ವಶಪಡಿಸಿಕೊಂಡಿರುವನ್ಯಾವನೋ ಅವನೇಜಂಗಮಸ್ಥಲವನ್ನು ಹೊಂದಿದವನು.

ಮೂ ॥ ಯತ್ರೈವಜಂಗಮಾಸ್ಸಂತಿತತ್ರೈವನಿಖಿಲಾಮರಾಃ ।
ಸಪ್ತಕೋಟಿಮಹಾಮಂತ್ರಾಉಪಮಂತ್ರಾಸ್ತ್ವನೇಕಶಃ ।
ಆಮ್ನಾಯಾದೀನಿತಂತ್ರಾಣಿಸಿದ್ಧಾಂತಾಬಹವಶ್ಚಯೇ ।
ಭೂತಾನಿಭುವನಾನ್ಯೇವಪರಿವೇಷಂತಿಸಂತತಂ ।

ಟೀ ॥ ಯಾವಸ್ಥಾನದಲ್ಲಿ ಶಿವಯೋಗಿಗಳಾದ ಜಂಗಮರಿರುತ್ತಾರೋ ಅಲ್ಲಿಯೇ ಸಮಸ್ತದೇವತೆಗಳೂ, ಏಳುಕೋಟಿ ಮಹಾಮಂತ್ರಗಳೂ, ೧೦ ಸಂಖ್ಯೆಗಳಾದ ಉಪಮಂತ್ರಗಳೂ, ವೇದಗಳೂ, ಉಪನಿಷತ್ತುಗಳೂ, ಆಗಮಗಳೂ, ಸಾಂಖ್ಯ, ಯೋಗ, ಮೊದಲಾದ ಅನೇಕ ಸಿದ್ಧಾಂತಗಳೂ, ಸಕಲ ಲೋಕಗಳೂ, ಯಾವಾಗಲೂ ಬಳಸಿಕೊಂಡಿರುವವು.

ಮೂ ॥ ಶಿವೋಜಂಗಮರೂಪೀಸನ್ ಚರತೆಲೋಕಪೂಜಿತಃ ।
ಅಂತರ್ಧಾಮಲಲಾಟಾಕ್ಷಶ್ಶಶಾಂಕಾಂ ಽವಿಹಾಯಚ ।

ಟೀ ॥ ಮಂಗಳಮೂರ್ತಿಯಾದ ಪರಶಿವನು ಅಂತರ್ಮುಖವಾದ ಪ್ರಕಾಶದಿಂಕೂಡಿದ ನೇತ್ರವುಳ್ಳವನಾಗಿ ಚಂದ್ರಕಲೆಯನ್ನು ಬಿಟ್ಟು ಜಂಗಮಸ್ವರೂಪಿಯಾಗಿ ಸರ್ವಜನಗಳಿಂದಲೂ ಪೂಜಿಸಲ್ಪಡುತ್ತಾ ಸಂಚರಿಸುತ್ತಾನೆ.

ಇದು ನಿರಾಭಾರವೀರಶೈವಸಾಮ್ರಾಜ್ಯ ಧುರಂಧರನಾದ
ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿ
ಸಲ್ಪಟ್ಟ ವೀರಶೈವಪ್ರದೀಪಿಕೆಯೋಳ್ ಅಷ್ಟಾ
ವರಣ ಪ್ರಕರಣದೊಳ್ ಜಂಗಮಸ್ಥಲ
ನಿರೂಪಣಂ ಸಂಪೂರ್ಣಂ.

# ಭಸ್ಮ ವಿಧಾನ ಧಾರಣ ಲಕ್ಷಣ

## ಫಲ ಪ್ರಕರಣವು.

---

ಶ್ರೀಮದ ಸದ್ಗುರುಮೇಧಾ ದಕ್ಷಿಣಾಮೂರ್ತಯೆ ಪರಬ್ರಹ್ಮಣೇನಮಃ

ಅವ. ಅನಂತರದೊಳ್ ಭಸ್ಮವಿಧಾನ ಧಾರಣ ಲಕ್ಷಣ ತತ್ಫಲವಂ ನಿರೂಪಿಸುವೆನದೆಂತೆನೆ.

ಮೂ ॥ ವಿಭೂತಿರ್ಭಸಿತಂಭಸ್ಮಕ್ಷಾರಂರಕ್ಷೇತಿಭಸ್ಮನಃ ।
ಏತಾನಿಪಂಚನಾಮಾನಿಹೇತುಭಿಃಪಂಚಭಿರ್ಭೃಶಂ ॥

ಟೀ ॥ ಭಸ್ಮಕ್ಕೆ ಐದುಕಾರಣಗಳಿಂದ ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷೆ ಎಂದು ಐದು ನಾಮಂಗಳುಂಟು.

ಮೂ ॥ ವಿಭೂತಿರ್ಭೂತಿಹೇತುತ್ವಾದ್ಭಸಿತಂತತ್ವಭಾಸನಾತ್ ।
ಪಾಪಾನಾಂಭರ್ತ್ಸನಾದ್ಭಸ್ಮಕ್ಷಾರಣಾತ್ಕ್ಷಾರಮಾಪದಾಂ ॥
ರಕ್ಷಣಾತ್ಸರ್ವಭೂತೇಭ್ಯೋರಕ್ಷೇತಿಪರಿಗೀಯತೆ ।

ಅವ. ಬಳಿಕೀ ನಾಮಂಗಳ ಅನ್ವರ್ಥವಂ ತಿಳಿಸುವೆನು.

ಟೀ ॥ ಅಣಿಮಾದ್ಯಷ್ಟೈಶ್ವರ್ಯಂಗಳಿಗೆ ಕಾರಣಮಾದುದರ ದೆಸೆಯಿಂ ವಿಭೂತಿ ಎಂದೂ, ಶಿವತತ್ವಮಂ ಪ್ರಕಾಶಮಂ ಮಾಡುವದರಿಂ ಭಸಿತವೆಂದೂ, ಪಾಪಂಗಳನಡಗಿಸುವಕಾರಣದಿಂ ಭಸ್ಮವೆಂದೂ, ತಾಪತ್ರಯೋತ್ಪನ್ನಮಾದವಿಪತ್ತುಗಳಕ್ಷಯಮಂ ಮಾಡುವದರತ್ತಣಿಂ ಕ್ಷಾರವೆಂದೂ, ಗ್ರಹ ಯಕ್ಷಾದಿ ದುಷ್ಟಪ್ರಾಣಿಗಳ ದೆಸೆಯಿಂ ರಕ್ಷಿಸುವ ಕಾರಣದಿಂ ರಕ್ಷೆಯೆಂದೂ ಹೇಳಲ್ಪಡುವದು.

ಮೂ ॥ ನಂದಾಭದ್ರಾಚಸುರಭಿಸ್ಸುಶೀಲಾಸುಮನಾಸ್ತಥಾ ।
ಪಂಚಗಾವೋವಿಭೋರ್ಜಾತಾಸ್ಸದ್ಯೋಜಾತಾದಿವಕ್ತ್ರತಃ ॥

ಟೀ ॥ ಬಳಿಕೀ ಪ್ರಕಾರಮಾದ ಕ್ರಿಯಾಭೇದಕ್ಕೆ ಕಾರಣವೇನೆಂದರೆ:_ಶಿವನ ಸದ್ಯೋಜಾತಾದಿ ಮುಖದಿಂ ನಂದೆಯೆಂಬ ಗೋವು ವಾಮದೇವ ಮುಖದಿಂ ಭದ್ರೆಯೆಂಬಗೋವು ಅಘೋರಮುಖದಿಂ ಸುರಭಿಯೆಂಬ ಗೋವು ತತ್ಪುರುಷ ಮುಖದಿಂ ಸುಶೀಲೆಯೆಂಬಗೋವು ಈಶಾನಮುಖದಿಂ ಸುಮನೆಯೆಂಬಗೋವು ಈ ಪ್ರಕಾರವಾಗಿ ಪಂಚಮುಖಗಳಿಂ ಪಂಚ ಗೋವುಗಳುದಿಸಿದವು.

ಮೂ ॥ ಕಪಿಲಾ ಕೃಷ್ಣಧವಳೀಧೂಮ್ರಾ ರಕ್ತಾ ತಥೈವಚ ।
ನಂದಾದೀನಾಂಗವಾಂವರ್ಣಾಃ ಕ್ರಮೇಣಪರಿಕೀರ್ತಿತಾಃ ॥

ಟೀ ॥ ಹಾಗಾದರೀಗೋವುಗಳ ಸ್ವರೂಪವೇನೆನೆ ॥ ನಂದೆಯೆಂಬ ಗೋವು ಕಪಿಲವರ್ಣವುಳ್ಳದ್ದು. ಭದ್ರೆಯೆಂಬ ಗೋವು ಕೃಷ್ಣವರ್ಣವುಳ್ಳದ್ದು. ಸುರಭಿಯೆಂಬುದು ಶ್ವೇತವರ್ಣವುಳ್ಳದ್ದು. ಸುಶೀಲೆಯೆಂಬ ಗೋವು ಧೂಮ್ರವರ್ಣವುಳ್ಳದ್ದು. ಸುಮನೆಯೆಂಬ ಗೋವು ರಕ್ತವರ್ಣವುಳ್ಳದ್ದು. ಈಪ್ರಕಾರದಿಂ ಕ್ರಮವಾಗಿನಂದಾದಿಗೋವುಗಳವರ್ಣವು.

ಮೂ ॥ ಸದ್ಯೋಜಾತಾದ್ವಿಭೂತಿಶ್ಚ ವಾಮಾದ್ಭಸಿತಮೇವಚ ।
ಅಘೋರಾದ್ಭಸ್ಮಸಂಜಾತಂಪುರುಷಾತ್ಕ್ಷಾರನಾಮಚ ॥
ರಕ್ಷಾಚೇಶಾನವಕ್ತ್ರಾಚ್ಚ ನಂದಾದಿದ್ವಾರತೋಭವೇತ್ ।

ಟೀ ॥ ಬಳಿಕ ಯಾವಗೋವಿನಿಂದ ಯಾವ ಭಸ್ಮವುಹುಟ್ಟಿತೆಂದರೆ । ಸದ್ಯೋಜಾತದಿಂದುಂಟಾದ ನಂದೆಯಿಂ ವಿಭೂತಿಯೂ, ವಾಮದೇವಮುಖದಿಂ ಪುಟ್ಟಿದ ಭದ್ರೆಯಿಂಭಸಿತವೂ, ಅಘೋರಮುಖದಿಂದುತ್ಪನ್ನವಾದ ಸುರಭಿಯಿಂ ಭಸ್ಮವೂ, ತತ್ಪುರುಷ ಮುಖದಿಂದಾವಿರ್ಭೂತವಾದ ಸುಶೀಲೆಯಿಂ ಕ್ಷಾರವೂ, ಈಶಾನಮುಖದಿಂ ಜನಿಸಿದ ಸುಮನೆಯಿಂ ರಕ್ಷೆಯೂ, ಈಪ್ರಕಾರವಾಗಿ ಹುಟ್ಟಿದವು.

ಮೂ ॥ ಧಾರಯೆನ್ನಿತ್ಯಕಾರ್ಯೇಷುವಿಭೂತಿಂಚಪ್ರಯತ್ನತಃ ।
ನೈಮಿತ್ತಿಕೇಷುಭಸಿತಂಕ್ಷಾರಂಕಾರ್ಯೇಷುಸರ್ವದಾ ॥
ಪ್ರಾಯಶ್ಚಿತ್ತೇಷುಸರ್ವೇಷುಭಸ್ಮನಾಮಯಥಾವಿಧಿ ।
ರಕ್ಷಾಂಚಸರ್ವಕಾರ್ಯೇಷುಪ್ರಯೋಕ್ತ್ರವ್ಯಾಸದಾಬುಧೈಃ ॥

ಟೀ ॥ ಬಳಿಕೀಭಸ್ಮಗಳಿಗೆ ವಿನಿಯೋಗವೇನೆನೆ;—ವೀರಶೈವ ಮತಪ್ರವಿಷ್ಟರಾದ ವಿದ್ವಜ್ಜನದಿಂ ಪ್ರಯತ್ನಪೂರ್ವಕವಾಗಿ ನಿತ್ಯಕರ್ಮಂಗಳಲ್ಲಿ ವಿಭೂತಿಯೂ ನೈಮಿತ್ತಿಕ ಕರ್ಮಂಗಳಲ್ಲಿ ಭಸಿತವೂ, ಸಕಲಕಾರ್ಯಂಗಳಲ್ಲಿ ಕ್ಷಾರವೂ, ಸಕಲಪ್ರಾಯಶ್ಚಿತ್ತಂಗಳಲ್ಲಿ ಭಸ್ಮವೂ, ಮೋಕ್ಷಕಾರ್ಯಂಗಳಲ್ಲಿ ರಕ್ಷೆಯೂ ವಿಧಿತಪ್ಪದೆ ಧರಿಸಲ್ಪಡಬೇಕು.

ಮೂ ॥ ಕಲ್ಪಂಚೈವಾನುಕಲ್ಪಂಚಉಪಕಲ್ಪಮಕಲ್ಪಕಂ ।
ಯೆಷಾಂವದಾಮಿಮುತ್ಕೃಷ್ಟಮನ್ಯತ್ಸರ್ವಮಭಾವತಃ ॥

ಟೀ ॥ ಬಳಿಕೀ ಭಸ್ಮೋತ್ಪತ್ತಿಯ ಕಲ್ಪವಂ ಪೇಳ್ವೆ;—ಕಲ್ಪವೆಂದು ಅನುಕಲ್ಪವೆಂದು ಉಪಕಲ್ಪವೆಂದು ಅಕಲ್ಪನೆಂದು ಭಸ್ಮೋತ್ಪತ್ತಿ

ಯು ನಾಲ್ಕುಪ್ರಕಾರವಾಗಿ ಶಾಸ್ತ್ರಜ್ಞರಿಂದೇಳಲ್ಪಟ್ಟಿತು. ಈ ನಾಲ್ಕು ವಿಧವಾದ ಭಸ್ಮಂಗಳಲ್ಲಿ ಆದಿಕಲ್ಪೋಕ್ತವಾದ ವಿಭೂತಿಯು ಶ್ರೇಷ್ಠವು. ಉಳಿದ ಮೂರುಭಸ್ಮವು ಕಲ್ಪಭಸ್ಮ ದೊರಕದಿರ್ದೊಡಂಗೀಕರಿಸಲ್ತಕ್ಕು ದು. ಈ ಭಾಗದಲ್ಲಿ ಭಸ್ಮೋತ್ಪಾದನ ಮುದ್ದಿಷ್ಟಂಚತುರ್ಧಾತಂತ್ರವೇ ದಿಭಿಃ ಎಂದು ಪ್ರಮಾಣವು.

ಮೂ ॥ ಯಥಾಶ್ರುತ್ಯುಕ್ತವಿಧಿನಾಗೃಹೀತ್ವಾಗೋಮಯಂನವಂ ।
ಸದ್ಯೇನವಾಮದೇವೇನಕುರ್ಯಾತ್ಪಿಂಡಮನುತ್ತಮಂ ॥
ಶೋಷಯೇತ್ಪುರುಷೇಣೈವದಹೇದ್ಘೋರಾಖ್ಯಪಾಗ್ನಿನಾ ।
ಕಲ್ಪಂತದ್ಭಸ್ಮವಿಜ್ಞೇಯಮನುಕಲ್ಪಮಥೋಚ್ಯತೇ ॥

ಟೀ ॥ ಬಳಿಕ ಭಸ್ಮಂಗಳ ಸ್ವರೂಪಕ್ರಮಮೇನೆನೆ;-ನಂದಾದಿಗೋವುಗಳಿಂದಾವಿಭೂರ್ತವಾದನೂತನಗೋಮಯಮಂ ಸದ್ಯೋಜಾತಮಂತ್ರದಿಂದಂತರದಲ್ಲಿಯೇಹಿಡಿದು, ವಾಮದೇವ ಮಂತ್ರದಿಂಮುದ್ದೆಯಂಮಾಡಿ, ತತ್ಪುರುಷ ಮಂತ್ರದಿಂದೊಣಗಿಸಿ, ಶಿವಮಂತ್ರ ಸಂಸ್ಕೃತಾಗ್ನಿಯಿಂದಘೋರಮಂತ್ರದಿಂ ಭಸ್ಮೀಕರಿಸಿ, ಬಳಿಕೀಶಾನಮಂತ್ರದಿಂ ಬಿಲ್ವಪಾತ್ರೆಗಳಲ್ಲಿ ತುಂಬಿರಿಸಿದ ಭಸ್ಮವೇ ಕಲ್ಪವೆಂದು ತಿಳಿಯಲು ಯೋಗ್ಯವು.

ಮೂ ॥ ಏಷ್ವೇಕತಮಮಾದಾಯಪಾತ್ರೇಷುಕಲಶಾದಿಷು ।
ತ್ರಿಸಂಧ್ಯಮಾಚರೇತ್ಸ್ನಾನಂಯಥಾಸಂಭವಮೇವವಾ ॥

ಟೀ ॥ ಬಳಿಕೀ ಪ್ರಕಾರಮಾದ ಭಸ್ಮದಿಂ ಸ್ನಾನವಂ ಮಾಡುವಲ್ಲಿ ಕಲಶಾದಿ ಪಾತ್ರೆಗಳಲ್ಲಿ ಭಿನ್ನಭಿನ್ನವಾಗಿರಿಸಲ್ಪಟ್ಟ ಭಸ್ಮಗಳಲ್ಲಿ ಯಾವುದನ್ನಾದರೂ ಒಂದು ಭಸ್ಮವಂತೆಗದುಕೊಂಡು ತ್ರಿಕಾಲದಲ್ಲಿಯೂ ಸ್ನಾನವಂ ಮಾಡಬೇಕು.

ಅವ. ಮತ್ತೊಂದು ಆಗಮೋಕ್ತವಾದ ಭಸ್ಮೋತ್ಪತ್ತಿಯಂ ನಿರೂಪಿಸುವೆದವೆಂತೆನೆ.

ಮೂ ॥ ಕಾರ್ತಿಕೇಮಾರ್ಗಶೀರ್ಷೇತುಮಾಘೇವಾಶ್ವಯುಜೇಪಿವಾ ।
ವೈಶಾಖೇಶ್ರಾವಣೇವಾಪಿಭಸ್ಮಸಂಗ್ರಹಣಂವಿದುಃ ॥

ಟೀ ॥ ಭಕ್ತಿಯುಕ್ತನಾದ ಪುರುಷಶ್ರೇಷ್ಠನು ಜಿತೇಂದ್ರಿಯನಾಗಿ ಕಾರ್ತೀಕಮಾಸದಲ್ಲಾದರೂ ಮಾರ್ಗಶೀರ್ಷದಲ್ಲಾದರೂ ಮಾಘಮಾಸದಲ್ಲಾದರೂ ಆಶ್ವಯುಜದಲ್ಲಾದರೂ ವೈಶಾಖದಲ್ಲಾದರೂಶ್ರಾವಣಮಾಸದಲ್ಲಾದರೂ ಈ ಮಾಸಗಳಲ್ಲಿಯೇ ಭಸ್ಮಸಂಗ್ರಹವಂಮಾಡಬೇಕು.

ಮೂ ॥ ಭುಕ್ತಿಮುಕ್ತಿದಮಾಗ್ನೆಯಂಸ್ನಾನಂಶುದ್ಧಭಸ್ಮನಾ ।
ಸ್ನಾನಂಚತುರ್ವಿಧಂತತ್ರಭವೇತ್ಕಲ್ಪಾದಿಭೇದತಃ ॥

ಟೀ ॥ ಅತ್ಯಂತ ಪರಿಶುದ್ಧವಾದ ಭಸ್ಮದಿಂ ಮಾಡುವ ಸ್ನಾನವೇ ಆಗ್ನೇಯಸ್ನಾನವೆನಿಸುವದು. ಆ ಆಗ್ನೇಯಸ್ನಾನವು ಭುಕ್ತಿಮುಕ್ತಿಪ್ರದಾಯಕವು. ಆ ಸ್ನಾನವು ಕಲ್ಪಾದಿಭೇದಗಳಿಂ ನಾಲ್ಕುಪ್ರಕಾರವೆಂದು ಹೇಳಲ್ಪಡುತ್ತಿಹುದು.

ಮೂ ॥ ಕಲ್ಪಂಚೈವಾನುಕಲ್ಪಂಚಉಪಕಲ್ಪಮಕಲ್ಪಕಂ ।
ತೇಷ್ವಾದ್ಯತಮಮುತ್ಕೃಷ್ಟಂಪೂರ್ವಾಭಾವೇಭವೇತ್ಪರಂ ॥

ಟೀ ॥ ಆ ಭೇದಗಳು ಯಾವುವೆನೆ;—ಕಲ್ಪವು ಅನುಕಲ್ಪವು ಉಪಕಲ್ಪವು ಅಕಲ್ಪವು ಎಂದು ಈ ನಾಲ್ಕರಲ್ಲಿ ಮೊದಲುಕಲ್ಪವು ಉತ್ತಮವು ಪೂರ್ವಪೂರ್ವ ಕಲ್ಪವು ಸಂಭವಿಸದೆ ಇದ್ದ ಪಕ್ಷದಲ್ಲಿ ಉತ್ತರೋತ್ತರವು ಶ್ರೇಷ್ಠವು.

ಮೂ ॥ ಕಪಿಲಾಮಗ್ನಿವರ್ಣಂವಾಸ್ವರ್ಣವರ್ಣಮಥಾಪಿವಾ ।
ಪೂರ್ವಸ್ಮಿನ್ದಿವಸೇಬಧ್ವಾಕೋಮಲಾಂಶ್ಚತೃಣಾಂಕುರಾನ್ ॥

ಟೀ ॥ ಆ ಭಸ್ಮಸಂಗ್ರಹಣಪ್ರಕಾರವು ಹ್ಯಾಗೆನೆ,—ಕಪಿಲವರ್ಣದ ಗೋವನ್ನಾದರೂ ಅಗ್ನಿವರ್ಣದ ಗೋವನ್ನಾದರೂ ಸ್ವರ್ಣವರ್ಣದ ಗೋವನ್ನಾದರೂ ಪೂರ್ವದಿವಸದಲ್ಲಿ ಪರಿಶುದ್ಧವಾದ ಪ್ರದೇಶಗಳಲ್ಲಿ ಕಟ್ಟಿ, ಕೋಮಲವಾದ ತೃಣಾಂಕುರಗಳಂ ತಂದು ಆ ಗೋವಿಗೆ ನಮಸ್ಕಾರವಂಮಾಡಿ ಸ್ತೋತ್ರವಂಗೈದು ಆ ತೃಣಾಂಕುರಗಳಂ ಗ್ರಾಸಮುಷ್ಟಿಗಳಂ ಕಟ್ಟಿ ಆ ಧೇನುವಿಗೆ ಸಮರ್ಪಿಸಬೇಕು.

ಮೂ ॥ ದತ್ವಾಸ್ತುತ್ವಾಪ್ರಣಮ್ಯಾಥಗ್ರಾಸಮುಷ್ಟಿಂಪ್ರದಾಪಯೇತ್ ।
ಅಗ್ನಿಕುಂಡಸಮುದ್ಭೂತೇಸರ್ವದೇವಮಯೇಶುಭೇ ॥
ಸಂಸಾರಾರ್ಣವಮಗ್ನಂಮಾಂಗೌರ್ಮಾತಸ್ತ್ರಾತುಮರ್ಹಸಿ
ಯದೇನಃಕರ್ಮಣಾವಾಚಾಮನಸಾಪಾಕೃತಂಮಯಾ ॥
ತತ್ಸರ್ವಂಕ್ಷೀಯತಾಮಾಶುಪ್ರದಕ್ಷಿಣಕೃತೇನವೈ ।
ಗಾವೋಮೇಮಾತರಸ್ಸರ್ವಾಃಪಿತರಶ್ಚಾಪಿಗೋವೃಷಾಃ ॥
ಗ್ರಾಸಮುಷ್ಟಿಂಮಯಾದತ್ತಾಂಪ್ರತಿಗೃಹ್ಣಂತುಮಾತರಃ ।

ಟೀ ॥ ಬಳಿಕ ಆ ಧೇನುವನ್ನು ಎಲೈ ಅಗ್ನಿಕುಂಡದಿಂದುದ್ಭವಿಸಿ ಸರ್ವದೇವಸ್ವರೂಪವಾಗಿರುವ ಧೇನುವೇ ಈ ಅಪಾರವಾದ ಸಂಸಾರಸಾಗರ

ದಲ್ಲಿ ಮುಳುಗಿರುವವನನ್ನುದ್ಧರಿಸಿ; ಪರಿಪಾಲಿಸುವಳಾಗು. ಎಲೈ ತಾಯೇ!
ಮನಸ್ಸಿನಿಂದಲೂ ಕರ್ಮದಿಂದಲೂ ವಾಕ್ಕಿನಿಂದಲೂ ನಾನುಮಾಡಿದ ಸಮಸ್ತ
ಪಾಪಂಗಳನ್ನು ಜಾಗ್ರತೆಯಿಂ ಪರಿಹರಿಸಿ ನನ್ನಂ ಪಾಲಿಸುವಳಾಗು ಎಂದು
ಪ್ರಾರ್ಥಿಸಿ ಆ ಗೋವಿಗೆ ಪ್ರದಕ್ಷಿಣ ನಮಸ್ಕಾರಂಗಳಂಮಾಡಬೇಕು. ಪು
ತ್ರಂ ನನಿಗೆ ಗೋವುಗಳೇ ತಾಯಿಗಳು ವೃಷಭಗಳೇ ತಂದೆಗಳು ಆದ್ದ
ರಿಂದ ಎಲೈ ತಾಯೇ ನನ್ನಿಂದ ಸಮರ್ಪಿಸಲ್ಪಟ್ಟ ತೃಣಾಂಕುರಮಯವಾದ
ಈ ಗ್ರಾಸಮುಷ್ಟಿಯಂ ಪರಿಗ್ರಹಿಸಿ ನನ್ನಂ ಸಲಹುವಳಾಗು.

ಮೂ ॥ ಇತ್ಯಾದಿಭಿರ್ಮಂತ್ರವರ್ಗೈರ್ಗ್ರಾಸಂದತ್ವಾಪುನಃಪುನಃ ।
ಧೂಪೈರ್ದೀಪೈಸ್ಸಮಭ್ಯರ್ಚ್ಯರಾತ್ರೌಸಂಪೂಜ್ಯಭಕ್ತಿತಃ ॥

ಟೀ ॥ ಎಂದು ಇತ್ಯಾದಿ ಮಂತ್ರಗಳಿಂದ ಉಪಚಾರಂಗಳಂ ಪೇಳಿ
ಭಾರಿಭಾರಿಗೂ ಗ್ರಾಸಂಗಳಂ ಕೊಟ್ಟು ಧೂಪ ದೀಪವೊದಲಾದ ಸಮ
ಸ್ತ ಉಪಚಾರಂಗಳಿಂದ ರಾತ್ರಿ ವೇಳೆಯಲ್ಲಿ ಪೂಜಿಸಬೇಕು.

ಮೂ ॥ ಅಶ್ವಮೇಧಸಹಸ್ರಸ್ಯವಾಜಪೇಯಶತಸ್ಯಚ ।
ತೃಣಮುಷ್ಟಿಪ್ರದಾನೇನಫಲಮೇತದುದೀರಿತಂ ॥

ಟೀ ॥ ಈ ಗ್ರಾಸ ದಾನದಿಂ ಫಲವು ಉಂಟೇಯೆಂದರೆ,-ಗೋವು
ಗಳಿಗೆ ಒಂದು ತೃಣಮುಷ್ಟಿಯನ್ನಾದರೂ ಸಮರ್ಪಿಸಿದವನಿಗೆ ಸಾವಿರ
ಅಶ್ವಮೇಧಂಗಳಂ ಮಾಡಿದ ಫಲವು. ನೂರು ವಾಜಪೇಯಂಗಳಂ ಮಾ
ಡಿದ ಫಲವು ಸಹ ಉಂಟಾಗುವದೆಂದು ಸಮಸ್ತ ಶಾಸ್ತ್ರಂಗಳಲ್ಲಿ ಪೇಳಿ
ರುವದು.

ಮೂ ॥ ಏತತ್ಫಲಂಪರಗವಾಂತದರ್ಧಂಸ್ವಗವಾಂಸ್ಮೃತಂ ॥

ಟೀ ॥ ಈ ಫಲವು ಪರರ ಗೋವುಗಳಂ ಪೂಜಿಸಿದವರಿಗೆ ಸಂಪೂ
ರ್ಣವಾಗಿ ಲಭಿಸುವದು. ತಮ್ಮಮನೆಯಲ್ಲಿರುವ ಗೋವುಗಳಂ ಪೂಜಿಸಿ
ದವರಿಗೆ ತದರ್ಧ ಫಲವು ಲಭಿಸುವದು.

ಮೂ ॥ ಕೃತ್ವಾಜಾಗರಣಂರಾತ್ರೌಗೋಮಯಗ್ರಹಣಾಯಚ ।
ಭೂಮಿಸಂಸ್ಪರ್ಶನಾತ್ಪೂರ್ವಂಗೋಮಯಂಧಾರಯೇದ್ಬುಧಃ ॥

ಟೀ ॥ ಈ ಪ್ರಕಾರವಾಗಿ ನೇಮದಿಂ ಗೋಪೂಜೆಯಂಮಾಡಿ ಪೂ
ರ್ವದಿನ ರಾತ್ರಿಯೋಳ್ ಗೋಮಯವಂ ಗ್ರಹಿಸುವದಕ್ಕೋಸ್ಕರ ನಿಯ
ತನಾಗಿ ಜಾಗರಣವಂಮಾಡುತ್ತಲಿದ್ದು ಭೂಮಿಯಲ್ಲಿ ಬೀಳುವದಕ್ಕೆ ಮುಂ
ಚಿತವಾಗಿಯೇ ಗೋಮಯವಂ ಸಂಗ್ರಹಿಸಬೇಕು.

ಮೂ ॥ ರವಿವಾರೇಂದುವಾರೇವಾಶ್ರೋಣಾರ್ದ್ರಾದಿವಸೇಪಿವಾ ।
ಮಂದವಾರೇತುರೋಹಿಣ್ಯಾಂಧಾರಯೇದ್ಭಸ್ಮಸಂಚಯಂ ॥
ಗೃಹೀತ್ವಾಗೋಮಯಂಶೋಧ್ಯಶುಷ್ಕಂಕೃತ್ವಾರ್ಕಗೋಗಣೇ ।
ಅಗ್ನಿಂತತ್ರಪ್ರತಿಷ್ಠಾಪ್ಯಹುತ್ವಾಲಿಪ್ತೇಗೋಮಯಾಂಭಸಾ ॥

ಟೀ ॥ ಆ ಬಳಿಕ ರವಿವಾರದಲ್ಲಾದರೂ ಇಂದುವಾರನಲ್ಲಾದರೂ ಶನಿವಾರದಲ್ಲಾದರೂ ಶ್ರವಣ, ಆರ್ದ್ರಾ, ರೋಹಿಣೀ ನಕ್ಷತ್ರಂಗಳಿಂದ ಕೂಡಿದ ದಿವಸದಲ್ಲಾದರೂ ಆ ಗೋಮಯವಂ ತೆಗದುಕೊಂಡು ಚೆನ್ನಾಗಿ ಪರಿಶೋಧನೆಯಂ ಮಾಡಿ ಆ ಗೋಮಯವಂ ಉಂಡೆಗಳಂ ಕಟ್ಟಿ ಸೂರ್ಯ ಕಿರಣಗಳ ಕಾಕದಲ್ಲಿಯೇ ಆ ಉಂಡೆಗಳಂ ಒಣಗಿಸಿ ಬಳಿಕ ಪರಿಶುದ್ಧವಾದ ಸ್ಥಳದಲ್ಲಿ ಗೋಮಯೋದಕದಿಂ ಸಾರಿಸಿ ಅಲ್ಲಿ ಆ ಗೋಮಯ ಶುಷ್ಕಂಗಳನ್ನಿರಿಸಿ ಅದಕ್ಕೆ ಅಗ್ನಿಪ್ರತಿಷ್ಠೆಯಂ ಮಾಡಬೇಕು.

ಮೂ ॥ ತತ್ರಾವಾಹ್ಯಶಿವಂಭಕ್ತ್ಯಾತತಸ್ಸಂಪೂಜ್ಯಮಾನವಃ ।
ರುದ್ರಸೂಕ್ತೇನಹೋಮಂಚಕುರ್ಯಾದ್ಭಕ್ತಿವಿನಮ್ರಧೀಃ ॥

ಟೀ ॥ ಆ ಬಳಿಕ ಭಕ್ತಿಯುಕ್ತನಾಗಿ ಆ ಯಜ್ಞೇಶ್ವರನಲ್ಲಿ ಸಾಕ್ಷಾತ್ಪರಮೇಶ್ವರನಂ ಆವಾಹನೆಯಂ ಮಾಡಿ ಷೋಡಶೋಪಚಾರಂಗಳಿಂ ಪೂಜಿಸಿ ರುದ್ರಸೂಕ್ತದಿಂದ ಹೋಮಮಂ ಮಾಡಬೇಕು.

ಮೂ ॥ ತತ್ರಗೋಮಯಪಿಂಡಂಯದ್ದಗ್ಧ್ವಸಂಶೋಷ್ಯಪಾಥಸಾ ।
ಆಲೋಡ್ಯಪಂಚಗವ್ಯೈಶ್ಚಪಂಚವಕ್ತ್ರೋದ್ಭವೇನಚ ।
ಶ್ರೀಸೂಕ್ತೇನಸಮಾಮಂತ್ರ್ಯರುದ್ರಸೂಕ್ತಂಪ್ರಜಪ್ಯಚ ।
ಶೋಷಯೇತ್ಸೂರ್ಯಸೂಕ್ತೇನದುರ್ಗಾಸೂಕ್ತೇನಪೂಜಯೇತ್ ॥
ಶಕ್ತಿಪಂಚಾಕ್ಷರೀವಿದ್ಯಾಮಾವಾಹ್ಯಾಭ್ಯರ್ಚ್ಯವಾಗ್ಯತಃ ।
ಪ್ರಾಣಪ್ರತಿಷ್ಠಾಂಕುರ್ವೀತಶೈವಾಗಮವಿಧಾನತಃ ॥

ಟೀ ॥ ಆಬಳಿಕ ಹೋಮದಿಂದ ದಗ್ಧವಾದ ಆ ಗೋಮಯ ಪಿಂಡಂಗಳಂ ತೆಗದುಕೊಂಡು ಚೆನ್ನಾಗಿ ಅರಿಸಿ ಪುನಃ ನೀರಿನಲ್ಲಿ ಕಲಸಿ ಪಂಚಗವ್ಯಂಗಳಿಂದ ಸಂಸ್ಕಾರವಂ ಮಾಡಿ ಶ್ರೀ ಸೂಕ್ತದಿಂದ ಉಂಡೆಗಳಂ ಕಟ್ಟಿ ರುದ್ರಸೂಕ್ತವಂ ಜಪಿಸಿ ಸೂರ್ಯಸೂಕ್ತದಿಂ ಒಣಗಿಸಿ ದುರ್ಗಾಸೂಕ್ತದಿಂದದಂ ಪೂಜಿಸಿ ಅದರಲ್ಲಿ ಶಕ್ತಿ ಪಂಚಾಕ್ಷರೀ ವಿದ್ಯವನ್ನಾವಾಹಿಸಿ ವಾಙ್ನಿಯಮದಿಂ ಕೂಡಿ ಪೂಜೆಯಂ ಮಾಡಿ ಶೈವಾಗಮ ವಿಧಾನದಿಂದಾ ಭಸ್ಮಕ್ಕೆ ಪ್ರಾಣಪ್ರತಿಷ್ಠೆಯಂ ಮಾಡಬೇಕು.

ಮೂ ॥ ಏವಂಸಮ್ಯಗ್ವಿಧಾನೇನಭಸ್ಮಸಂಗ್ರಾಹ್ಯಮುತ್ತಮಂ ।
ತದ್ಭಸ್ಮಧಾರಯೇದ್ಭಕ್ತ್ಯಾಮಹಾಪಾತಕಶಾಂತ್ರಯೆ ।
ಕಲ್ಪಂತದ್ಭಸ್ಮವಿಜ್ಞೇಯಮನುಕಲ್ಪಮಥೋಚ್ಯತೆ ।

ಟೀ ॥ ಈಪ್ರಕಾರವಾಗಿ ಚೆನ್ನಾಗಿ ಯಥಾವಿಧಿಯಾಗಿ ಭಸ್ಮಸಂಗ್ರಹವಂಮಾಡಿ ಆ ಭಸ್ಮದಿಂಧಾರಣೆಯಂ ಮಾಡಿದರೆ ಸಮಸ್ತ ಪಾತಕಗಳು ಪರಿಹಾರವಂ‍ನೈದುವವು. ಈ ಪ್ರಕಾರವಾಗಿ ಮಾಡಿದ ಭಸ್ಮಸಂಗ್ರಹವು ಕಲ್ಪವೆಂದೆನಿಸಿಕೊಳ್ಳುವದು.

ಮೂ ॥ ವನೇಷುಗೋಮಯಂಯತ್ತುಚ್ಛುಷ್ಕಂಚೂರ್ಣೀಕೃತಂತಥಾ ।
ದಗ್ಧಂಚೈವಾನುಕಲ್ಪಾಖ್ಯಮಾಪಣಾದಿಗತಂತುಯತ್ ॥
ವಸ್ತ್ರೇಣೋತ್ತಾರಿತಂಭಸ್ಮಗೋಮೂತ್ರಾದ್ಯೈಬದ್ಧಪಿಂಡಿತಂ ।
ದಗ್ಧಂಪ್ರಾಗುಕ್ತವಿಧಿನಾಭವೇದ್ಭಸ್ಮೋಪಕಲ್ಪಕಂ ।

ಟೀ ॥ ಅರಣ್ಯಂಗಳಲ್ಲಿ ಒಣಗಿದ ಗೋಮಯಮಂಚೂರ್ಣವಂಮಾಡಿ ಪೂರ್ವೋಕ್ತ ವಿಧಾನದಿಂದಹಿಸಲ್ಪಟ್ಟ ಭಸ್ಮವೇ ಅನುಕಲ್ಪವೆನಿಸಿಕೊಂಬುದು. ಅಂಗಡಿ ಮೊದಲಾದ ಸ್ಥಾನಂಗಳಲ್ಲಿ ಇದ್ದ ಭಸ್ಮವಂ ವಸ್ತ್ರದಿಂ ಗಾಳಿಸಿ ಗೋಮೂತ್ರದಿಂ ಕಲಸಿ ಮುದ್ದೆಯಂಮಾಡಿ ಪ್ರಾಗುಕ್ತವಿಧಾನದಿಂದಹಿಸಿದರೆ ಆ ಭಸ್ಮವು ಉಪಕಲ್ಪವಹುದು.

ಮೂ ॥ ಅನ್ಯೈರಾಪಾದಿತಂಭಸ್ಮಹ್ಯಕಲ್ಪಮಿತಿಕಲ್ಪಿತಂ ॥

ಟೀ ॥ ಮಂತ್ರಜ್ಞರಲ್ಲದವರಿಂ ಸಂಪಾದಿಸಲ್ಪಟ್ಟಭಸ್ಮವು ಅಕಲ್ಪಕವೆನಿಸಿಕೊಂಬುದು.

ಮೂ ॥ ಸ್ನಾನೇಕಾಲೇಕರೌಪಾದೌಪ್ರಕ್ಷಾಳ್ಯವಿಮಲಾಂಭಸಾ ।
ವಾಮಹಸ್ತತಲೇಭಸ್ಮಕ್ಷಿಪ್ತ್ವಾಛಾದ್ಯಾನ್ಯಪಾಣಿನಾ ।
ಅಷ್ಟಕೃತ್ವಾತುಮೂಲೇನಮೌನೀಭಸ್ಮಾಭಿಮಂತ್ರ್ಯಚ ।
ಶಿರಈಶಾನಮಂತ್ರೇಣಪುರುಷೇಣಮುಖಂತಥಾ ॥
ಹೃತ್ಪ್ರದೇಶೇಮಘೋರೇಣವಾಮದೇವೇನಗುಹ್ಯಕಂ ।
ಪಾದೌಸದ್ಯೇನಸರ್ವಾಂಗಂಪ್ರಣವೇನೈವಸೇಚಯೇತ್ ॥

ಟೀ ॥ ಆಭಸ್ಮಸ್ನಾನಂ ಎಂತು ಮಾಡಲ್ತಕ್ಕುದೆನೆ ಸ್ನಾನಕಾಲದಲ್ಲಿ ದ್ಧೋದಕದಿಂಹಸ್ತಪಾದಂಗಳಂತೊಳದುಕೊಂಡುಬಂದುಸುಸ್ಥಾನದಲ್ಲಿಕುಳ್ಳಿರ್ದ್ದುವಾಮಹಸ್ತದಲ್ಲಿಭಸ್ಮವನ್ನಿಟ್ಟುಕೊಂಡು ದಕ್ಷಿಣಹಸ್ತದಿಂಮುಚ್ಚಿಬಲದತೊಡೆಯ ಮೇಲಿಟ್ಟುಕೊಂಡು ಮೌನಿಯಾಗಿ ಮೂಲಮಂತ್ರದಿಂದೆಂ

ಉಚ್ಚಾರಿ ಅಭಿಮಂತ್ರಿಸಿ ಈಶಾನಮಂತ್ರದಿಂ ಶಿರಸ್ಸಂ ತತ್ಪುರುಷ ಮಂತ್ರದಿಂ ಮುಖವಂ ಅಘೋರಮಂತ್ರದಿಂ ಹೃತ್ಪ್ರದೇಶವಂ ವಾಮದೇವಮಂತ್ರದಿಂ ಗುಹ್ಯವಂ ಸದ್ಯೋಜಾತಮಂತ್ರದಿಂ ಪಾದಂಗಳಂ ಪ್ರಣವಸಹಿತಮಾಗಿ ಪ್ರೋಕ್ಷಿಸಿ ಮರಳಿ ಕೇವಲ ಪ್ರಣವಮಂತ್ರದಿಂ ಸರ್ವಾಂಗವನ್ನು ಪ್ರೋಕ್ಷಿಸುವದು.

ಅವ. ಬಳಿಕ ಭಸ್ಮಸ್ನಾನಂ ಜಲಸ್ನಾನದತ್ತಣಿಂ ಉತ್ಕೃಷ್ಟವೆಂಬಲ್ಲಿ ಹೇಳುವೆನು.

ಮೂ ॥ ಭಸ್ಮನಾವಿಹಿತಂಸ್ನಾನಮಿದಮಾಗ್ನೇಯಮುತ್ತಮಂ ।
ಸ್ನಾನೆಷುವಾರುಣಾದ್ಯೆಷುಮುಖ್ಯಮೆತನ್ಮಲಾಪಹಂ ॥

ಟೀ ॥ ಜಲಸ್ನಾನ ವಾಯುವ್ಯಸ್ನಾನಂಗಳಲ್ಲಿ ಭಸ್ಮದಿಂ ಮಾಡಲ್ಪಟ್ಟ ಸ್ನಾನವಾಗ್ನೇಯವಾದ ಕಾರಣದಿಂ ಶ್ರೇಷ್ಠವು. ಅಗ್ನಿಯು ಸರ್ವಭಕ್ಷಕವಾದಕಾರಣದಿಂ ಸಕಲ ಮಲಂಗಳಂ ಪರಿಹರಿಸುವಂಥಾದ್ದು.

ಮೂ ॥ ಬ್ರಹ್ಮಾದ್ಯಾವಿಬುಧಾಸ್ಸರ್ವೆಮುನಯೊನಾರದಾದಯಃ ।
ಯೊಗಿನಸ್ಸನಕಾದ್ಯಾಶ್ಚಬಾಣಾದ್ಯಾದಾನವಾಅಪಿ ॥
ಭಸ್ಮಸ್ನಾನಯುತಾಸ್ಸರ್ವೆಶಿವಭಕ್ತಿಪರಾಯಣಾಃ ।
ನಿರ್ಮುಕ್ತದೋಷಕಲಿಲಾನಿತ್ಯಶುದ್ಧಾಭವಂತಿಹಿ ॥

ಟೀ ॥ ಬಳಿಕ ಭಸ್ಮಸ್ನಾನವು ಯಾರಿಂದಂಗೀಕರಿಸಲ್ಪಟ್ಟತೆಂದರೆ;-ಬ್ರಹ್ಮಾದಿ ಸಕಲದೇವತೆಗಳು ನಾರದಾದಿ ಮುನಿಗಳು ಸನಕಾದಿ ಯೋಗಿಗಳು ಬಾಣಾದಿದಾನವರು ಸಹ ಸಕಲರು ಭಸ್ಮಸ್ನಾನಯುಕ್ತರಾಗಿ ಶಿವಭಕ್ತಿಪರಾಯಣರಾಗಿ ನಿರ್ದೋಷಿಗಳಾಗಿ ನಿತ್ಯಶುದ್ಧರಾಗಿರುವರು.

ಅವ. ಬಳಿಕ ಭಸ್ಮೋದ್ಧೂಳನ ತ್ರಿಪುಂಡ್ರ ಧಾರಣಮಾವಶ್ಯಕವಾಗಿ ಮಾಡತಕ್ಕದ್ದು. ತದ್ವಿನಾ ಶಿವಪೂಜೆಯಂ ಮಾಡುವದಕ್ಕಾಗದು ಎಂಬಲ್ಲಿ ಹೇಳುತ್ತೇನೆ.

ಮೂ ॥ ವಿನಾಭಸ್ಮತ್ರಿಪುಂಡ್ರೇಣವಿನಾರುದ್ರಾಕ್ಷಧಾರಣಂ ।
ಪೂಜಿತೋಪಿಮಹಾದೇವೋನತಸ್ಯಫಲದೋಭವೇತ್ ॥

ಟೀ ॥ ಭಸ್ಮತ್ರಿಪುಂಡ್ರವಂ ಧರಿಸದೆ ರುದ್ರಾಕ್ಷಧಾರಣೆಯನ್ನು ಮಾಡದೆ ಪರಮೇಶ್ವರನಂ ಪೂಜಿಸಿದರೆ ಆ ಶಿವನು ಆ ಪೂಜಕನಿಗೆ ತತ್ಪೂಜಾಫಲವಂ ಕೊಡುವದಿಲ್ಲ.

ಮೂ ॥ ವಿಭೂತಿಧಾರಣಂತ್ಯಕ್ತ್ವಾಯಶ್ಶಿವಂಪೂಜಯಿಷ್ಯತಿ ।
ಸದುರ್ಭಾಗ್ಯಶ್ಶಿವದ್ವೇಷೀತಸ್ಯಸರ್ವಂನಿರರ್ಥಕಂ ॥

ಟೀ ॥ ಮತ್ತಂ ಯಾವನು ವಿಭೂತಿಯಂ ಧರಿಸದೆ ಶಿವನಂ ಪೂಜಿಸುವನೋ ಆ ಮನುಷ್ಯನು ಶಿವದ್ವೇಷಿಯೆನಿಸಿಕೊಳ್ಳುವನು. ಮತ್ತಮವನೇ ಭಾಗ್ಯಹೀನನು ಅವನು ಮಾಡಿದ ಕರ್ಮವೆಲ್ಲವು ವ್ಯರ್ಥವಾಗುವದು.

ಮೂ ॥ ವಿನಾರುದ್ರಾಕ್ಷಭಸ್ಮಭ್ಯಾಂಪೂಜಯೆದ್ಯಸ್ಸದಾಶಿವಂ ।
ಸಯಾತಿನರಕಂಘೋರಂಯಾವದಿಂದ್ರಾಶ್ಚತುರ್ದಶ ॥

ಟೀ ॥ ಮತ್ತಂ ಭಸ್ಮರುದ್ರಾಕ್ಷಗಳಿಲ್ಲದೆ ಯಾವನು ಶಿವಪೂಜೆಯಂ ಮಾಡುವನೋ ಅವನುಹದಿನಾಲ್ಕು ಇಂದ್ರಪಟ್ಟಗಳು ಆಗುವತನಕ ಘೋರವಾದ ರೌರವ ನರಕದಲ್ಲಿರತಕ್ಕವನು.

ಮೂ ॥ ಯೆಭಸ್ಮಧಾರಣಂತ್ಯಕ್ತ್ವಾಕರ್ಮಕುರ್ವಂತಿಮಾನವಾಃ ।
ತೇಷಾಂನಾಸ್ತಿವಿನಿರ್ಮೋಕ್ಷಸ್ಸಂಸಾರಾಜ್ಜನ್ಮಕೋಟಿಭಿಃ ॥

ಟೀ ॥ ಯಾವಜನರು ಭಸ್ಮರುದ್ರಾಕ್ಷಧಾರಣೆಯಿಲ್ಲದೆ ಕರ್ಮಗಳಂ ಮಾಡುವರೋ ಅವರಿಗೆ ಕೋಟಿಜನ್ಮಗಳಾದಾಗ್ಯೂ ಸಂಸಾರದಿಂ ಬಿಡುಗಡೆಯುಂಟಾಗಲಾರದು. ಸಕಲ ಕರ್ಮಗಳಲ್ಲಿಯೂ ಭಸ್ಮರುದ್ರಾಕ್ಷಧಾರಣೆಯಾವಶ್ಯಕವೆಂಬುದು ತಾತ್ಪರ್ಯಂ.

ಮೂ ॥ ಮಹಾಪಾತಕಯುಕ್ತಾನಾಂಪೂರ್ವಜನ್ಮಸುಸರ್ವತಃ ।
ತ್ರಿಪುಂಡ್ರೋದ್ಧೂಳನೆದ್ವೇಷೋಜಾಯತೆಸುದೃಢಂಬುಧಃ ॥

ಟೀ॥ ಮತ್ತಂ ಪೂರ್ವಜನ್ಮದಲ್ಲಿ ಯಾರು ಮಹಾಪಾತಕಂಗಳಂ ಮಾಡಿರುವರೋ ಅವರಿಗೆ ಭಸ್ಮತ್ರಿಪುಂಡ್ರೋದ್ಧೂಳನದಲ್ಲಿ ದ್ವೇಷವುಂಟಾಗುವದೆಂದು ದೃಢವಾಗಿ ತಿಳಿಯತಕ್ಕುದು.

ಅವ. ಹಾಗಾಯಿತೆನೆ ಭಸ್ಮರುದ್ರಾಕ್ಷಂಗಳಂ ಧರಿಸದೆ ಶಿವಪೂಜೆಯು ಮಾತ್ರವೆ ಮಾಡಕೂಡದೋ ಅಲ್ಲವೆ ಸಮಸ್ತ ಕರ್ಮಂಗಳಲ್ಲಿಯೂ ಹೀಗೆಯೆ ನಿಯಮವೊ ಎಂದರೆ.

ಮೂ ॥ ಆಯುಷ್ಕಾಮೋಥವಾರಾಜನ್ಭೂತಿಕಾಮೋಥವಾನರಃ ।
ನಿತ್ಯಂವೈಧಾರಯೆದ್ಭಸ್ಮಮೋಕ್ಷಕಾಮೀಚವೈದ್ವಿಜಃ ॥

ಟೀ ॥ ಮತ್ತಂ ಎಲೈರಾಜನೆ ಆಯುಷ್ಕಾಮಿಯಾದವನು ಐಶ್ವರ್ಯಕಾಮಿಯು ಮೋಕ್ಷಾಪೇಕ್ಷೆಯುಳ್ಳವನು ಸಹ ನಿತ್ಯದಲ್ಲಿಯೂ ಭಸ್ಮಧಾರಣೆಯಂ ಮಾಡಬೇಕು. ಎಂದು ಮಹಾಭಾರತವಚನವು; ಈ ವಿಷಯದಲ್ಲಿ ಅನೇಕವಚನಗಳಿರುವದ್ದರಿಂದ ಇಲ್ಲಿ ಗ್ರಂಥ ವಿಸ್ತಾರವಾಗುವ ಭೀತಿಯಿಂ

ಬರೆಯಲ್ಪಡುವದಿಲ್ಲವು. ಎನ್ನಿಂದುಕ್ತವಾದ ಸರ್ವಾಗಮಸಾರ ಸಂಗ್ರಹವೆಂಬ ಗ್ರಂಥದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟದೆ.

ಮೂ ॥ ಅಗ್ನಿರಿತ್ಯಾಭಿರ್ಮಂತ್ರೈಶ್ಶುದ್ಧಂಭಸ್ಮಾಭಿಮಂತ್ರಿತಂ ।
ಶಿವಮಂತ್ರೇಣವಾಧಾರ್ಯಂಮಂತ್ರೇಣಾಷ್ಟಾಕ್ಷರೇಣವಾ ॥
ಗಾಯತ್ರ್ಯಾವಾಪಿದೇವರ್ಷೇಮಂತ್ರೇಣಪ್ರಣವೇನವಾ ।

ಟೀ ॥ ಅನಂತರಂ ಯಾವ ಮಂತ್ರದಿಂ ಧರಿಸಬೇಕೆಂದರೆ;—ಅಗ್ನಿರಿತ್ಯಾದಿ ಮಂತ್ರಂಗಳಿಂದಭಿಮಂತ್ರಿತವಾದ ಶುದ್ಧವಾದ ಭಸ್ಮದಿಂ ಶಿವಮಂತ್ರದಿಂದಲಾದರೂ ಶಿವಾಷ್ಟಾಕ್ಷರ ಮಂತ್ರದಿಂದಲಾದರೂ ಗಾಯತ್ರೀಮಂತ್ರದಿಂದಲಾದರೂ ಪ್ರಣವ ಮಂತ್ರದಿಂದಲಾದರೂ ಉದ್ಧೂಳನವಂ ತ್ರಿಪುಂಡ್ರಧಾರಣೆಯುಂ ಮಾಡಬೇಕು.

ಅವ. (ವಿಚಾರಂ) ಹಾಗಾದರೆ ಭಸ್ಮೋದ್ಧೂಳನ ತ್ರಿಪುಂಡ್ರಧಾರಣಗಳೆರಡೂ ಸಮುಚ್ಚಯ ನ್ಯಾಯದಿಂದವಶ್ಯವಾಗಿ ಮಾಡತಕ್ಕವೋ ಹಾಗಲ್ಲದೆ ಪರ್ಯಾಯದಿಂ ಯಥಾಶಕ್ತಿಯಾಗಿ ಯಾವದಾದರೂ ಒಂದು ಮಾಡತಕ್ಕದ್ದೋ ಅಲ್ಲದೆ ಪ್ರಧಾನೋಪಸರ್ಜನನ್ಯಾಯದಿಂದೊಂದಕ್ಕೆ ಪ್ರಾಧಾನ್ಯವೋ ಎಂದರೆ “ ಉದ್ಧೂಳನಂತ್ರಿಪುಂಡ್ರಂಚಮನಸಾಪಿನಲಂಘಯೇತ್ ” ಎಂಬ ಕೇದಾರಖಂಡವಚನದಿಂ ಉದ್ಧೂಳದವನ್ನೂ ತ್ರಿಪುಂಡ್ರವನ್ನೂ ಮನಸ್ಸಿನಿಂದಲೂ ಕೂಡ ಮೀರಲಾಗದು ಎಂದು ಸಮುಚ್ಚಯ ವಿಧಾನವಂ ಮಾಡಿರುವದ್ದರಿಂದ ಸಮ ಪ್ರಾಧಾನ್ಯದಿಂ ಸಮುಚ್ಚಯವಾಗಿ ಎರಡೂ ಅವಶ್ಯಕವು. “ ಉದ್ಧೂಳನೇಪ್ಯಶಕ್ತಶ್ಚೇತ್ ” ಎಂಬವಚನದಿಂ ಅಶಕ್ತನಾದವನಿಗೆ ತ್ರಿಪುಂಡ್ರಮಾತ್ರವೆಂದು ಶಕ್ತನಿಗೆ ಉದ್ಧೂಳನತ್ರಿಪುಂಡ್ರವೆರಡೂ ಆವಶ್ಯಕವೆಂದು ಬೃಹಜ್ಜಾಬಾಲರ ಆಶಯವು “ ಯದ್ಯಪಿಸರ್ವಾಂಗೋದ್ಧೂಳನಂಚಾಪಿನಸಮಾನಂತ್ರಿಪುಂಡ್ರಕೈಃ ” ಎಂಬ ವಾಯುವೀಯಸಂಹಿತಾವಚನ ಬಲದಿಂ ತ್ರಿಪುಂಡ್ರಕ್ಕೆ ಪ್ರಾಧಾನ್ಯವು ತೋರುವದು. ಆದಾಗ್ಯೂ ಪೂರ್ವೋಕ್ತ ಕೇದಾರ ಖಂಡಸ್ಥ ವಚನದಿಂದಲೂ ತಸ್ಮಾದುದ್ಧೂಳನಂಪೂರ್ವಂತ್ರಿಪುಂಡ್ರಂಧಾರಯೇತ್ಪರಂ ಎಂಬ ವಿದ್ಯೇಶ್ವರ ಸಂಹಿತಾವಚನದಿಂದಲೂ ಆ ವಾಯುವೀಯ ಸಂಹಿತಾವಚನಕ್ಕೆ ತ್ರಿಪುಂಡ್ರ ಪ್ರಾಶಸ್ತ್ಯದಲ್ಲಿಯೇ ತಾತ್ಪರ್ಯವೆಂದು ತಿಳಿಯತಕ್ಕದ್ದು.

ಮೂ ॥ ಭಸ್ಮನೋದ್ಧೂಳನಂಕಾರ್ಯಂತ್ರಿಪುಂಡ್ರಂಚಾಪಿಭಕ್ತಿತಃ ।
ಪೂಜಾಕಾಲೇಹಿಸಜಲಂ ಶುದ್ಧ್ಯರ್ಥಂನಿರ್ಜಲಂಭವೇತ್ ॥

ಟೀ ॥ ಮತ್ತಂ ಭಸ್ಮಧಾರಣವು ಪೂಜಾರ್ಥವೆಂದು ಶುದ್ಧ್ಯರ್ಥವೆಂದು ಎರಡು ವಿಧವುಅದರಲ್ಲಿ ಪೂಜಾರ್ಥವಾಗಿಸಜಲಭಸ್ಮದಿಂದಲೇ ಧಾರಣವಂ ಮಾಡಿಕೊಳ್ಳಬೇಕು. ಶುದ್ಧ್ಯರ್ಥವಾಗಿ ಕೇವಲ ಭಸ್ಮದಿಂದಲೇಧಾರಣವು.

(ವಿಚಾರಂ) ವಿಷಯದಲ್ಲಿ ಕೆಲವರು "ಮಧ್ಯಾಹ್ನಾತ್ಪ್ರಗ್ಜಲೈರ್ಯುಕ್ತಂತತೋಯಂತದನುವರ್ಜಯೇತ್" ಎಂಬುದರಿಂ ಮಧ್ಯಾಹ್ನಾತ್ಪೂರ್ವದಲ್ಲಿ ಸಜಲ ಭಸ್ಮಧಾರಣವಂ ಮಾಡಬೇಕು. ಮಧ್ಯಾಹ್ನಾದ ನಂತರಂ ಜಲಮಿಶ್ರಂ ಕೂಡದು. ಎಂದು ವ್ಯವಸ್ಥೆಯಂ ಪೇಳುವರು. ಆದರೆ; ದಿವಾವಾಯದಿವಾರಾತ್ರೌನಾರೀವಾಥನರೋಥವಾ । ಪೂಜಾರ್ಥಂಸಜಲಂಭಸ್ಮಶುದ್ಧ್ಯರ್ಥಂಕೇವಲಂಭವೇತ್ ॥ ಎಂಬುದರಿಂಹಗಲಲ್ಲಾದರೂ ರಾತ್ರಿಯಲ್ಲಾದರೂ ಸರಿ ಸ್ತ್ರೀಯಾಗಲಿ ಪುರುಷನಾಗಲಿ ಪೂಜಾರ್ಥವಾಗಿ ಸಜಲಭಸ್ಮಧಾರಣವಂ ಮಾಡಬೇಕುಶುದ್ಧ್ಯರ್ಥವಾಗಿ ಕೇವಲ ಭಸ್ಮವನ್ನೇ ಧರಿಸಬೇಕು ಎಂದು ಮಧ್ಯಾಹ್ನಾತ್ಪರದಲ್ಲಿಯೂ ಸಜಲ ಭಸ್ಮಕ್ಕೆ ವಿಧಾನವಂ ಮಾಡಿರುವದ್ದರಿಂದ ಮಧ್ಯಾಹ್ನಾದನಂತರಂ ಜಲಮಿಶ್ರವಂ ಮಾಡಕೂಡದೆಂಬ ನಿಷೇಧವು ಸರ್ವಕಾಲಂಭವೆತ್ತಿನ್ನ್ರೀಣಾಂಯತೀನಾಂಜಲವರ್ಜಿತಂ । ವನಸ್ಥವ್ರತಿಕನ್ಯಾನಾಂದೀಕ್ಷಾಹೀನನೃಣಾಂತಥಾ ॥ ಮಧ್ಯಾಹ್ನಾತ್ಪ್ರಾಗ್ಜಲೈರ್ಯುಕ್ತಂ ಪರತೋಜಲವರ್ಜಿತಂ ಎಂದರೆ; ಗೃಹಸ್ಥರು ಸ್ತ್ರೀಯರುಗಳು ತ್ರಿಸಂಧ್ಯೆಗಳಲ್ಲಿಯೂ ಜಲಮಿಶ್ರವಾದ ವಿಭೂತಿಯನ್ನು ಧರಿಸಬೇಕು. ವಾನಪ್ರಸ್ಥರು ಬ್ರಹ್ಮಚಾರಿಗಳು ಕನ್ಯಕೆಯರು ದೀಕ್ಷಾಹೀನ ಮನುಷ್ಯರು ಮಧ್ಯಾಹ್ನ ಪರ್ಯಂತರಂಜಲಮಿಶ್ರವಾಗಿ ಭಸ್ಮವಂ ಧರಿಸಿದ್ದು ಆಮೇಲೆ ಕೇವಲ ವಿಭೂತಿಯನ್ನೇಧರಿಸಬೇಕು. ಎಂಬ ಸ್ಮೃತಿ ಸಂಗ್ರಹವಚನದಿಂವನಸ್ಥ, ಬ್ರಹ್ಮಚಾರಿ, ಕನ್ಯಾ, ದೀಕ್ಷಾಹೀನ ಮನುಷ್ಯರ ವಿಷಯವೆಂದು ನಿಶ್ಚಯಿಸತಕ್ಕದ್ದು.

ಮೂ ॥ ತ್ರಿಪುಂಡ್ರಂಸಜಲಂಭಸ್ಮಧೃತ್ವಾಪೂಜಾಂಕರೋತಿಯಃ ।
ಶಿವಪೂಜಾಫಲಂಸಾಂಗಂತಸ್ಯೈವಹಿಪಿನಿಶ್ಚಿತಂ ॥

ಟೀ॥ ಆದ್ದರಿಂಜಲಮಿಶ್ರವಾಗಿ ತ್ರಿಪುಂಡ್ರವಂ ಧರಿಸಬೇಕೆಂಬಲ್ಲಿ ಯಾವನು ಜಲಮಿಶ್ರವಾದ ವಿಭೂತಿಯಂ ಧರಿಸಿಕೊಂಡು ಶಿವಪೂಜೆಯಂಮಾಡುತ್ತಾನೋ ಅವನಿಗೇಯೆ ಸಾಂಗವಾದ ಶಿವಪೂಜಾಫಲವು ಸಿದ್ಧಿಸುವದು

ಮೂ ॥ ಭಸ್ಮನಾಸಜಲೆನೈವಧಾರಯೇಚ್ಚತ್ರಿಪುಂಡ್ರಕಂ ।
ಮುಮುಕ್ಷುರ್ವಾಬುಭುಕ್ಷುರ್ವಾದ್ವಿಜೇಂದ್ರಶ್ಶುದ್ಧವೈದಿಕಃ ॥

ಟೀ ॥ ಮೋಕ್ಷಕಾಮಿಯಾಗಲಿ ಮಹೈಶ್ವರ್ಯಕಾಮಿಯಾಗಲಿಯಾ ವನಾಗಲಿ ದ್ವಿಜಶ್ರೇಷ್ಠನಾದ ಶುದ್ಧವೈದಿಕನು ಸಜಲ ಭಸ್ಮದಿಂದಲೇತ್ರಿ ಪುಂಡ್ರಧಾರಣವಂ ಮಾಡಬೇಕು.

ಮೂ ॥ ಷಡಕ್ಷರೇಣತದ್ಭಸ್ಮಕೃತ್ವಾಪಮಾಭಿಮಂತ್ರಿತಂ ।
ಉದ್ಧೂಳಯೇತ್ತನದೇಹಂತ್ರಿಪುಂಡ್ರಂಚಾಪಿಧಾರಯೇತ್ ।

ಟೀ ॥ ಬಳಿಕ ಭಸ್ಮೋದ್ಧೂಳನ ತ್ರಿಪುಂಡ್ರಧಾರಣವಂ ಮಾಡಬೇಕೆಂಬಲ್ಲಿ ಶಿವ ಷಡಕ್ಷರಮಂತ್ರದಿಂ ಭಸ್ಮವನ್ನೇಳುಭಾರಿ ಮಂತ್ರಿಸಿ ಅದರಿಂ ದೇಹವನ್ನುದ್ಧೂಳಿಸುವದು ಅದರಮೇಲೆತ್ರಿಪುಂಡ್ರವನ್ನು ಧರಿಸುವದು.

ಅವ. ಬಳಿಕೀ ತ್ರಿಪುಂಡ್ರವಂ ಯಾವಕಾಲದಲ್ಲಿ ಯಾವಸ್ಥಾನದಲ್ಲಿ ಹ್ಯಾಗೆ ರಚಿಸಬೇಕೆಂದರೆ;

ಮೂ ॥ ತ್ರಿಪುಂಡ್ರಂಧಾರಯೇನ್ನಿತ್ಯಂಭಸ್ಮನಾಸಜಲೇನಚ ।
ಸ್ಥಾನೇಷುಪಂಚದಶಸುಶರೀರೆ ಸಾಧಕೋತ್ತಮಃ ॥

ಟೀ ॥ ಸದಾಕಾಲದಲ್ಲಿಯು ಜಲಮಿಶ್ರವಾದ ಭಸ್ಮದಿಂಶರೀರದಪಂಚದಶ ಸ್ಥಾನಂಗಳಲ್ಲಿ ಸಾಧಕರಲ್ಲಿಶ್ರೇಷ್ಠನಾದವನು ತ್ರಿಪುಂಡ್ರಂಧರಿಸುವದು.

ಅವ. ಆಸ್ಥಾನಗಳ್ಯಾವು ಧರಿಸುವದು ಹ್ಯಾಗೆ ಎಂದರೆ.—

ಮೂ ॥ ಉತ್ತಮಾಂಗೇಲಲಾಟೇಚಶ್ರೋತ್ರಯೋರ್ದ್ವಯೋಸ್ತಥಾ ।
ಗಳೇಭುಜದ್ವಯೇಚೈವಹೃದಿನಾಭೌಚಪೃಷ್ಠಕೇ ।
ಬಾಹುಯುಗ್ಮೇಕಕುದ್ದೇಶೇಮಣಿಬಂಧದ್ವಯೇತಥಾ ।
ತ್ರಿಪುಂಡ್ರಂಭಸ್ಮನಾಧಾರ್ಯಂಮೂಲಮಂತ್ರೇಣಸಾಧಕೈಃ ।

ಟೀ ॥ ತ್ರಿಯಾಯುಷ ತ್ರಿಯಂಬಕಪ್ರಣವ ಪಂಚಾಕ್ಷರ ಮಂತ್ರಂಗಳಿಂ ಶಿರಸ್ಸು, ಲಲಾಟ, ಕರ್ಣದ್ವಯ, ಕೊರಳು, ಭುಜದ್ವಯ, ವಕ್ಷಸ್ಥಲ, ನಾಭಿ, ಬೆನ್ನು, ಬಾಹುದ್ವಯ, ಹೆಕ್ಕತ್ತು, ಮಣಿಬಂಧದ್ವಯ ಈಪಂಚದಶಸ್ಥಾನದಲ್ಲಿ ಸಾಧಕೋತ್ತಮರಿಂ ಭಸ್ಮತ್ರಿಪುಂಡ್ರವು ರಚಿಸಲ್ಪಡ್ಕುದು.

ಮೂ ॥ ವಾಮಹಸ್ತತಲೇಭಸ್ಮಕ್ಷಿಪ್ತ್ವಾಪ್ಲಾವ್ಯದ್ವಾನ್ಯಪಾಣಿನಾ ।
ಅಗ್ನಿರಿತ್ಯಾದಿಮಂತ್ರೇಣಸ್ಪೃಶಂತ್ಸಪ್ತಾಭಿಮಂತ್ರಿತಂ ।
ತ್ರಿಪುಂಡ್ರಮುಕ್ತಸ್ಥಾನೇಷುದಧ್ಯಾತ್ಸಜಲಭಸ್ಮನಾ ।
ಶಿವಂಶಿವಕರಂಶಾಂತಂಸಯಾಪ್ನೋತಿನಸಂಶಯಃ ॥

ಟೀ ॥ ಅಭಿಮಂತ್ರಪೂರ್ವಕವಾಗಿ ಸಮಂತ್ರ ತ್ರಿಪುಂಡ್ರಧಾರಣಕ್ಕೆ ಫಲವೇನೆಂದರೆ ವಾಮಕರತಲದಲ್ಲಿ ಭಸ್ಮವನ್ನಿರಿಸಿಕೊಂಡು ಬಲದಹಸ್ತ

ದಿಂ ಮುಚ್ಚಿ ಅಗ್ನಿರಿತಿ ಭಸ್ಮ ಎಂಬುದು ಮೊದಲಾದ ಮಂತ್ರದಿಂ ಭಸ್ಮ
ಸ್ಪರ್ಶವಂಮಾಡಿ ಏಳುಭಾರಿ ಮಂತ್ರಿಸಿ ಜಲಮಿಶ್ರವಾದ ಭಸ್ಮದಿಂ ಹಿಂದೆ
ಹೇಳಿದಸ್ಥಾನಗಳಲ್ಲಿ ತ್ರಿಪುಂಡ್ರವಂ ಧರಿಸಿದ ಪುರುಷನು ರಾಗದ್ವೇಷರಹಿತ
ನಾದ ಸಕಲರಿಗೂ ಶುಭಕರನಾದ ಶಿವನಂ ಐದುವನು.

ಮೂ ॥ ಮಧ್ಯಾಂಗುಲಿತ್ರಯೇಣೈವಸ್ವದಕ್ಷಿಣಕರಸ್ಯತು ।
ಷಡಂಗುಲಾಯತಂಮಾನಮಪಿವಾಧಿಕಮಾನಕಂ ॥
ನೇತ್ರಯುಗ್ಮಪ್ರಮಾಣೇನಫಾಲೇದಧ್ಯಾತ್ತ್ರಿಪುಂಡ್ರಕಂ ।

ಟೀ । ಬಳಿಕ ತ್ರಿಪುಂಡ್ರ ರಚನ ಪ್ರಮಾಣವೇನೆಂದರೆ ತನ್ನದಕ್ಷಿ
ಣಹಸ್ತದ ತರ್ಜನೀಮಧ್ಯಮಾನಾಮಿಕಾಂಗುಲಿತ್ರಯದಿಂದಾರುಬೆರಳು ಪ್ರ
ಮಾಣದಿಂದಾದರೂ ಅಲ್ಲದೆ ಹೆಚ್ಚಾಗಿ ನೇತ್ರದ್ವಯ ಪ್ರಮಾಣದಿಂದಾದರೂ
ಲಲಾಟದಲ್ಲಿ ತ್ರಿಪುಂಡ್ರವಂ ರಚಿಸಬೇಕು.

ಅವ. ಬಳಿಕ ತ್ರಿಪುಂಡ್ರಮಹತ್ವವೇನೆಂದರೆ.

ಮೂ । ಮಧ್ಯಮಾನಾಮಿಕಾಂಗುಷ್ಠೈರನುಲೋಮವಿಲೋಮತಃ ।
ಧಾರಯೇದ್ಯಸ್ತ್ರಿಪುಂಡ್ರಾಂಕಂಸರುದ್ರೋನಾತ್ರಸಂಶಯಃ ॥

ಟೀ । ಬಳಿಕ ಮತ್ತೊಂದು ಪ್ರಕಾರವುಂಟೆಂಬಲ್ಲಿ ಮಧ್ಯಮಾ
ನಾಮಿಕೆಗಳಿಂ ಎಡದಿಂ ಬಲಕ್ಕೆರಡು ರೇಖೆಗಳಂ ಮಾಡಿ ಅವುಗಳ ನಡುವೆ
ಅಂಗುಷ್ಠದಿಂದೆಡಕ್ಕೊಂದು ರೇಖೆಯಂ ಮಾಡಿ ಈ ಪ್ರಕಾರದಿಂ ತ್ರಿಪುಂಡ್ರ
ವ ನಾವಾತನು ಧರಿಸುವನೋ ಆತನು ಪ್ರತ್ಯಕ್ಷ ಶಿವನೇಸರಿ ಸಂದೇಹವಿಲ್ಲ.

ಮೂ ॥ ಪ್ರಾತಃಕಾಲೇಚ ಮಧ್ಯಾಹ್ನೇಸಾಯಾಹ್ನೇಚತ್ರಿಪುಂಡ್ರಕಂ ।
ಕದಾಚಿದ್ಭಸ್ಮನಾಕುರ್ವಂತ್ಸರುದ್ರೋನಾತ್ರಸಂಶಯಃ ॥
ಏವಂವಿಧಂವಿಭೂತ್ಯಾಚಕುರುತೆಯಸ್ತ್ರಿಪುಂಡ್ರಕಂ ।
ಸರೌದ್ರಧರ್ಮಸಂಯುಕ್ತಸ್ತ್ರಯೀಮಯುಇತಿಶ್ರುತಿಃ ॥

ಟೀ। ಈ ವಿಧ್ಯುಕ್ತಪ್ರಕಾರವಾಗಿ ಯಾವಾತನು ಭಸ್ಮದಿಂ ಋಜು
ಶ್ವೇತಾದಿ ಸಲ್ಲಕ್ಷಣಯುಕ್ತವಾದ ತ್ರಿಪುಂಡ್ರವಂ ಧರಿಸುತ್ತಿಹನೋ ಆತಂ
ಶಿವಾಚಾರದೊಡನೆ ಕೂಡಿದಾತನಾಗಿ ವೇದತ್ರಯಸ್ವರೂಪನು. ಧರತಿ
ಸವೇದತ್ರಯಧಾರೀಭವತಿ । ಸಸತತಂತ್ರೇತಾಗ್ನಿರ್ಭವತಿ । ಸಪುಷ್ಕರ
ತ್ರಯಸ್ನಾತೋಭವತಿ । ಯಸ್ತ್ರಿಪುಂಡ್ರಧಾರೀಪುರುಷಸ್ಸರುದ್ರಸ್ಸಪರ
ಮೇಷ್ಠೀ । ಯಃಇದಂತ್ರಿಪುಂಡ್ರಂಧೃತವಂತಂಪುರುಷಂಪಶ್ಯತಿಸಸರ್ವಪಾ
ಪೇಭ್ಯೋವಿನಿರ್ಮುಕ್ತೋಭವತಿ ॥ ಸಸರ್ವವೇದಾಧ್ಯಯನ ಜನ್ಮಫಲ

ವಾನ್ಭವತಿ । ಹೀಗೆಂಬ ವೃದ್ಧಜಾಬಾಲ ಶ್ರುತಿಯುಂಟಾದಕಾರಣದಿಂ ಮ
ಧ್ಯಾಹ್ನಕಾಲದಲ್ಲಿ ತ್ರಿಪುಂಡ್ರವಂ ಆವಾತಂ ಧರಿಸುವನೋ ಆತಂ ಶಿವನೇ
ಸರಿ; ಸಂದೇಹವಿಲ್ಲ.

ಮೂ ॥ ಬ್ರಹ್ಮಾವಿಷ್ಣುಶ್ಚರುದ್ರಶ್ಚದೇವಾಶ್ಶಕ್ರಪುರೋಗವಾಃ ।
ತ್ರಿಪುಂಡ್ರಂಧಾರಯಂತ್ಯೇವಭಸ್ಮನಾಪರಿಕಲ್ಪಿತಂ ।
ವಸಿಷ್ಠಾದ್ಯಾಮಹಾಭಾಗಾಮುನಯಶ್ಶ್ರುತಿಕೋವಿದಾಃ।
ಧಾರಯಂತಿಸದಾಭಕ್ತ್ಯಾತ್ರಿಪುಂಡ್ರಂಭಸ್ಮನಾಕೃತಂ ।

ಟೀ ॥ ಬಳಿಕೀಪ್ರಕಾರವಾದ ತ್ರಿಪುಂಡ್ರಂಯಾರಿಂದಂಗೀಕರಿಸ
ಲ್ಪಟ್ಟಿತೆಂದರೆ ಬ್ರಹ್ಮ, ವಿಷ್ಣು, ರುದ್ರ, ಮೊದಲಾದ ದೇವತೆಗಳು ವಸಿ
ಷ್ಠ ಮೊದಲಾದ ಶ್ರುತಿಕೋವಿದರಾದ ಮಹರ್ಷಿಗಳು ಭಸ್ಮದಿಂ ಮಾಡಲ್ಪ
ಟ್ಟ ತ್ರಿಪುಂಡ್ರವಂ ಎಲ್ಲಾಗಳು ಭಕ್ತಿಯಿಂ ಧರಿಸಿದರು.

ಮೂ ॥ ಸ್ಮೃತಿತೀಹಾಸಕಲ್ಪೇಷು ವಿದಿತಂಭಸ್ಮಪುಂಡ್ರಕಂ ।ಧಾರಣೀ
ಯಶ್ಶೈವಾಗಮೇಷುವೇದೇಷು ಪುರಾಣೇಷ್ವಖಿಲೇಷುಚ.
ಸಮಸ್ತಾನಾಂಶ್ಶೈವಾನಾಂಚವಿಶೇಷತಃ ।

ಟೀ॥ ಬಳಿಕೀ ತ್ರಿಪುಂಡ್ರಂ ಎಲ್ಲಿ ವಿಧಿಸಿದೆಯೆಂದರೆ ಶಿವಸಂಬಂಧವಾದಆ
ಗಮಂಗಳಲ್ಲಿ ವೇದಂಗಳಲ್ಲಿ ಪುರಾಣಂಗಳಲ್ಲಿ ಸಮಸ್ತ ಸ್ಮೃತಿಗಳಲ್ಲಿಭಾರತಾದಿ
ಇತಿಹಾಸಂಗಳಲ್ಲಿ ಕಲ್ಪಸೂತ್ರಂಗಳಲ್ಲಿ ಸಮಸ್ತರಿಗೂ ಧರಿಸಲುಯೋಗ್ಯವೆಂ
ದು ತ್ರಿಪುಂಡ್ರಂವಿಧಿಸಲ್ಪಟ್ಟಿತು. ಶೈವರಿಗೆ ವಿಶೇಷವಾಗಿಹೇಳಲ್ಪಟ್ಟಿತು.

ಮೂ ॥ ನಾಸ್ತಿಕೋಭಿನ್ನಮರ್ಯಾದೋದುರಾಚಾರಪರಾಯಣಃ ।
ಭಸ್ಮತ್ರಿಪುಂಡ್ರಧಾರೀಚೇನ್ಮುಚ್ಯತೆಸರ್ವಕಿಲ್ಬಿಷೈಃ ॥

ಟೀ॥ ಬಳಿಕ ಈ ತ್ರಿಪುಂಡ್ರಧಾರಣದಿಂ ಸಕಲ ಪಾಪಕ್ಷಯ ವಹುದೆಂಬಲ್ಲಿ
ವೇದವಿರುದ್ಧಾಚಾರಸಂಪನ್ನರಾಗಿ ಶರೀರೇಂದ್ರಿಯಬುದ್ಧಿವ್ಯತಿರಿಕ್ತವಾ
ಗಿ ಒಬ್ಬಾತ್ಮನಿಲ್ಲವೆಂದು ಹೇಳುವ ಚಾರ್ವಾಕ ಮೊದಲಾದ ದುರಾಚಾರ
ತತ್ಪರರಾದ ಪಾಪಾತ್ಮರಾದ ಜನಗಳು ಈಭಸ್ಮತ್ರಿಪುಂಡ್ರವಂ ಧರಿಸಿದಂಥಾ
ವರಾದೊಡೆ ಸಕಲ ಪಾಪಂಗಳಿಂದಲೂ ಬಿಡುಗಡೆಯಂ ಪಡೆಯುತ್ತಿಹರು.

ಇಂತುನಿರಾಭಾರ ವೀರಶೈವ ಸಾಮ್ರಾಜ್ಯಧುರೀಣನಾದತೋಂಟದಸಿ
ದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ವೀರಶೈವಪ್ರದೀಪಿಕೆ
ಯೊಳ್ ಅಷ್ಟಾವರಣಪ್ರಕರಣದಲ್ಲಿ ಭಸ್ಮಸಂಗ್ರಹ ಧಾರಣ ವಿಧಾನ
—** ತತ್ಫಲನಿರೂಪಣಂ ಸಂಪೂರ್ಣಂ. *—

# ರುದ್ರಾಕ್ಷ ಲಕ್ಷಣ ಧಾರಣಾದಿ ನಿರೂಪಣಂ

ಶ್ರೀ ಮದಸ್ಮದ್ಗುರುಮಧಾ ದಕ್ಷಿಣಾ ಮೂರ್ತಯೆನಮಃ
ಅನಂತರದೊಳ್ ರುದ್ರಾಕ್ಷಧಾರಣಕ್ರಮವಂಪೇಳ್ವೆಂ.

ಮೂ ॥ ಭಸ್ಮನಾ ವಿಹಿತಸ್ನಾಸ್ತಿ ತ್ರಿಪುಂಡ್ರಾಂಕಿತಮಸ್ತಕಃ ।
ಶಿವಾರ್ಚನಾಪರೋನಿತ್ಯಂರುದ್ರಾಕ್ಷಮಪಿಧಾರಯೇತ್ ।

ಟೀ ॥ ಭಸ್ಮದಿಂಮಾಡಲ್ಪಟ್ಟ ಸ್ನಾನ ಮುದ್ಧೂಳನವುಳ್ಳವನಾಗಿ ತ್ರಿಪುಂಡ್ರದಿಂದಂಕಿತವಾದ ಲಲಾಟ ವುಳ್ಳವನಾಗಿ ತ್ರಿಕಾಲದಲ್ಲಿಯೂ ಶಿವಪೂಜಾನಿಷ್ಠನಾದ ಶಿವಭಕ್ತನುಶ್ರೀರುದ್ರಾಕ್ಷಿಯಂ ಧರಿಸಬೇಕು.

ಮೂ ॥ ದುಷ್ಟಚಿತ್ತದುರಾಚಾರದುಷ್ಪ್ರಜ್ಞಾಅಪಿಮಾನವಾಃ ॥
ರುದ್ರಾಕ್ಷಧಾರಣಾದೇವಮುಚ್ಯಂತೆಸರ್ವಪಾತಕೈಃ ॥

ಟೀ । ಬಳಿಕೀ ರುದ್ರಾಕ್ಷಧಾರಣದಿಂದೇನು ಫಲವೆಂದರೆ ದುರ್ಮನಸ್ಥಿತಿಗಳಾಗಲಿ ದುರ್ಬುದ್ಧಿಗಳಾಗಲಿ ದುರಾಚಾರರಾಗಲಿ ರುದ್ರಾಕ್ಷಧಾರಣದಿಂ ಸಕಲ ಪಾಪಂಗಳಿಂದಲೂ ಬಿಡಲ್ಪಡುವರು.

ಅವ. ॥ ಬಳಿಕೀ ರುದ್ರಾಕ್ಷಗಳು ಎಂತು ಪುಟ್ಟಿದವು ಯಾವಕಾರಣದಿಂದೀಶಕ್ತಿಯುಂಟಾಯಿತೆಂದರೆ.

ಮೂ ॥ ಪುರಾತ್ರಿಪುರಸಂಹಾರೆತ್ರಿಣೆತ್ರೊಜಗತಾಂಪತಿಃ ।
ಉದಪಶ್ಯತ್ಪುರಾಯೊಗಮುನ್ಮೀಲಿತವಿಲೋಚನಃ ॥
ನಿಪೇತುಸ್ತಸ್ಯನೇತ್ರೇಭ್ಯೋಬಹವೋಜಲಬಿಂದವಃ ।
ತೆಭ್ಯೋಜಾತಾಹಿರುದ್ರಾಕ್ಷಾರುದ್ರಾಕ್ಷಾಇತಿಕೀರ್ತಿತಾಃ ।
ರುದ್ರನೆತ್ರಸಮುತ್ಪನ್ನಾರುದ್ರಾಕ್ಷಾಲೊನಾಕಪಾವನಾಃ ॥

ಟೀ । ಪುರಾತ್ರಿಪುರಪಧಾಯೊನ್ಮೀಲಿತಾಕ್ಷೊಹಂತೆಭ್ಯೋಜಲಬಿಂದವೊಭೂಮೌಪತಿತಾಸ್ತೆರುದ್ರಾಕ್ಷಾಜಾತಾಃ । ಸರ್ವಾನುಗ್ರಹಾರ್ಥಾಯ ತೆಷಾಂನಾಮೊಚ್ಚಾರಣೆನದಶಗೊದಾನಫಲಂಭವತಿ । ದರ್ಶನಸ್ಪರ್ಶನಾಭ್ಯಾಂದ್ವಿಗುಣತ್ರಿಗುಣಫಲಂಭವತಿ ।

ಆತ ಊರ್ಧ್ವಂವಕ್ಷ್ಯಂನಶಕ್ಯತೆ ಎಂದು ಬೃಹಜ್ಜಾಬಾಲೋಪನಿಷದ್ವಚನಾನುಸಾರವಾಗಿ ಪೂರ್ವದಲ್ಲಿ ತ್ರಿಪುರಸಂಹಾರ ಪ್ರಸ್ತಾವದಲ್ಲಿ ಜಗನ್ನಾಯಕನಾದ ತ್ರಿಣೇತ್ರನಾದ ಪರಶಿವನು ತ್ರಿಪುರಂಗಳ ಸಂಬಂಧವಂ ಊರ್ಧ್ವದೃಷ್ಟಿಯಿಂ ನೋಡಿದನು. ಆ ನೋಡುವಂಥಾ ಶಿವನ ನೇತ್ರಂಗಳತ್ತಣಿಂ ಬಹುಜಲ ಬಿಂದುಗಳ್ಭೂಮಿಯ ಮೇಲೆ ಬಿದ್ದವು. ಆ ಜಲ

ಬಿಂದುಗಳಿಂ ರುದ್ರಾಕ್ಷಗಳ್ಪುಟ್ಟಿದವು. ಯಾವಕಾರಣದಿಂ ರುದ್ರನೇತ್ರಂ
ಗಳಿಂ ಪುಟ್ಟಿದವೋ ಅದುಕಾರಣದಿಂ ರುದ್ರಾಕ್ಷಗಳೆಂದು ಪ್ರಸಿದ್ಧವಾಗಿ
ಲೋಕಪಾವನವಾದವು.

ಮೂ ॥ ಅಷ್ಟತ್ರಿಂಶತ್ಪ್ರಭೇದೇನಭವಂತ್ಯುತ್ಪತ್ತಿಭೇದತಃ ।

ಟೀ॥ ಈ ರೀತಿಯಿಂ ರುದ್ರನೇತ್ರಂಗಳಿಂ ಪುಟ್ಟಿದವಾದ ಕಾರಣದಿಂ ತ
ತ್ಕಲಾಭೇದದಿಂ ಮೂವತ್ತೆಂಟು ಪ್ರಕಾರವಾಗಿ ಉತ್ಪತ್ತಿಯುಳ್ಳವಾದವು.

ಮೂ ॥ ನೇತ್ರಾತ್ಸೂರ್ಯಾತ್ಮನಶ್ಶಂಭೋಃಕಪಿಲಾದ್ವಾದಶೋದಿತಾಃ ।
ಶ್ವೇತಾಷ್ಷೋಡಶಸಂಜಾತಾಸ್ಸೋಮರೂಪಾದ್ವಿಲೋಚನಾತ್ ॥
ಕೃಷ್ಣಾದಶವಿಧಾಜಾತಾವಹ್ನಿರೂಪಾದ್ವಿಲೋಚನಾತ್ ।
ಏವಮುತ್ಪತ್ತಿತೋಭೇದಾರುದ್ರಾಕ್ಷಾಬಹುಧಾಸ್ಮೃತಾಃ ॥

ಟೀ ॥ ಬಳಿಕ ಯಾವನೇತ್ರದಿಂದೆಷ್ಟು ಭೇದವುಂಟಾದವೆಂದರೆ;- ಶಿ
ವನ ಸೂರ್ಯಾತ್ಮಕವಾದ ನೇತ್ರಂ ಕಪಿಲಾದಿ ದ್ವಾದಶ ಕಲಾತ್ಮಕ ಮಪ್ಪು
ದರಿಂದ ನೇತ್ರವರ್ತ್ತಣಿಂ ಕಪಿಲವರ್ಣಮುಳ್ಳವಾದ ದ್ವಾದಶ ಭೇದಮುಳ್ಳ
ರುದ್ರಾಕ್ಷಗಳ್ಪುಟ್ಟಿದವು. ಸೋಮನೇತ್ರಮು ಮೃತಾದಿ ದ್ವಾದಶಕಲಾಮ
ಯವಾದ ಕಾರಣದಿಂ ಶ್ವೇತರೂಪಮಾದ ಷೋಡಶ ಭೇದಮುಳ್ಳ ರುದ್ರಾ
ಕ್ಷಗಳ್ಪುಟ್ಟಿದವು. ವಹ್ನಿನೇತ್ರಂ ಧೂಮ್ರಾರ್ಚಿರ್ಮೊದಲಾದ ದಶಕಲಾ
ರೂಪವಾದ ಕಾರಣದಿಂ ಕೃಷ್ಣವರ್ಣಮಾದ ದಶಭೇದಮುಳ್ಳರುದ್ರಾಕ್ಷಗ
ಳ್ಪುಟ್ಟಿದವು. ಈಪ್ರಕಾರಮಾದುತ್ಪತ್ತಿ ಭೇದದಿಂ ರುದ್ರಾಕ್ಷಗಳು ಬಹು
ಪ್ರಕಾರವಾಗಿ ಹುಟ್ಟಿದವು.

ಮೂ ॥ ಅಛಿದ್ರಂ ಕನಕಪ್ರಖ್ಯಮನನ್ಯಧೃತಮುತ್ತಮಂ ।
ರುದ್ರಾಕ್ಷಂಧಾರಯೇತ್ಪ್ರಾಜ್ಞಶ್ಶಿವಪೂಜಾಪರಾಯಣಃ ॥

ಬಳಿಕ ಧರಿಸಲ್ತಕ್ಕ ರುದ್ರಾಕ್ಷಿಗಳ ಸ್ವರೂಪವೇನೆಂದರೆ; ಛಿದ್ರರಹಿತ
ವಾಗಿ ಚಿನ್ನದವರೆಯುಂಟಾಗಿ ಮತ್ತೊಬ್ಬರು ಧರಿಸದಿರುವ ರುದ್ರಾಕ್ಷಿಯು
ಉತ್ತಮವು ಶಿವಪೂಜಾ ಪರಾಯಣನಾದ ಜ್ಞಾನಿಯಾದ ಪುರುಷನೀಪ್ರ
ಕಾರವಾದ ರುದ್ರಾಕ್ಷಯನೋಡಿ ಧರಿಸುವದು.

ಮೂ ॥ ಶಿಖಾಯಾಮೇಕಮೇಕಾಸ್ಯಂರುದ್ರಾಕ್ಷಂಧಾರಯೇದ್ಬುಧಃ ।
ದ್ವಿತ್ರಿದ್ವಾದಶವಕ್ತ್ರಾಂಶ್ಶಿರಸಿತ್ರೀಣಿಧಾರಯೇತ್ ॥
ಷಟ್ತ್ರಿಂಶದ್ಧಾರಯೇನ್ಮೂರ್ಧ್ನಿನಿತ್ಯಮೇಕಾದಶಾನನಾನ್ ।
ದಶಸಪ್ತಪಂಚವಕ್ತ್ರಾನ್ಷಟ್ಷಟ್ಕರ್ಣದ್ವಯೇವಹೇತ್ ॥

ಷಡಷ್ಟವದನಾನ್ಕಂಠೆದ್ವಾತ್ರಿಂಶದ್ಧಾರಯೆತ್ಸದಾ ।
ಪಂಚಾಶದ್ಧಾರಯೆದ್ಧೀಮಾಂಶ್ಚತುರ್ವಕ್ತ್ರಾಣಿವಕ್ಷಸಿ ॥
ತ್ರಯೋದಶಮುಖಾನ್ಬಾಹ್ವೋರ್ಧರೆತ್ಷೋಡಶಷೋಡಶ ।
ಪ್ರತ್ಯೇಕಂದ್ವಾದಶವಹೆನ್ನವಾಂಶಾನ್ಮಣಿಬಂಧಯೋಃ ।
ಚತುರ್ದಶಮುಖಂಯಜ್ಞಸೂತ್ರಮಷ್ಟೋತ್ತರಂಶತಂ ।
ಧಾರಯೆತ್ಸರ್ವಕಾಲೇತುರುದ್ರಾಕ್ಷಾಂಛಿವಪೂಜಕಃ

ಟೀ ॥ ಬಳಿಕ ಯಾವಸ್ಥಾನದಲ್ಲಿ ಯಾವಪ್ರಕಾರದಿಂ ಎಷ್ಟುರು ದ್ರಾಕ್ಷಿಗಳಂ ಧರಿಸಬೇಕೆಂದರೆ;- ಸ್ಥಾನಂತಪ್ಪದೆಮುಖ ವ್ಯತ್ಯಾಸವಾಗದೆ ಕ್ರಮತಪ್ಪದೆ ವಿಧಿತಪ್ಪದೆ ರುದ್ರಸಾಯುಜ್ಯಸಿಧ್ಯರ್ಥವಾಗಿ ರುದ್ರಾಕ್ಷಿ ಧಾರಣವಂ ಮಾಡುವಲ್ಲಿ ಶಿಖಿಯಲ್ಲೇಕಮುಖವುಳ್ಳದೊಂದು ರುದ್ರಾಕ್ಷಿ ಯಂ ಧರಿಸುವದು. ಶಿರಸ್ಸಿನಲ್ಲಿ ಎರಡು ಮೂರು ಹನ್ನೆರಡು ಮುಖಂಗಳು ಳ್ಳ ರುದ್ರಾಕ್ಷಿಗಳ್ಮೂರಂ ಧರಿಸುವದು. ತಲೆಸುತ್ತಲು ಹನ್ನೊಂದುಮು ಖವುಳ್ಳ ಮೂವತ್ತಾರು ರುದ್ರಾಕ್ಷಿಗಳಂ ಧರಿಸಬೇಕು. ಕರ್ಣಗಳೆರಡರ ಲ್ಲಿ ಹತ್ತುಮುಖದವೆರಡು ಏಳುಮುಖದ ವೆರಡು ಐದುಮುಖದ ವೆರಡು ಈ ಪ್ರಕಾರವಾಗಿ ಆರಾರಂಧರಿಸುವದು. ಅಲ್ಲವೆ ಷಟ್ಷಟ್ಕರ್ಣಯೋರೇಕ ಮೇಕಂ ಹೀಗೆಂಬ ರುದ್ರಾಕ್ಷಜಾಬಾಲಶ್ರುತಿಯುಂಟಾಗಿ ಒಂದೊಂದನಾ ದರೂ ಧರಿಸುವದು. ಕಂಠದಲ್ಲಿ ಆರುಮುಖವುಳ್ಳ ಹದಿನಾರು ಎಂಟು ಮುಖ ವುಳ್ಳಹದಿನಾರು ಹೀಗೆ ಸಮವಾಗಿ ಮೂವ್ವತ್ತೆರಡು ರುದ್ರಾಕ್ಷಿಗಳಂಧರಿಸು ವದು. ಹೃದಯದಲ್ಲಿ ನಾಲ್ಕುಮುಖದವು ಐವತ್ತುಮಣಿಗಳವಾಲೆಯಂ ಧರಿ ಸುವದು. ಹದಿಮೂರುಮುಖದ ಹದಿನಾರುಹದಿನಾರುಮಣಿಮಾಲೆಯಂ ಬಾ ಹುಗಳಲ್ಲಿ ಧರಿಸುವದು. ಒಂಭತ್ತುಮುಖದ ಹನ್ನೆರಡು ಹನ್ನೆರಡು ಮಣಿ ಮಾಲೆಯಂ ಮಣಿಬಂಧಗಳಲ್ಲಿ ಧರಿಸುವದು. ಹದಿನಾಲ್ಕು ಮುಖದ ನೂರೆಂ ಟುಮಣಿಮಾಲೆಯಂ ಯಜ್ಞಸೂತ್ರವನ್ನಾಗಿ ಧರಿಸುವದು.

ಮೂ । ಏವಂರುದ್ರಾಕ್ಷಧಾರೀಯಸ್ಸರ್ವಕಾಲಂತುವರ್ತತೆ ।
ತಸ್ಯಪಾಪಕಥಾನಾಸ್ತಿಮೂಢಸ್ಯಾಪಿನಸಂಶಯಃ ।

ಟೀ ॥ ಯೊರುದ್ರಾಕ್ಷಂಧತ್ತೆ ಸತ್ಯಂಪರಮಶಿವಸ್ಸಸತ್ಯಂಪರಮಶಿ ವಃ ಎಂಬ ಶ್ರುತಿಯುಂಟಾಗಿ ಈ ಪ್ರಕಾರವಾಗಿ ರುದ್ರಾಕ್ಷಿಗಳಂ ಧರಿಸು ವನು ಸಾಕ್ಷಾತ್ ಶಿವನೇ ಎಂಬರ್ಥ. ಈ ಪ್ರಕಾರವಾಗಿ ಉಕ್ತಸ್ಥಾನಂ ಗಳಲ್ಲಿ ಅಥವಾ ಒಂದೆರಡು ಸ್ಥಾನಂಗಳಲ್ಲಿ ಸದಾರುದ್ರಾಕ್ಷಧಾರಿಯಾವನುಂ

ಟೋ ಅವನು ಮೂಢನಾದರೂ ಅವನಿಗೆ ಪಾಪಕಥೆಯೇ ಇಲ್ಲವು.

ಮೂ ॥ ಬ್ರಹ್ಮಹಾಮದ್ಯಪೋಯೀಚಸ್ವರ್ಣಸ್ತೃದ್ಗುರುತಲ್ಪಗಃ ।
ಮಾತೃಹಾಪಿತೃಹಾಚೈವಭ್ರೂಣಹಾಕೃತಘಾತಕಃ ॥
ರುದ್ರಾಕ್ಷಧಾರಣಾದೇವಮುಚ್ಯತೇಸರ್ವಪಾತಕೈಃ ।

ಟೀ॥ ಇಲ್ಲಿ ಕ್ಷುದ್ರಪಾಪಸಂಬಂಧಮಾತ್ರವಿಲ್ಲವೋ ಮಹಾಪಾಪಸಂಬಂಧವೂ ಇಲ್ಲವೋ ಎಂದರೆ;– ಯಾವನಾನೋರ್ವನು ಬ್ರಹ್ಮಹತ್ಯವಂ ಮಾಡಿದವನಾಗಲಿ ಮದ್ಯಪಾನವಂ ಮಾಡಿದವನಾಗಲಿ ಸ್ವರ್ಣಸ್ತೇಯವಂ ಮಾಡಿದವನಾಗಲಿ ಗುರುಪತ್ನಿಗಳುಪಿದವನಾಗಲಿ ತಾಯಿತಂದೆಗಳಂ ಕೊಂದವನಾಗಲಿ ಮಾಡಿದ ಉಪಕಾರವಂ ಮರೆತವನಾಗಲಿ ರುದ್ರಾಕ್ಷಗಳಂಧರಿಸಿದ ಮಾತ್ರದಿಂ ಹೇಳಲ್ಪಟ್ಟ ಮಹಾಪಾತಕಂಗಳಿಂ ಬಿಡಲ್ಪಟ್ಟವನಾಗುವದಲ್ಲದೆ ಮತ್ತು ಉಳಿದ ಪಾತಕಂಗಳಿಂದಲೂ ಬಿಡಲ್ಪಡುವನು.

ಮೂ ॥ ದರ್ಶನಾತ್ಸ್ಪರ್ಶನಾದೇವಶ್ರವಣಾದಪಿಪೂಜನಾತ್ ।
ರುದ್ರಾಕ್ಷಧಾರಣಾಲ್ಲೋಕೇಮುಚ್ಯಂತೇಪಾತಕೈರ್ಜನಾಃ ॥

ಟೀ ॥ಮತ್ತು ರುದ್ರಾಕ್ಷಿಯ ದರ್ಶನ ಸ್ಪರ್ಶನ ಸ್ಮರಣ ಪೂಜನಧಾರಣೆಗಳಿಂ ಲೋಕದಲ್ಲಿ ಜನರುಗಳು ಸಕಲ ಪಾಪಗಳಿಂದಲೂ ಬಿಡಲ್ಪಡುತ್ತಿಹರು.

ಮೂ ॥ ಬ್ರಾಹ್ಮಣೋವಾಂತ್ಯಜೋವಾಪಿಮೂರ್ಖೋವಾ ಪಂಡಿತೋಪಿವಾ ।
ರುದ್ರಾಕ್ಷಧಾರಣಾದೇವಮುಚ್ಯತೇಸರ್ವಪಾತಕೈಃ ॥

ಟೀ ॥ ಇಲ್ಲಿ ಜನಶಬ್ದದಿಂದಾವಜನಗಳಂ ಪೇಳುವದೆಂದರೆ;— ಬ್ರಾಹ್ಮಣನಾಗಲಿ ಅಂತ್ಯಜನಾಗಲಿ ಮೂಢನಾಗಲಿ ಪಂಡಿತನಾಗಲಿ ರುದ್ರಾಕ್ಷಧಾರಣ ಮಾತ್ರದಿಂ ಸಕಲ ಪಾತಕಂಗಳಿಂದಲೂ ಬಿಡಲ್ಪಡುತ್ತಿಹನು.

ಮೂ ॥ ಗವಾಂಕೋಟಿಪ್ರದಾನಸ್ಯಯತ್ಫಲಂಲಭ್ಯತೇಭುವಿ ।
ತತ್ಫಲಂಲಭತೆಮರ್ತ್ಯೋನಿತ್ಯಂರುದ್ರಾಕ್ಷಧಾರಣಾತ್ ॥

ಟೀ ॥ ಬಳಿಕೀ ರುದ್ರಾಕ್ಷಧಾರಣದಿಂ ಪಾಪಕ್ಷಯಮಾತ್ರವೇ ಫಲವೊ ಎಂದರೆ;— ಈ ಲೋಕದಲ್ಲಿ ಕೋಟಿಗೋದಾನ ಮಾಡಿದವನು ಯಾವ ಫಲವಂ ಪಡೆಯುವನೋ ಆ ಫಲವಂ ನಿತ್ಯವು ರುದ್ರಾಕ್ಷಧಾರಣೆಯಂ ಮಾಡಿದ ಪುರುಷನು ಪಡೆಯುವನು.

ಮೂ ॥ ಕಂಠೇರುದ್ರಾಕ್ಷಮಾಶ್ರಿತ್ಯಶ್ವಾಪಿವಾಮ್ರಿಯತೇಯದಿ ।
ಸೋಪಿರುದ್ರತ್ವಮಾಪ್ನೋತಿ ಕಿಂಪುನರ್ಮಾನುಷಾದಯಃ ॥

ಟೀ ॥ ಮತ್ತಂ ಪ್ರಾಣಿಮಾತ್ರಕ್ಕೂ ಉಂಟೋ ಎಂದರೆ ಕಂಠ

ದಲ್ಲಿರುದ್ರಾಕ್ಷೆಯಂ ಧರಿಸಿ ಮೃತವಾದ ಶುನಕವೂ ರುದ್ರತ್ವವಂ ಪಡೆಯುವ ಲ್ಲಿ ಮನುಷ್ಯಮೊದಲಾದವರಿಗೆ ರುದ್ರತ್ವಬರುವದು ಆಶ್ಚರ್ಯವೇನು.

ಮೂ ॥ ಭಸ್ಮೋದ್ಧೂಳಿತಸರ್ವಾಂಗಾಧೃತರುದ್ರಾಕ್ಷಮಾಲಿಕಾಃ ।
ಯೇಭವಂತಿಮಹಾತ್ಮಾನಸ್ತೇರುದ್ರಾನಾತ್ರಸಂಶಯಃ ॥

ಟೀ ॥ ಮತ್ತಂ ಭಸ್ಮದಿಂ ಲೇಪಿಸಲ್ಪಟ್ಟ ಸರ್ವ ಶರೀರವುಳ್ಳವರಾಗಿ ರುದ್ರಾಕ್ಷಧಾರಿಗಳಾದವರುಗಳು ಮಹಾತ್ಮರಾದ ಭೂರುದ್ರರೆನಿಸಿಕೊಳ್ಳುವರು.ಈ ವಿಷಯದಲ್ಲಿ ಸಂದೇಹವಿಲ್ಲ.

ಮೂ ॥ ನಿತ್ಯಾನಿಕಾಮ್ಯಾನಿನಿಮಿತ್ತಜಾನಿಕರ್ಮಾಣಿ ಸರ್ವಾಣಿ ಸದಾಪಿಕುರ್ವನ್ । ಅಭಸ್ಮರುದ್ರಾಕ್ಷಧರೋಯದಿಸ್ಯಾದ್ದ್ವಿಜೋನತಸ್ಯಾಸ್ತಿಫಲೋಪಪತ್ತಿಃ ॥

ಟೀ॥ ಅವ. ಬಳಿಕೀ ಭಸ್ಮರುದ್ರಾಕ್ಷಧಾರಣೆ ಇಲ್ಲದದ್ವಿಜನಿಂ ಮಾಡಲ್ಪಟ್ಟ ನಿತ್ಯನೈಮಿತ್ತಿಕ ಕಾಮ್ಯ ಕರ್ಮಂಗಳು ವ್ಯರ್ಥವೆಂಬಲ್ಲಿಹೇಳುವೆನು. ನಿತ್ಯನೈಮಿತ್ತಿಕ ಕಾಮ್ಯಕರ್ಮಂಗಳ ಮಾಡುವಂಥಾದ್ವಿಜನುಎತ್ತಲಾನುಭಸ್ಮರುದ್ರಾಕ್ಷ ಧಾರಣ ವಿಲ್ಲದವನಾದರೆ ಅವಂಗೆ ತತ್ತದುಕ್ತಫಲಪ್ರಾಪ್ತಿ ಇಲ್ಲ.

ಮೂ ॥ ಅರುದ್ರಾಕ್ಷಧರೋಭೂತ್ವಾಯತ್ಕಿಂಚಿತ್ಕರ್ಮವೈದಿಕಂ ।
ಕುರ್ಯಾದ್ವಿಪ್ರಸ್ತುಯೋಮೋಹಾನ್ನಾಸಾವಾಪ್ನೋತಿ ತತ್ಫಲಂ ॥

ಟೀ ॥ರುದ್ರಾಕ್ಷಧಾರಣ ರಹಿತನಾಗಿಯಾವದ್ವಿಜನುಮೋಹದ ದೆಸೆಯಿಂದವೈದಿಕಕರ್ಮಗಳಂಮಾಡಿದವನಾದರು ತತ್ತದುಕ್ತಫಲಗಳನ್ನುಹೊಂದುವದಿಲ್ಲ.

ಮೂ ॥ ಸರ್ವೇಷುವರ್ಣಾಶ್ರಮಸಂಗತೇಷುನಿತ್ಯಂಸದಾಚಾರ ಪರಾಯಣೇಷು। ಶ್ರುತಿಸ್ಮೃತಿಭ್ಯಾಮಿಹಚೋದ್ಯಮಾನಾವಿಭೂತಿರುದ್ರಾಕ್ಷಧೃತಿಸ್ಸಮಾನಾ ॥

ಟೀ॥ ಬಳಿಕ ವರ್ಣಾಶ್ರಮಾಚಾರ ನಿಷ್ಠರಲ್ಲಿ ಭಸ್ಮ ರುದ್ರಾಕ್ಷಧಾರಿಯಾದವನೇಶ್ರೇಷ್ಠನೆಂಬಲ್ಲಿಬ್ರಾಹ್ಮಣಾದಿವರ್ಣಬ್ರಹ್ಮಚರ್ಯಾದ್ಯಾಶ್ರಮಯುಕ್ತರಾಗಿ ನಿತ್ಯವು ಸದಾಚಾರ ಸಂಪನ್ನರಾದ ಸತ್ಪುರುಷರವಿಷಯದಲ್ಲಿ ವಿಭೂತಿ ರುದ್ರಾಕ್ಷಧಾರಿಯಾದವನೇ ಶ್ರುತಿಸ್ಮೃತಿಗಳಿಂಕೊಂಡಾಡಲು ಯೋಗ್ಯನು.

ಇದು ನಿರಾಭಾರಿ ವೀರಶೈವ ಸಾಮ್ರಾಜ್ಯ ಧುರಂಧರನಾದತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ವೀರಶೈವಪ್ರದೀಪಿಕೆಯೊಳ್ ಅಷ್ಟಾವರಣಪ್ರಕರಣದೊಳ್ ರುದ್ರಾಕ್ಷಲಕ್ಷಣ ತದ್ಧಾರಣ

—** ತತ್ಫಲಕ್ರಮ ನಿರೂಪಣಂ ಸಮಾಪ್ತಂ. **—

# ಶಿವಪಂಚಾಕ್ಷರೀ ಮಂತ್ರಸ್ಥಲ ನಿರೂಪಣಂ.

ಅ. ಅನಂತರದೊಳ್ ಶಿವಮಂತ್ರಸ್ವರೂಪಮಂ ನಿರೂಪಿಸುವೆನದೆಂತೆನೆ

ಮೂ ‖ ಧೃತಿಶ್ರೀಭೂತಿರುದ್ರಾಕ್ಷಪ್ರಯತೋಲಿಂಗಧಾರಕಃ ।
ಜಪೇತ್ಷಡಕ್ಷರೀವಿದ್ಯಾಂಶಿವತತ್ವಪ್ರಬೋಧಿನೀಂ ‖

ಟೀ ‖ ಶಿವಲಿಂಗ ಭಸ್ಮರುದ್ರಾಕ್ಷ ಧಾರಣ ಸಂಪನ್ನನು ಶಿವತತ್ವಜ್ಞಾನಾರ್ಥವಾಗಿ ಪಂಚಾಕ್ಷರಿಯಂ ಜಪಿಸುವದೆಂಬಲ್ಲಿ ಧರಿಸಲ್ಪಟ್ಟ ಮಂಗಳಕರವಾದ ವಿಭೂತಿ ರುದ್ರಾಕ್ಷಗಳಿಂ ಪವಿತ್ರನಾದ ಶಿವಲಿಂಗಧಾರಕನು ಪರಶಿವತತ್ವ ಪ್ರಕಾಶವಂ ಮಾಡುವಂಥಾ ಶ್ರೀರುದ್ರಪ್ರಸಿದ್ಧಮಾದ ಷಡಕ್ಷರೀ ವಿದ್ಯೆಯಮಂ ಮಾನಸೋಪಾಂಶು ವಾಚಕ ರೂಪದಿಂ ಜಪಿಸುವದು.

ಅವ. ಬಳಿಕೀಪ್ರಕಾರದಿಂ ಶಿವನು ಷಡಕ್ಷರೀ ಮಂತ್ರವು ತಿಳಿಯಲ್ಪಡಲಾಗಿ ಮಂತ್ರಾಂತರದಿಂದಲೂ ಪ್ರಯೋಜನ ವಿಲ್ಲವೆಂಬಲ್ಲಿ ಹೇಳುತ್ತೇನೆ.

ಮೂ ‖ ಶಿವತತ್ವಾತ್ಪರಂನಾಸ್ತಿಯಥಾತತ್ವಾಂತರಂಮಹತ್ ।
ತಥಾಷಡಕ್ಷರೀಮಂತ್ರಾನ್ನಾಸ್ತಿಮಂತ್ರಾಂತರಂಮಹತ್ ।

ಟೀ ‖ ಈ ಷಡಕ್ಷರೀ ಮಂತ್ರವೇ ಏನುಕಾರಣ ಜಪಿಸಲ್ತಕ್ಕದು ಎಂದರೆ ಶಿವ ಏಕೋಧ್ಯೇಯಃ ಎಂಬುವದು ಮೊದಲಾದ ಶ್ರುತಿಗಳಿಂ ಶಿವತತ್ವ ವ್ಯತಿರಿಕ್ತವಾಗಿ ದೊಡ್ಡದಾದ ಮತ್ತೊಂದು ತತ್ವವು ಹ್ಯಾಗಿಲ್ಲವೋ ಹಾಗೆ ಪೂರ್ವೋಕ್ತ ಷಡಕ್ಷರ ಮಂತ್ರದತ್ತಣಿಂ ದೊಡ್ಡಿತಾದ ಮಂತ್ರಾಂತರ ವಿಲ್ಲವು “ವಿದ್ಯಾಸುಶ್ರುತಿರುತ್ಕೃಷ್ಟಾತತ್ರೈಕಾದಶಿನೀಶ್ರುತೌ। ತಸ್ಯಾಂಷಡಕ್ಷರೀ ತತ್ರಶಿವಇತ್ಯಕ್ಷರದ್ವಯಂ,, ಹೀಗೆಂಬ ಶಿವಪುರಾಣವಚನದಿಂ ಶಿವ ಎಂಬೆರಡಕ್ಷರಂ ಋಕ್ಸಾಮಸಂಗ್ರಹರೂಪಮಾದ ಆಕಾರದಿಂಯಜುರ್ವೇದ ಸಂಗ್ರಹರೂಪವಾದ ಶಕಾರದಿಂ ವೇದಾಂಗ ಸಂಗ್ರಹರೂಪಮಾದ ವಕಾರದಿಂ ಶೋಭಿಸುತ್ತಿಹ ಕಾರಣದಿಂ ವೇದಸಾರಮಾದಂಥಾದ್ದು ಅಂಥಾಶಿವನಿಂದ ಯುಕ್ತಮಾದಕಾರಣದಿಂ ಪಂಚಾಕ್ಷರ ಮಂತ್ರವೇ ಶ್ರೇಷ್ಠವೆಂಬುವದು ತಾತ್ಪರ್ಯಂ.

ಮೂ ‖ ಜ್ಞಾತೇಷಡಕ್ಷರೀಮಂತ್ರೆಕಿಂವಾಮಂತ್ರಾಂತರೈಃಫಲಂ ।
ಜ್ಞಾತೆಶಿವೆಜಗನ್ಮೂಲೆಕಿಂಫಲಂದೇವತಾಂತರೈಃ ।

“ಸರ್ವಮಿದಂಬ್ರಹ್ಮವಿಷ್ಣುರುದ್ರೇಂದ್ರಾಸ್ತೇಸಂಪ್ರಸೂಯಂತೆ ,,
ಎಂಬ ಶ್ರುತಿಯಿಂ ಶಿವನು ಬ್ರಹ್ಮ ವಿಷ್ಣು ಮೊದಲಾದ ಸಕಲ ಜಗನ್ಮೂಲ

ಕಾರಣವೆಂದು ತಿಳಿಯಲಾಗಿ ದೇವತಾಂತರದಿಂದಲೂ ಈ ಪ್ರಕಾರದಿಂ ಷಡಕ್ಷರೀಮಂತ್ರ್ರ ವೇದಾಗಮಸಾರವೆಂದು ತಿಳಿಯಲಾಗಿ ಮಂತ್ರಾಂತದಿಂದಲೂ ಏನುಫಲವು.

ಮೂ ॥ ಸಪ್ತಕೋಟಿಷುಮಂತ್ರೇಷುಮಂತ್ರಃಪಂಚಾಕ್ಷರೋಮಹಾನ್ ।
ಬ್ರಹ್ಮವಿಷ್ಣ್ವಾದಿದೇವೇಷುಯಥಾಶಂಭುರ್ಮಹತ್ತರಃ ॥

ಟೀ ॥ ಸರ್ವಮನ್ಯತ್ಪರಿತ್ಯಜ್ಯಹೇಯಾನ್ವಿಷ್ಣ್ವಾದಿಕಾಂತ್ಸುರಾನ್ । ಶಿವಏವಸದಾಧ್ಯೇಯಸ್ಸರ್ವಸಂಸಾರನಾಶನಃ,, ಹೀಗೆಂಬ ಪೈಪ್ಪಲಾದ ಶ್ರುತಿಯಿಂದಲೂ,, ಅಜಾತಇತ್ಯೇವಕಶ್ಚಿದ್ಭೀರುಃಪ್ರಪದ್ಯತೇರುದ್ರಯತ್ತೇದಕ್ಷಿಣಂ ಮುಖಂತೇನಮಾಂಪಾಹಿನಿತ್ಯಂ,, ಹೀಗೆಂಬಶ್ವೇತಾಶ್ವತರ ಶ್ರುತಿಯಿಂದಲೂ ಅಜಾತನಾಗಿ ಮುಮುಕ್ಷೂಪಾಸ್ಯನಾದುದರಿಂ ಶಿವನು ಹ್ಯಾಗೆಬ್ರಹ್ಮವಿಷ್ಣ್ವಾದಿದೇವತೆಗಳಲ್ಲಿ ಶ್ರೇಷ್ಠನೋ_ಹಾಗೆ ಸಪ್ತಕೋಟಿ ಮಹಾ ಮಂತ್ರಂಗಳಲ್ಲಿ ವೇದಾಗಮಸಾರವಪ್ಪುದರಿಂ ಪ್ರಣವ ಸಹಿತವಾದ ಪಂಚಾಕ್ಷರೀ ಮಂತ್ರವೇ ಶ್ರೇಷ್ಠವು.

ಮೂ ॥ ಅಶೇಷಾಜಗತಾಂಹೇತುಃಪರಮಾತ್ಮಾಮಹೇಶ್ವರಃ ।
ತಸ್ಯವಾಚಕಮಂತ್ರೋಯಂಸರ್ವಮಂತ್ರೈಕಕಾರಣಂ ॥

ಟೀ ॥ ಬ್ರಹ್ಮ ವಿಷ್ಣ್ವಾದಿ ಸಕಲ ಜಗನ್ಮೂಲವಾದುದರಿಂ ಶಿವನು ಶ್ರೇಷ್ಠನಾಗಲಿ ; ಷಡಕ್ಷರೀಮಂತ್ರವೆಂತುಸರ್ವೋತ್ಕೃಷ್ಟವೆಂದರೆ_ ಪರಮಾತ್ಮನಾದ ಶಿವನು ಸಕಲ ವಿಶ್ವಕ್ಕೂ ಹ್ಯಾಗೆ ಕಾರಣನೋ ಹಾಗೆ ಆ ಪರಶಿವನನ್ನು ಹೇಳುವಂಥಾ ಈ ಪಂಚಾಕ್ಷರೀ ಮಂತ್ರವು ಸಕಲ ಮಂತ್ರಕ್ಕೂ ಕಾರಣವು.

ಮೂ ॥ ಅಥಾದ್ಯಾಸ್ತಿಥಯಸ್ಸರ್ವೇಸ್ವರಾಬಿಂದ್ವವಸಾನಕಾಃ ।
ತದಂತಃಕಾಲಯೋಗನಸೋಮಸೂರ್ಯಾಪ್ರಕೀರ್ತಿತಾ
ಪೃಥಿವ್ಯಾದೀನಿತತ್ವಾನಿಪುರುಷಾಂತಾನಿಪಂಚಸು ॥
ಕ್ರಮಾತ್ಕಾದಿಷುವರ್ಗೇಷುಮಕಾರಾಂತೇಷುಸುವ್ರತೇ ।
ವಾಯ್ವಗ್ನಿಸಲಿಲೇಂದ್ರಾಣಾಂಧಾರಣಾನಾಂಚತುಷ್ಟಯಂ ।
ತದೂರ್ಧ್ವೇಶಾದಿವಿಖ್ಯಾತಂಪುರಸ್ತಾದ್ಬ್ರಹ್ಮಪಂಚಕಂ ।
ಅಮೂಲಾತ್ತತ್ಕ್ರಮಾದ್ವೇಜ್ಞಯಾಕ್ಷಾಂತಾಸ್ಸೃಷ್ಟಿರುದಾಹೃತಾ
ಸರ್ವೇಷಾಂಚೈವಮಂತ್ರಾಣಾಂವಿದ್ಯಾನಾಂಚಯುಶಸ್ವಿನೀ ।
ಇಯಂಯೋನಿಸ್ಸಮಾಖ್ಯಾತಾಸರ್ವತಂತ್ರೇಷುಸರ್ವದಾ ॥

ಟೀ ॥ ಈ ಮಂತ್ರವು ಸಾಕ್ಷಾತ್ಪ್ರಪಂಚಾತ್ಮಕವಾದ ಪರಶಿವ
ನಿಗೆ ಪ್ರತಿಪಾದಕವು. ಈ ಮಂತ್ರಕ್ಕೆ ಪರಶಿವನೇಪ್ರತಿಪಾದ್ಯನಾದವನು.
ಈ ಮಂತ್ರವು ಅಂಥಾ ಪರಮೇಶ್ವರನಾಮಪ್ರತಿಪಾದಕವಾದುದರಿಂ
ಈ ಮಂತ್ರದಿಂದಲೇ ಅವಾಙ್ಮನಸಗೋಚರವಾದ ಪರಮೇಶ್ವರನ ಸ್ವ
ರೂಪವು ಪ್ರಕಾಶಿಸಲ್ಪಡುವದು. ಮಂತ್ರಂಗಳಿಗೆಲ್ಲ ಯಜನೀಯದೇವತಾ
ಪ್ರಕಾಶತ್ವವು ಸ್ವಭಾವಸಿದ್ಧವಾಗಿಯೇ ಇಹುದಾಗಿ ಈ ಮಂತ್ರವಿಲ್ಲದಿ
ದ್ದರೆ ಅಂಥಾ ಪರಮೇಶ್ವರನ ಸ್ಫೂರ್ತಿಯೇ ಯಿಲ್ಲದೆ ಪೋಪುದು. ಅದು
ದರಿಂ ಸಕಲ ತತ್ವಗಳಿಗೂ ಉಪಾದಾನಕಾರಣಭೂತನಾದ ಸರ್ವಾತ್ಮಕ
ನಾದ ಪರಮಾತ್ಮನಿಗೆ ಪ್ರತಿಪಾದಕವಾದ ಈ ಮಂತ್ರಕ್ಕೆ ತದ್ವಾಚಕ
ವಾದ ಪಂಚಾಶದ್ವರ್ಣಮಯತ್ವವು ಯುಕ್ತವೆಂಬುದರಿಂ ಶಿವನು ಸಕಲ
ಯಂತ್ರಗಳಿಗೂ ಮೂಲಕಾರಣನಾದಂತೆ ತತ್ಪ್ರತಿಪಾದಕವಾದ ಈ ಮಂ
ತ್ರವು ಸಕಲ ಮಂತ್ರಗಳಿಗೂ ಮೂಲಕಾರಣವಾದುದು.

ಮೂ ॥ ಪಂಚಾಶನ್ನಿಜದೇಹಜಾಕ್ಷರಭವೈರ್ನಾನಾವಿಧೈರ್ಧಾ
ತ್ರುಭಿರ್ಬಹ್ವರ್ಥೈಃಪದವಾಕ್ಯಮಾನಜನಕೈರರ್ಥಾವಿ
ನಾಭಾವಿತೈಃ ॥ ಸಾಭಿಪ್ರಾಯಸದರ್ಥಕರ್ಮಫಲದಾನಂ
ದೈರನಂತೈರಿದಂವಿಶ್ವವ್ಯಾಪ್ಯಚಿದಾತ್ಮನಾಹಮಹಮಿತ್ಯು
ಜ್ಜೃಂಭಸೇಮಾತೃಕೇ ॥ ಪಂಚಾಶದ್ವರ್ಣಮಾಲಾಬಹುವಿಧನಿ
ನದೋಚ್ಚಾರಣಾತ್ತತ್ವಜಾಲವ್ಯಕ್ತಿವ್ಯಾಪಾರಸತ್ತಾನಿರಿಶ
ಗುರುಮುಖಾಮ್ನಾಯವಿದ್ಯಾಸ್ವರೂಪಾ॥ಧ್ಯಾತ್ವಾದ್ಯುತ್ಪತ್ತಿ
ಪೂರ್ವಂಶ್ರುತಿಮುಖವಿವಿಧಾನೇಕಸಿದ್ಧಾಂತವಿದ್ಯಾನಾನಾ
ಭಾಷಾಃಕ್ರಿಯಾಭೀಪ್ರಕಟಯತಿಯತಸ್ಸೈವತೆಸಾಂಗವೇದಃ ॥

ಟೀ ॥ ಶಿವಶಬ್ದದಲ್ಲಿ ಇರುವ ಶಕಾರವು ಬ್ರಹ್ಮಾದಿಪಂಚಬ್ರಹ್ಮ
ವಾಚಕವು; ವಕಾರವು ಮಾಯಾ ತತ್ವಕ್ಕೆ ವಾಚಕವು. ಆ ಮಾಯಾ ತತ್ವ
ದಲ್ಲಿ ಸ್ವಕಾರ್ಯರೂಪವಾದ ಕಲಾದಿ ಕ್ಷಿತಿಪರ್ಯಂತತ್ರಿಂಶತ್ತತ್ವಗಳೂ
ಅಂತರ್ಭೂತವಾದುದರಿಂ ಶಕಾರ ವಕಾರಗಳೆರಡು ಕೂಡಿ ಷಟ್ತ್ರಿಂಶತ್ತ
ತ್ವಗಳಿಗೆ ವಾಚಕಗಳಾದವು. ಆ ವಕಾರವೃತ್ತಿಯಾದ ಅಕಾರವು ಶಿವತತ್ವ
ಕಲಾರೂಪಷೋಡಶಸ್ವರಾತ್ಮಕವಾದದ್ದು. ಶಕಾರೋತ್ತರ ಶ್ರೂಯ
ಮಾಣವಾದ ಇಕಾರವು ಇಛ್ಛಾಶಕ್ತಿವಾಚಕವು. ಆದುದರಿಂ ಶಿವಶಬ್ದದ
ಲ್ಲಿಯು ಸಮಸ್ತ ಶಬ್ದಮಯ ಪ್ರಪಂಚವು. ಅದಕ್ಕುಪಾದಾನಕಾರಣಭೂತ

ಮಾದ ಪಂಚಾಶದ್ವರ್ಣಮಯವಾದ ಮಾತೃಕಾಸ್ವರೂಪವೂ ಷಟ್ತ್ರಿಂಶತ್ತ
ತ್ವಮಯವಾದ ಸಮಸ್ತ ಅರ್ಥಮಯ ಪ್ರಪಂಚವೂ ಅಂತರ್ಭೂ
ತವಾಗಿರುವದರಿಂದೀ ಶಿವಶಬ್ದವೇ ಸಮಸ್ತ ಯಂತ್ರಮಂತ್ರಗಳಿಗೂ ಮೂ
ಲಕಾರಣವೆಂದು ತಿಳಿಯತಕ್ಕದ್ದು. ಮಾತೃಕೆಯು ಸಮಸ್ತ ಶಬ್ದಮಯ
ಪ್ರಪಂಚಕ್ಕೂ ಮೂಲಕಾರಣವು.

ಮೂ ॥ ನಮಶ್ಶಬ್ದಂವದೇತ್ಪೂರ್ವಂಶಿವಾಯೇತಿತತಃಪರಂ ।
ಮಂತ್ರಃಪಂಚಾಕ್ಷರೋಹ್ಯೇಷಸರ್ವಶ್ರುತಿಶಿರೋಗತಃ ॥

ಟೀ ॥ ಹಾಂಗಾದೊಡೀಮಂತ್ರಕ್ಕೆ ಎರಡಕ್ಷರವೇ ಯುಕ್ತವು ಪಂಚಾ
ಕ್ಷರವೇತಕ್ಕೆಂದರೆ ನಮಶ್ಶಬ್ದಮಂ ಪ್ರಥಮದಲ್ಲುಚ್ಚರಿಸಿ ಆ ಬಳಿಕ ಶಿವಾಯ
ಎಂದುಚ್ಚರಿಸುವದು ಈ ಪ್ರಕಾರದಿಂ ಪಂಚಾಕ್ಷರೀ ಮಂತ್ರವು ಸಕಲ
ಶ್ರುತಿ ಮಸ್ತಕದಲ್ಲಿಯೂ ಪ್ರಕಾಶಿಸುತ್ತಿಹುದು. ಇಲ್ಲಿ ನಮಸ್ಕಾರ ಶಬ್ದ
ದಿಂ ಜೀವತ್ವವು ಶಿವಶಬ್ದದಿಂ ಶಿವತ್ವವು. ಆಯಯಂಬುದರಿಂ ಅಯಗತೌ
ಎಂಬ ಧಾತು ಗತಿಯಿಂದ ಶಿವಜೀವರಿಗೈಕ್ಯವು ಪ್ರಕಾಶಿಸುತ್ತಿಹುದು.
ಶಿವಜೀವೈಕ್ಯ ಬೋಧನಾರ್ಥವಾಗಿ ಪಂಚಾಕ್ಷರಂಗಳು ಪ್ರಯೋಗಿಸಲ್ಪ
ಟ್ಟವೆಂಬುದು ತಾತ್ಪರ್ಯವು.

ಮೂ ॥ ಆದಿತಃಪರಿಶುದ್ಧತ್ವಂಮಲತ್ರಯವಿಯೋಗತಃ ।
ಶಿವಇತ್ಯುಚ್ಯತೇಶಂಭುಶ್ಚಿದಾನಂದಘನಃಪ್ರಭುಃ ॥

ಟೀ ॥ ಬಳಿಕ ಸಚ್ಚಿದಾನಂದದ ಘಟ್ಟಿಯಾದ ಪರಬ್ರಹ್ಮಕ್ಕೆ ಶಿವ
ನೆಂಬ ಪೆಸರೆಂತು ಬಂತೆಂದರೆ_ಸಚ್ಚಿದಾನಂದ ದಘಟ್ಟಿಯಾದ ಸ್ವತಂತ್ರನಾ
ದ ಸುಖಭೋಕ್ತೃವಾಗಿ ಸುಖಪ್ರದನಾದ ಪರಮಾತ್ಮನು ಯಾವಕಾಲದ
ಲ್ಲಿಯೂ ಆಣವಾದಿ ಮಲತ್ರಯವಿಲ್ಲದೆ ನಿರ್ಮಲನಾದಕಾರಣದಿಂ ವಶಕಾಂ
ತೌ ಎಂಬ ಧಾತುಗತಿಯಿಂ ಸ್ವೇಚ್ಛಪ್ರಕಾಶರೂಪನಾದುದರಿಂ ಶಿವನೆಂದು
ಹೇಳಲ್ಪಡುವನು.

ಮೂ ॥ ಆಸ್ಪದತ್ವಾದಶೇಷಾಣಾಂಮಂಗಳಾನಾಂವಿಶೇಷತಃ ।
ಶಿವಶಬ್ದಾಭಿಧೇಯೋಹಿದೇವದೇವಸ್ತ್ರ್ಯಂಬಕಃ ॥

ಟೀ ॥ ಬಳಿಕ ಸಕಲ ಮಂಗಳವಾಸ ಭೂಮಿಯಪ್ಪುದರಿಂ ಬ್ರ
ಹ್ಮವು ಶಿವಶಬ್ದದಿಂದ ಪೇಳಿಸಿಕೊಂಬುದೇನಂದರೆ ಸೃಷ್ಟ್ಯಾದಿ ಕೃತ್ಯ
ಗಳಿಗೆ ಕಾರಣವಾದ ನೇತ್ರತ್ರಯಮುಳ್ಳಕಾರಣದಿಂದಲೇ ಬ್ರಹ್ಮಾದಿ ದೇ
ವತೆಗಳಿಗೂ ದೇವನಾದ ಪರಮಾತ್ಮನು ವಿಷ್ಣ್ವಾದಿಗಳಿಂ ವಿಶೇಷವಾ

ಗಿಸಕಲ ಮಂಗಳಗಳಿಗೂ ಆಶ್ರಯನಾದಕಾರಣದಿಂ ಶಿವಶಬ್ದದಿಂ ಹೇಳಲು ಯೋಗ್ಯನು.

ಮೂ ॥ ಶಿವಇತ್ಯಕ್ಷರದ್ವಂದ್ವಂಪರಬ್ರಹ್ಮಪ್ರಕಾಶಕಂ।
ಮುಖ್ಯವೃತ್ತ್ಯಾತದನ್ಯೇಷಾಂಶಬ್ದಾನಾಂಗೌಣವೃತ್ತಯಃ॥

ಟೀ ॥ ಬಳಿಕ ಪರಬ್ರಹ್ಮವಾಚಕವಾದ ಅನೇಕ ನಾಮಂಗಳಿರಲಾ ಶಿವಶಬ್ದದಿಂದಲೇ ಏನುಕಾರಣಂ ಬ್ರಹ್ಮವುಹೇಳಿಸಿಕೊಂಬುದೆಂದರೆ ಶಿವಎಂಬೆರಡಕ್ಷರಂ ಮುಖ್ಯ ವೃತ್ತಿಯಿಂ ಪರಬ್ರಹ್ಮ ಪರಮಪ್ರಕಾಶವು ಆ ಶಿವಶಬ್ದವೇ ಸ್ವವ್ಯತಿರಿಕ್ತವಾದ ಭವಾದಿ ಶಬ್ದಗಳಿಗೆ ಸಿಂಹೋಮಾಣವಕಃ ಎಂಬಂತೆ ಗುಣಯೋಗದಿಂ ಪರಬ್ರಹ್ಮ ಪ್ರಕಾಶಕತ್ವವನ್ನುಂಟು ಮಾಡುವದಾಗಿರುವದು.

ಮೂ ॥ ತಸ್ಮಾನ್ಮುಖ್ಯತರಂನಾಮಶಿವಇತ್ಯಕ್ಷರದ್ವಯಂ।
ಸಚ್ಚಿದಾನಂದರೂಪಸ್ಯಶಂಭೋರಮಿತತೇಜಸಃ॥
ಏತನ್ನಾಮಾವಲಂಬಿನಮಂತ್ರಃಪಂಚಾಕ್ಷರಸ್ಸ್ಮೃತಃ

ಟೀ ॥ ಅದುಕಾರಣವಾಗಿ ಶಿವಎಂಬೆರಡಕ್ಷರಂ ಸಚ್ಚಿದಾನಂದ ಸ್ವರೂಪನಾದ ಅಪರಿಮಿತ ಪ್ರಕಾಶರೂಪನಾದ ಪರಮಾತ್ಮನಿಗೆ ಮುಖ್ಯವಾದ ನಾಮವು ಈ ಎರಡಕ್ಷರವನಾಶ್ರಯಿಸಿದ ಕಾರಣದಿಂ ಪಂಚಾಕ್ಷರ ಮಂತ್ರವು ದೊಡ್ಡದೆಂದು ನೆನೆಯಲ್ಪಟ್ಟಿತು.

ಮೂ ॥ ಯಸ್ಮಾದತಸ್ಸದಾಜಪ್ಯೋಮೋಕ್ಷಕಾಂಕ್ಷಿಭಿರಾದರಾತ್।
ಯಥಾನಾದಿರ್ಮಹಾಂದೇವಸ್ಸಿದ್ಧಸ್ಸಂಸಾರಮೋಚಕಃ॥
ತಥಾಪಂಚಾಕ್ಷರೋಮಂತ್ರಸ್ಸಂಸಾರಕ್ಷಯಕಾರಕಃ॥

ಟೀ ॥ ಬಳಿಕೀ ಮಂತ್ರದಿಂದೇನುಮಾಡಬೇಕು ಇದರಿಂದೇನು ಫಲವೆಂಬಲ್ಲಿ ಯಾವ ಕಾರಣದಿಂ ಶಿವನಾಮಯುಕ್ತವಾದ ಪಂಚಾಕ್ಷರೀ ಮಂತ್ರವು ಅಧಿಕವೋ ಆಕಾರಣದಿಂ ಮೋಕ್ಷವಂ ಬಯಸುವ ಪುರುಷರಿಂಪ್ರೀತಿಯಿಂದೆಲ್ಲಾಗಳು ಜಪಿಸಲು ಯೋಗ್ಯವಾದಂಥಾದ್ದು. (ಅದೇತೆಂದೊಡೆ) ಅನಾದಿಯಾದ ಪರಶಿವನು (ಶಿವಏವಸದಾಧ್ಯೇಯಸ್ಸರ್ವಸಂಸಾರನಾಶನಃ) ಹೀಗೆಂಬ ಶ್ರುತಿಯಿಂ ಸಂಸಾರಪಾಶಮೋಚಕನು. ಹಾಗೆ ಪಂಚಾಕ್ಷರ ಮಂತ್ರವು. (ಅಶೇಷಪಾಪವಿಚ್ಛಿತ್ತ್ಯೈಶಿವಇತ್ಯಕ್ಷರದ್ವಯಂ। ಅಲಂನಮಸ್ಕ್ರಿಯಾಯುಕ್ತೋಮುಕ್ತಯೇಕಲ್ಪಿತೋಮನುಃ।)ಹೀಗೆಂಬ ಬ್ರಹ್ಮೋತ್ತರ ವಚನದಿಂ ಸಕಲ ಸಂಸಾರ ಪಾಶಕ್ಷಯಕಾರಕವೆಂದು ಪ್ರಸಿದ್ಧವು

ಮೂ ॥ ಪಂಚಭೂತಾನಿಸರ್ವಾಣಿಪಂಚತನ್ಮಾತ್ರಕಾನಿಚ ।
ಜ್ಞಾನೇಂದ್ರಿಯಾಣಿಪಂಚಾಪಿಪಂಚಕರ್ಮೇಂದ್ರಿಯಾಣಿಚ॥
ಪಂಚಬ್ರಹ್ಮಾಣಿಪಂಚಾಪಿಕೃತ್ಯಾನಿಸಹಕಾರಣೈಃ।
ಬೋಧ್ಯಾನಿಪಂಚಭಿರ್ವರ್ಣೈಃ ಪಂಚಾಕ್ಷರಮಹಾಮನೋಃ॥

ಟೀ॥ ಹಾಂಗಾದೊಡೀ ಮಂತ್ರವು ಶಿವನಂತೆ ಸಂಸಾರಕ್ಷಯಕಾರಕವಾದರೂ ಶಿವನಂತೆ ವಿಶ್ವಕಾರಣತ್ವವು ಇಧೆಯೋ ಎಂದರೆ ಪೃಥಿವ್ಯಾದಿ ಪಂಚಭೂತಂಗಳು ಗಂಧಾದಿ ಪಂಚತನ್ಮಾತ್ರೆಗಳು ಜ್ಞಾನಶಕ್ತಿಮಯವಾದ ಘ್ರಾಣಾದಿ ಪಂಚಜ್ಞಾನೇಂದ್ರಿಯಂಗಳು ಕ್ರಿಯಾಶಕ್ತಿಸ್ವರೂಪವಾದುಪಸ್ಥಾದಿ ಪಂಚಕರ್ಮೇಂದ್ರಿಯಂಗಳು. ಪಂಚಸಾದಾಖ್ಯಪಂಚಬ್ರಹ್ಮಗಳೆಂಬ ಪರ್ಯಾಯನಾಮವುಳ್ಳ ಆಚಾರಾದಿ ಪಂಚಲಿಂಗಂಗಳು ಭವಮೃಡಹರಾದಿ ಕಾರಣೇಶರುಗಳೊಡನೆ ಸೃಷ್ಟ್ಯಾದಿ ಪಂಚಕೃತ್ಯಂಗಳು ಪಂಚವಿಧವಾದ ಸಮಸ್ತವು ಪಂಚಾಕ್ಷರ ಮಂತ್ರದ ಪಂಚವರ್ಣಂಗಳಿಂ ಪ್ರಕಾಶಿಸಲ್ಪಡುವವು.

ಮೂ ॥ ಪಂಚಧಾಪಂಚಧಾಯಾನಿ ಪ್ರಸಿದ್ಧಾನಿವಿಶೇಷತಃ ।
ತಾನಿಸರ್ವಾಣಿವಸ್ತೂನಿಪಂಚಾಕ್ಷರಮಯಾನಿಹಿ ॥

ಟೀ ॥ ಪಂಚಶಕ್ತಿಪಂಚಾಂಗುಲಿವಚನಾದಾನಗಮನವಿಸರ್ಗಾನಂದರೂಪಕರ್ಮೇಂದ್ರಿಯಾರ್ಥಮನೋಬುದ್ಧ್ಯಹಂಕಾರಪ್ರಕೃತಿಪುರುಷವೊದಲಾಗಿ ಪಂಚ ಪ್ರಕಾರದಿಂ ವಿಶೇಷವಾಗಿ ಪ್ರಸಿದ್ಧವಾದವಾವುದುಂಟೋ ಅದೆಲ್ಲವು ಸ್ವರ್ಣಕುಂಡಲ ನ್ಯಾಯದಿಂ ಪಂಚಾಕ್ಷರ ಕಾರ್ಯಂಗಳಾಗಿ ಪಂಚಾಕ್ಷರಂಗಳಿಂ ತಿಳಿಯಲ್ಪಡುವವೆಂಬುದು ಹಿ ಶಬ್ದದಿಂ ಸೂಚಿಸಲ್ಪಟ್ಟಿತು. ವರ್ಣಂಗಳು ಶಕ್ತಿರೂಪವಾದುದರಿಂ ವಿಶ್ವವೆಲ್ಲಂ ತತ್ಕಾರ್ಯವೆಂಬುದು ಪ್ರಸಿದ್ಧವು.

ಮೂ ॥ ಓಂಕಾರಪೂರ್ವೋಮಂತ್ರೋಯಂಪಂಚಾಕ್ಷರಮಯಃಪರಃ
ಶೈವಾಗಮೇಷುವೇದೇಷುಷಡಕ್ಷರಇತಿಸ್ಮೃತಃ ॥
ಪ್ರಥಮಂತಾರಕಾರೂಪಂದ್ವಿತೀಯಂದಂಡಉಚ್ಯತೇ ।
ತೃತೀಯಂಕುಂಡಲಾಕಾರಂಚತುರ್ಥಂಚಾರ್ಧಚಂದ್ರಕಂ
ಪಂಚಮಂದರ್ಪಣಾಕಾರಂಷಷ್ಠಂಜ್ಯೋತಿಸ್ಸ್ವರೂಪಕಂ॥

ಟೀ ॥ ಹಾಂಗಾದೊಡೆ ಪಂಚಕೃತ್ಯಾಂತರ್ಗತವಾದ ಮೋಕ್ಷಂ ಪ್ರಣವಾಭ್ಯಾಸಸಾಧ್ಯವು ಆ ಪ್ರಣವವೀ ಪಂಚಾಕ್ಷರಿಯಲ್ಲಿ ಕಾಣದಕಾ

ರಣ ಅದೆಂತು ಘಟಿಪುದೆಂದರೆ.- ಹೇಳಿದ ಪ್ರಕಾರದಿಂ ಸರ್ವೋತ್ಕೃಷ್ಟ ವಾದ ಪಂಚಾಕ್ಷರಮಯವಾದ ಮಂತ್ರವು ಶ್ರೀರುದ್ರದಲ್ಲಿ ನಮಸ್ತ್ರಾಯಚ ಶಂಭವೇಚ ಎಂಬುದರಿಂದಲೂ ಈಶಾನಮಂತ್ರದ ತುದಿಯಲ್ಲಿ ಮೆ ಅಸ್ತುಸದಾಶಿವೋಂ ಯೆಂದು ಕೇಳುವದರಿಂದಲೂ ಓಂಕಾರಾತ್ಮ ತಯಾಭಾತಿಶಾಂತ್ಯತೀತಪರಶ್ಶಿವಃ ) ಹೀಂಗೆಂಬ ಶಿವಾಗಮೋಕ್ತಿಯಿಂದ ಲೂ ಹೀಗೆಂಬ ಪುರಾಣ ವಚನದಿಂದಲೂ ಶಿವಪ್ರಣವಗಳಿಗೆ ಅಭೇದವಾದ ಕಾರಣ ಓಂಕಾರವೊದಲುಳ್ಳದಾಗಿ ಷಡಕ್ಷರವೆಂದು ನೆನೆಯಲ್ಪಟ್ಟಿತು.

„ನಕಾರಸ್ತ್ರರಕಾರಶ್ಚಮಕಾರೋದಂಡಉಚ್ಯತೇ। ಶಿಕಾರಃಕುಂಡಲಾಕಾರೋವಕಾರಶ್ಚಾರ್ಧಚಂದ್ರಕಃ ।ಯಕಾರೋದರ್ಪಣಾಕಾರಃಓಂಕಾರಃ ಪಂಚವರ್ಣರಾಟ್„ ಹೀಗೆಂಬ ಶಿವಾಗಮವಚನದದೆಸೆಯಿಂದ (ಯೋವೈರುದ್ರಸ್ಸಭಗವಾನ್ ಎಂಬುದುಮೊದಲಾಗಿಯ ಓಂಕಾರಸ್ಸಪ್ರಣವೋಯಃಪ್ರಣವಸ್ಸರ್ವವ್ಯಾಪೀಯಸ್ಸರ್ವವ್ಯಾಪಿಸೋನಂತೋಯೋನಂತಸ್ತತ್ತಾರಂಯತ್ತಾರಂತತ್ಸೂಕ್ಷ್ಮಂಯತ್ಸೂಕ್ಷ್ಮಂತಚ್ಛುಕ್ಲಂಯಚ್ಛುಕ್ಲಂತದ್ವೈದ್ಯುತಂಯದ್ವೈದ್ಯುತಂತತ್ಪರಂಬ್ರಹ್ಮಸಏಕಸ್ಸಏಕೋರುದ್ರಸ್ಸಈಶಾನಸ್ಸಭಗವಾಂತ್ಸಮಹೇಶ್ವರಸ್ಸಮಹಾದೇವಃ)ಹೀಗೆಂಬಅಥರ್ವಶಿರಶ್ಶ್ರುತ್ಯನುಸಾರವಾಗಿ ಮಹಾಮಂತ್ರವಾದ ಪಂಚಾಕ್ಷರ ಮಂತ್ರಕ್ಕೆ ಆದಿಯಾದ ಪ್ರಣವದಿಂ ಕೇವಲ ಸಚ್ಚಿದಾನಂದಾತ್ಮಕನಾದಶಿವನು ತಿಳಿಹಲ್ಪಡುವನು.

ಅವ. ಬಳಿಕ ಶಿವನು ಪ್ರಣವದಿಂದಲ್ಲದೆ ಮತ್ತೇತರಿಂದಲೂ ಪ್ರಕಾಶಿಸುವದಿಲ್ಲವೋಎಂದರೆಹೇಳುತ್ತೇನೆ.

ಮೂ ॥ ಮಂತ್ರನ್ಯಾಸಾದಿಭೂತೇನಪ್ರಣವೇನಮಹಾಮುನೇ॥
ಪ್ರಬೋಧ್ಯತೇಮಹಾದೇವಃಕೇವಲಚ್ಚಿತ್ಸುಖಾತ್ಮಕಃ॥

ಟೀ ॥ ( ಶಿವಂಪರಾತ್ಪರಂಸೂಕ್ಷ್ಮಂನಿತ್ಯಂಸರ್ವಗಮವ್ಯಯಂ ) ಎಂಬ ಶಿವಾಗಮ ವಚನದ ದೆಸೆಯಿಂದಲೂ ( ಶಿವಾಖ್ಯಂಪರಮಾನಂದಂಸಚ್ಚಿದಾನಂದಲಕ್ಷಣಂ )ಎಂಬುವದರಿಂದಲೂ (ಏಕಮೇವಾದ್ವಿತೀಯಂ)ಎಂಬ ಶ್ರುತಿಯ ದೆಸೆಯಿಂದಲೂ ದ್ವಿತೀಯಶೂನ್ಯನಾಗಿ ನೇಹನಾನಾಸ್ತಿಕಿಂಚನ ಎಂಬ ಶ್ರುತಿಯಿಂದೆರಡಿಲ್ಲದಕಾರಣದಿಂ ಪ್ರಪಂಚರಹಿತವಾದ ಸಚ್ಚಿದಾನಂದ ಸ್ವರೂಪವಾದ ಶಿವನೆಂಬ ಪೆಸರುಳ್ಳ ಪರಬ್ರಹ್ಮವು ಪ್ರಣವವೆಂಬೊಂದಕ್ಷರದಿಂದಲೇಪ್ರಕಾಶಿಸುತ್ತಿಹುದು. ಅಹೆಂತೆಂದೊಡೆ ಆ ಪ್ರಣವವು ಸಚ್ಚಿದಾನಂದ ಸ್ವರೂಪವಾದ ಅಕಾರೋಕಾರಮಕಾರಮಯವಾಗಿರುವದರಿಂ

ವೆಂಬುದು ತಾತ್ಪರ್ಯವು. ಮತ್ತಂ ಈ ಪಂಚಾಕ್ಷರಂಗಳೆ ಆಚಾರಗುರುಶಿವಚರಪ್ರಸಾದಲಿಂಗ ಬೀಜಾಕ್ಷರಂಗಳು. ಪ್ರಣವವೇ ಮಹಾಲಿಂಗಬೀಜವು ಈ ಪ್ರಕಾರಂ ಬೀಜವೃಕ್ಷನ್ಯಾಯದಿಂದಿರುವಪ್ರಣವ ಪಂಚಾಕ್ಷರವೇ ಷಟ್ಸ್ಥಲಬೀಜವೆಂಬುದು ರಹಸ್ಯಾರ್ಥವು.

೫೮. ಬಳಿಕೀಲಿಂಗಾಂಗಯೋಗಷಟ್ಸ್ಥಲಯೋಗಕಾರಣವಾದ ಪ್ರಣವಕ್ಕೆ ಸಚ್ಚಿದಾನಂದಸ್ವರೂಪ ಪರಬ್ರಹ್ಮಪ್ರಕಾಶಕತ್ವವಾಗಲಿ ನಿಷ್ಪ್ರಪಂಚಬ್ರಹ್ಮಪ್ರತಿಪಾದಕತ್ವವೆಂತೆನೆ

ಮೂ ॥ ಪ್ರಣವೇನೈಕವರ್ಣೇನಪರಬ್ರಹ್ಮಪ್ರಕಾಶ್ಯತೇ।
ಅದ್ವಿತೀಯಂಪರಾನಂದಂಶಿವಾಖ್ಯಂನಿಷ್ಪ್ರಪಂಚಕಂ ॥

ಟೀ ॥ ಪರಮಾತ್ಮ ಮಂತ್ರವು ಸೋಹಮೆಂಬ ಭೂತವರ್ತಮಾನಕಾಲಾವಗಾಹಿಯಾದ ಪ್ರತ್ಯಭಿಜ್ಞಾನರೂಪವಾದಂಥಾದ್ದೆಂದು. ಯೊಸಾವಸೌಪುರುಷಸ್ಸೋಹಂ) ಎಂಬ ಶ್ರುತಿಗುರುಸ್ವಾನುಭವಗಳಿಂತಿಳಿಯತಕ್ಕದ್ದು. ಆ ಸೋಹಂ ಮಂತ್ರವು ಭೇದಘಟಿತವಾದಕಾರಣದಿಂ ಕೇವಲಕುಂಭಕದಿಂ ಸಕಾರ ಹಕಾರಗಳಿಗೆ ಲೋಪವಾಗಲಾಗಿ ನಿತ್ಯವಾದ ಓಂ ಎಂ ಬೇಕಾಕ್ಷರ ಮಂತ್ರವೇ ಪ್ರಕಾಶಿಸುತ್ತಿಹುದು. ಅಲ್ಲಿ ಸಕಾರವು ಚಂದ್ರಬೀಜವಪ್ಪುದರಿಂ ವೇದ್ಯಮಯವು ಹಕಾರಂ ಸೂರ್ಯಬೀಜವಪ್ಪುದರಿಂ ವೇದನಪ್ರಕಾಶಾತ್ಮಕ ವೃತ್ತಿಜ್ಞಾನಮಯವು. ಆ ಎರಡೂ ಲುಪ್ತಮಾಗಲಾಗಿ ವದ್ಯವೇದನ ಶೂನ್ಯವಾದ ಕೇವಲ ವೇದಕಮಾತ್ರಪ್ರಕಾಶಮಾದುದ್ದು ಓಂಕಾರವೆಂದು ಹೇಳಲ್ಪಟ್ಟಿತು. ಇದರಿಂ ಶ್ರುತ್ಯಾಗಮಪ್ರಸಿದ್ಧವಾದ ಶಿವಜೀವೈಕ್ಯವೆಂಬ ಲಿಂಗಾಂಗ ಸಾಮರಸ್ಯರೂಪಪರಮಮುಕ್ತಿಸೂಚಿಸಲ್ಪಟ್ಟಿತೆಂದನು ಸಂಧಾನಿಸುವದೆಂದು ತಾತ್ಪರ್ಯವು.

ಮೂ ॥ ಪರಮಾತ್ಮಮನುರ್ಜ್ಞೇಯಸ್ಸೋಹಂರೂಪಸ್ಸನಾತನಃ।
ಜಾಯತೆಹಂಸಯೋರ್ಲೋಪಾದೋಮಿತ್ಯೇಕಾಕ್ಷರೋಮನುಃ ॥

ಟೀ ॥ ಇಲ್ಲಿ ಕೇವಲ ಸಚ್ಚಿದಾನಂದ ಬ್ರಹ್ಮವೇನಿಷ್ಕಳವೆನಿಸಿಕೊಂಬುದು. ಪ್ರಪಂಚ ವಿಶಿಷ್ಟ ಮಾದುದೇ ಸಕಲವೆನಿಸಿಕೊಂಬುದು. ಆ ನಿಷ್ಕಳಬ್ರಹ್ಮವು ಪ್ರಣವಮಂತ್ರದಿಂದಲೇ ಪ್ರಕಾಶಿಸಲ್ಪಡುತ್ತಿಹುದು. ಪಂಚಾಕ್ಷರಮಂತ್ರದಿಂ ಸರ್ವಂಖಲ್ವಿದಂ ಬ್ರಹ್ಮ ಎಂಬ ಶ್ರುತಿ ಪ್ರಮಾಣದಿಂ ಭೂಮ್ಯಾದಿ ಪಂಚಬ್ರಹ್ಮ ವಿಶಿಷ್ಟನಾದ ಶಿವಂ ಪ್ರಕಾಶಿಸಲ್ಪಡುವನು. ಸಕಲನಿಷ್ಕಳೋಭಯಾತ್ಮಕನಾಗಿ ಶಿವಂ ಪ್ರಣವ ಸಮೇತನಾದ ಷಡಕ್ಷರ ಮಂ

ತ್ರದಲ್ಲಿ ಪ್ರಕಾಶಿಸುತ್ತಿಹನು. ಯದ್ಯಪಿ ಇಲ್ಲಿ ಅಕಾರಂಬ್ರಹ್ಮಾಣಂನಾಭೌ ಉಕಾರಂ ವಿಷ್ಣುಂ ಹೃದಯೆ ಮಕಾರಂ ರುದ್ರಂ ಭ್ರೂಮಧ್ಯೆ ಓಂಕಾರಂ ಸರ್ವೇಶ್ವರಂ ದ್ವಾದಶಾಂತೆಎಂಬ ಶ್ರುತಿಯಿಂ ಪ್ರಣವವು ಸಪ್ರಪಂಚಬ್ರಹ್ಮ ಪ್ರಕಾಶವೇ(ಸರಿ)ಹಾಂಗಾದರೂ ವೀರ್ಯ ಸಂಸ್ಕಾರಾತ್ಮಕವಾದ ಬಿಂದುಸ್ವಂ ದಘಟಿತವಾಗಿರುವದರಿಂಸೂಕ್ಷ್ಮಪ್ರಪಂಚಮಯವಾದ ಪಂಚಾಕ್ಷರವೆಂಬ ವೃಕ್ಷಕ್ಕೆ ಪ್ರಣವವೆಂಬುದೇ ಬೀಜವು ಅದು ಹ್ಯಾಂಗೆಂದೊಡೆ ಆ ಪ್ರಣವವು ಆಕಾರ ಉಕಾರ ಮಕಾರ ಬಿಂದು ನಾದ ರೂಪವಾದ ಪಂಚಾವಯವಗಳುಳ್ಳದಾದಕಾರಣ ಆ ಪ್ರಣವದಲ್ಲಿ ಪಂಚಬ್ರಹ್ಮಾತ್ಮಕವಾಶಿವನುಪ್ರತಿಪಾದ್ಯನಾಗಿಹನು. ಆತನು ಸೂಕ್ಷ್ಮತನ್ಮಾತ್ರಗಳಿಗೆ ಆಶ್ರಯನಾದುದರಿಂ ನಿಷ್ಕಳನೆಂದು ವ್ಯವಹರಿಸಲ್ಪಡುವನು. ಬಳಿಕೀ ಪಂಚಾಕ್ಷರ ಮಂತ್ರಕ್ಕೆ ಪರ್ಯಾಯನಾಮಂಗಳೇನಂದರೆ-

ಮೂ ॥ ಮೂಲಂವಿದ್ಯಾಶಿವಶ್ಶೈವಂಸೂತ್ರಂಪಂಚಾಕ್ಷರಸ್ತಥಾ।
ಏತಾನಿನಾಮಧೆಯಾನಿಕೀರ್ತಿತಾನಿ ಮಹಾಮನೋಃ॥

ಟೀ ॥ ಪಂಚಾಕ್ಷರೀ ಮಂತ್ರಕ್ಕೆ ಮೂಲವೆಂದು ವಿದ್ಯೆಯೆಂದು ಶಿವನೆಂದು ಶೈವವೆಂದು ಸೂತ್ರವೆಂದು ಪಂಚಾಕ್ಷರೀ ಮಂತ್ರವೆಂದು ಈ ನಾಮಧೇಯಂಗಳು ವರ್ಣಸಂಖ್ಯೆಯಿಂ ಪೇಳಲ್ಪಡುವದು.

ಮೂ ॥ ಪಂಚಾಕ್ಷರೀಮಿಮಾಮಾಂವಿದ್ಯಾಂಪ್ರಣವೇನಷಡಕ್ಷರೀಂ॥
ಜಪೆತ್ಸಮಾಹಿತೊಭೂತ್ವಾಶಿವಪೂಜಾಪರಾಯಣಃ॥

ಟೀ ॥ ಬಳಿಕೀ ಪ್ರಕಾರದಿಂ ಪ್ರಣವಯುಕ್ತವಾಗಿ ಪಂಚಾಕ್ಷರಿಯಂ ಜಪಿಸುವದೆಂಬಲ್ಲಿ ಶಿವಪೂಜಾನಿಷ್ಠನಾದವನು ಏಕಾಗ್ರಚಿತ್ತನಾಗಿ ಪ್ರಣವದೊಡನೆ ಕೂಡಿ ಷಡಕ್ಷರಿಯಾದ ಈ ಪಂಚಾಕ್ಷರೀ ವಿದ್ಯೆಯಂಜಪಿಸಬೇಕು.

ಅವ. ಬಳಿಕಅದನೆಂತು ಜಪಿಸುವದೆಂದರೆ

ಮೂ । ಪ್ರಾಣಾಯಾಮತ್ರಯಂಕೃತ್ವಾಪ್ರಾಙ್ಮುಖೋಽಪಿವಾ ।
ಚಿಂತಯತ್ಹೃದಯಾಂಭೋಜೆದೇವಂತ್ರಿಯಂಬಕಂ
ಸರ್ವಾಲಂಕಾರಸಂಯುಕ್ತಂಸಾಂಬಂಚಂದ್ರಾರ್ಧಶೇಖರಂ ।
ಜಪೆದೇತಾಂಮಹಾವಿದ್ಯಾಂಶಿವರೂಪಾಮನನ್ಯಧೀಃ

ಟೀ ॥ ಶುದ್ಧ ಸ್ಥಲದಲ್ಲಿ ವ್ಯಾಘ್ರಾಜಿನ ಚಿತ್ರಕಂಬಳ ಮೊದಲಾದ ಆಸನದಲ್ಲಿ ಪದ್ಮಾಸನದಿಂ ಪೂರ್ವಾಭಿಮುಖನಾ ಯಾದರೂ ಉತ್ತರಾಭಿಮುಖವಾ

ಗಿಯಾದರೂ ಕೌಳ್ಯದರ್ ಭಸ್ಮರುದ್ರಾಕ್ಷಗಳಿಂದಲಂಕೃತನಾಗಿ (ಅಸಂಪೂ
ಜ್ಯಶಿವಂಸ್ತೋತ್ರಜಪಾತ್ಫಲಮುದೀರಿತಂ ॥ ಸಂಪೂಜ್ಯಚಶಿವಂಪಶ್ಚಾತ್ಫ
ಲಂವಕ್ತುಂನಶಕ್ಯತೆ)ಎಂಬಶಿವಾಗಮ ವಚನದಿಂ ನೈಮಿತ್ತಿಕ ಜಪಮಂಶಿವ
ಪೂಜಾನಂತರದಲ್ಲಿಯೇ ಮಾಡಲ್ತಕ್ಕುದಾ ಶಿವಪೂಜೆಯುಂಮಾಡಿಅನಂತರಪ್ರಾ
ಣಾಯಾಮತ್ರಯಮಂಮಾಡಿ ಷಡಂಗನ್ಯಾಸಂಗೈದು ದಿಗ್ಬಂಧವಂಬಲಿದುಹೃದ
ಯಕಮಲದಲ್ಲಿ ತ್ರಿಣೇತ್ರನಾದ ಮಂಡಲತ್ರಯ ಗುಣತ್ರಯವೇದತ್ರಯಾ
ದಿ ತ್ರಿವಿಧ ವಸ್ತುಕಾರಣನೇ ಭೂತನಾದ ದೇವದೇವನಾದ ಭವಾನೀಸಮೇ
ತನಾದ ಸರ್ವಾಲಂಕಾರಸಂಯುಕ್ತನಾದ ಚಂದ್ರಾರ್ಧಶೇಖರನಾದ ಶಿವ
ನಂ ಬೇರೊಂದು ಚಿಂತೆಯಿಲ್ಲದೆ ಚಿಂತಿಸುತ್ತಂ ಮಂಗಳಾತ್ಮಕವಾದ ಈ ಮ
ಹಾ ವಿದ್ಯೆಯಂ(ಸಹಸ್ರಂವಾತದರ್ಧಂವಾತದರ್ಧಂವಾಶತಾಷ್ಟಕಂ।ಅಷ್ಟೋ
ತ್ತರಸಹಸ್ರಂವಾಜಪಂಕುರ್ಯಾದತಂದ್ರಿತಃ) ಹೀಗೆಂಬ ಆಂಶುಮದಾಗಮ
ವಚನೋಕ್ತಪ್ರಕಾರದೊಳಗೆ ಒಂದು ಪ್ರಕಾರವನಾಶ್ರಯಿಸಿಸದ್ಗುರೂಪದಿ
ಷ್ಟಮಾರ್ಗದಿಂ ಮಾತೃಕಾಸಂಘಟಿತವಾಗಿ ಸಗರ್ಭಜಪವಂ ಮಾಡುವದು.

ಮೂ। ಜಪಸ್ತು ತ್ರಿವಿಧಃಪ್ರೋಕ್ತೋ ವಾಚಿಕೋಪಾಂಶುಮಾನಸಃ॥
ಶ್ರೂಯತೇಯಸ್ತುಪಾರ್ಶ್ವಸ್ಥೈರ್ಯಥಾವರ್ಣಸಮನ್ವಯಂ
ವಾಚಿಕಸ್ಸತುವಿಜ್ಞೇಯಸ್ಸರ್ವಪಾಪಪ್ರಭಂಜನಃ।
ಈಷತ್ಸ್ಪೃಷ್ಟಾಧರಪುಟಂಯೋಮಂದಮಭಿಧೀಯತೇ।
ಪಾರ್ಶ್ವಸ್ಥೈರಶ್ರುತಸ್ಸೋಯಮುಪಾಂಶುಃಪರಿಕೀರ್ತಿತಃ॥
ಅಸ್ಪೃಷ್ಟಾಧರಮಸ್ಪಂದಿಜಿಹ್ವಾಗ್ರಂಯೋಂತರಾತ್ಮನಾ।
ಭಾವ್ಯತೇವರ್ಣರೂಪೇಣಮಾನಸಇತಿಸ್ಮೃತಃ

ಟೀ। ಮಂತ್ರೋಚ್ಚಾರರೂಪಮಾದ ಜಪವು ವಾಚಿಕವೆಂದು ಉ
ಪಾಂಶುವೆಂದು ಮಾನಸವೆಂದು ಮೂರು ವಿಧವಾಗಿರುವದು. ಅಲ್ಲಿ ಆವುದಾ
ನೊಂದು ಮಂತ್ರೋಚ್ಚಾರಣೆಯು ವರ್ಣಸಂತಾನವಂ ಮೀರದೆ ಸಮೀಪ
ವರ್ತಿಗಳಿಂಕೇಳಲ್ಪಡುತ್ತಿಹುದೋಆ ಮಂತ್ರೋಚ್ಚಾರವುಮನೋವಚ
ನಕಾಯಜನ್ಯಮಾದ ಸಕಲ ಪಾಪಕ್ಷಯವಾದ ವಾಚಿಕಜಪವೆಂದುತಿಳಿಯಲು
ಯೋಗ್ಯಮಾದಂತಾದ್ದು. ಆವುವುದಾನೊಂಥ ಮಂತ್ರೋಚ್ಚಾರವುಒಂದಿ
ಷ್ಟಅಧರ ಪುಟವಂ ಮುಟ್ಟಿಪಾರ್ಶ್ವಸ್ಥರಿಂಕೇಳದಂಥಾದ್ದಾಗಿಮೆಲ್ಲನೆಮಾ
ಡಲ್ಪಡುತ್ತಿಹುದೋ ಆಉಚ್ಚಾರವುಉಪಾಂಶುಜಪವೆಂದು ಹೇಳಲ್ಪಡುವದ

ಅವು ದಾನೊಂದು ಮಂತ್ರೋಚ್ಚಾರಂ ತುಟಿಯುಂ ಮುಟ್ಟದೆವಿುಸುಕುತ್ತಿದ್ದ ಜಿಹ್ವಾಗ್ರವುಳ್ಳದ್ದಾಗುವ ಹಾಗೆ ಮಂತ್ರಾಕ್ಷರ ಸಂಯುಕ್ತವಾದ ಚಿತ್ತದಿಂ ಭಾವಿಸಲ್ಪಡುತ್ತಿಹುದೋ ಆ ಮಂತ್ರೋಚ್ಚಾರಂ ಮಾನಸ ಜಪವೆಂದು ನೆನೆಯಲ್ತಕ್ಕುದು.

ಮೂಲ ॥ ಯಾವಂತಃ ಕರ್ಮಯಜ್ಞಾಃ ಸ್ಯುರ್ದ್ವ್ಯಾವ್ರತದಾನತಪಾಂಸಿಚ।
ಸರ್ವೇತೇಜಪಯಜ್ಞಸ್ಯ ಕಲಾಂನಾರ್ಹಂತಿಷೋಡಶೀಂ॥

ಟೀ ॥ ಬಳಿಕೀಜಪಯಜ್ಞದ ಮಹತ್ವವೇನೆಂದರೆ- ಜ್ಯೋತಿಷ್ಟೋಮ ಮೊದಲಾದ ಎಷ್ಟು ಕರ್ಮಯಜ್ಞಂಗಳುಂಟೋ ಕೃಛ್ರಚಾಂದ್ರಾಯಣ ಮೊದಲಾದವ್ರತ, ಕನ್ಯಾದಾನ ಮೊದಲಾದ ದಾನ. ಅತ್ಯುಗ್ರ ತಪಸ್ಸುಗಳು ಯಾವವುಂಟೋ ಅವು ಜಪಯಜ್ಞದ ಹದಿನಾರು ಭಾಗದೊಳೊಂದುಭಾಗವಂ ಕುರಿತು ಸಮಾನವಾಗಲಾರವು.

ಮೂ । ಮಾಹಾತ್ಮ್ಯಂವಾಚಿಕಸ್ಯೈತಜ್ಜಪಯಜ್ಞಸ್ಯಕೀರ್ತಿತಂ।
ತಸ್ಮಾಚ್ಛತಗುಣೋಪಾಂಶುಸ್ಸಹಸ್ರೋಮಾನಸಸ್ಸ್ಮೃತಃ॥

ಟೀ । ಬಳಿಕೀ ಹೇಳಿದ ತ್ರಿವಿಧ ಜಪಕ್ಕೂ ಮಹಾತ್ಮ್ಯ ವೊಂದೇವಿಧವೋ ಇಲ್ಲದೆ ಬೇರೆಯೋ ಎಂದರೆ ವಾಚಿಕಜಪಯಜ್ಞಕ್ಕೆ ಆವುದಾನೊಂದು ಮಹತ್ವಂ ಹೇಳಲ್ಪಟ್ಟಿತೋ ಅದಕ್ಕಿಂದು ಪಾಂಶುಜಪ ನೂರುಮಡಿಮಹತ್ವಮುಳ್ಳದ್ದು. ಮಾನಸ ಜಪವು ಉಪಾಂಶು ಜಪಕ್ಕಿಂ ಸಹಸ್ರಮಡಿ ಮಹತ್ವನುಳ್ಳದ್ದೆಂದುನೆನೆಯಲ್ತಕ್ಕುದು,

ಮೂ । ವಾಚಿಕಾತ್ತದುಪಾಂಶೂಚ್ಚ ಜಪಾದಸ್ಯಮಹಾಮನೋಃ ।
ಮಾನಸೋಪಿಜಪ್ಯಶ್ರೇಷ್ಠೋಘೋರಸಂಸಾರನಾಶಕಃ॥

ಟೀ ॥ ಹಾಂಗಾದರೆ ಈಜಪಂಗಳೊಳಗೆ ಯಾವ ಜಪಂ ಮಾಡಲ್ತಕ್ಕುದು ಎಂದರೆ ಈ ಮಹಾ ಮಂತ್ರಕ್ಕೆ ವಾಚಿಕ ಜಪಕ್ಕಿಂತಲೂ ಪಾಂಶು ಜಪಕ್ಕಿಂತಲೂ ಮಾನಸಜಪವು.ಘೋರವಾದ ಸಂಸಾರಮಂ ಕೆಡಿಸುವಂಥಾದ್ದಾಗಿ ಶ್ರೇಷ್ಠವಾಗಿರುವದು.

ಮೂ । ಏತೇಷ್ವೇತೇನವಿಧಿನಾಯಥಾಭಾವಂಯಥಾಕ್ರಮಂ ।
ಜಪೇತ್ಪಂಚಾಕ್ಷರೀಮೇತಾಂವಿದ್ಯಾಂಪಾಶವಿಮುಕ್ತಯೆ ।

ಟೀ ॥ ಹಾಗಾದರೀವಾಚಿಕೋಪಾಂಶುಗಳಗೇನು ಗತಿಯೆಂದರೆ ಈ ವಾಚಿಕಾದಿ ಜಪಂಗಳ ವಿಷಯದಲ್ಲಿ ಈ ಹೇಳಿದ ಪ್ರಕಾರದಿಂ ಕ್ರಮ ತಪ್ಪದೆ ಕೂಡಿದ ಹಾಗೆ ಈ ಪಂಚಾಕ್ಷರೀ ವಿದ್ಯೆಯಂ ಮಲಮಾಯಾದಿ ಪಾ

ಶನಿವೃತ್ಯರ್ಥವಾಗಿ ಜಪಿಸುವದು.

ಮೂ ॥ ಅನೇನಮೂಲಮಂತ್ರೇಣಶಿವಲಿಂಗಂಪ್ರಪೂಜಯೇತ್।
ನಿತ್ಯಂನಿಯಮಸಂಪನ್ನಃಪ್ರಯತಾತ್ಮಾಶಿವಾತ್ಮಕಃ ।

ಟೀ ॥ ಬಳಿಕೀ ಮಂತ್ರದಿಂದಲೇ ಶಿವಲಿಂಗ ಪೂಜೆಯಂ ಮಾಡಬಹ ದೋ ಎಂದರೆ ಯಮನಿಯಮಾದಿ ಸಂಪನ್ನನಾಗಿ ಶುದ್ಧಾಂತಃಕರಣನಾಗಿ (ನಾರುದ್ರೋರುದ್ರಮರ್ಚಯೇತ್) ಹೀಗೆಂಬ ಪುರಾಣ ವಚನದತ್ತ ಣಂ ಶಿವೋಹಂಭಾವವುಳ್ಳವನಾಗಿ ಈ ಷಡಕ್ಷರೀ ಮಂತ್ರದಿಂ ಶಿವಲಿಂಗ ಮಂ ಕಾಲತ್ರಯದಲ್ಲಿಯೂ ವಿಭವದಿಂ ಪೂಜಿಸುವದು.

ಮೂ ॥ ಭಕ್ತ್ಯಾಷಡಕ್ಷರೇಣೈವಯಃಶಿವಂಸಕೃದರ್ಚಯೇತ್।
ಸೋಪಿಗಚ್ಛೇಚ್ಛಿವಸ್ಥಾನಂಮಂತ್ರಸ್ಯಾಸ್ಯೈವಗೌರವಾತ್ -

ಟೀ ॥ ಬಳಿಕೀ ಮೂಲಮಂತ್ರದಿಂ ಮಾಡಿದ ಶಿವಪೂಜೆಗೇನು ಫಲವೆಂದರೆ-ಯಾವಾತಂ ಭಕ್ತಿಯೊಡನೆ ಕೂಡಿದಾತನಾಗಿ ಶಿವನಂ ಪೂಜಿಸು ವನೋ ಆತನೀಮಂತ್ರ ಮಹತ್ವದಿಂ ಶಿವಸ್ಥಾನವನೈದುಹನು.

ಮೂ ॥ ಅಭಕ್ಷಾವಾಯುಭಕ್ಷಾಶ್ಚ ಯೇಚಾನ್ಯೇವ್ರತಕರ್ಷಿತಾಃ ।
ತೇಷಾಮೇತೈರ್ವ್ರತೈರ್ನಾಸ್ತಿಶಿವಲೋಕಸಮಾಗಮಃ ॥

ಬಳಿಕ ವ್ರತನಿಯಮಾದಿಗಳಿಂ ಸದ್ಗತಿಯುಂಟಪ್ಪುದರಿಂ ಶಿವಪೂಜೆ ಯಿಂದೇನೆನೆ ಜಲಾಹಾರಿಗಳು ನಾಯುದರಗೆಲೆಯುಗಳಂ ಭಕ್ಷಿಸುವವರು, ಕೃಛ್ರಚಾಂದ್ರಾಯಣಾದಿ ವ್ರತಗಳಿಂ ಕೃಶವಾಗಿರುವವರು ಯಾರುಂಟೋ ಅವರುಗಳಿಗೆ ಈ ವ್ರತಗಳಿಂ ಶಿವಲೋಕ ಪ್ರಾಪ್ತಿಯಿಲ್ಲ.

ಮೂ ॥ ✓ ತಸ್ಮಾತ್ತಪಾಂಸಿಯಜ್ಞಾಶ್ಚ ವ್ರತಾನಿನಿಯಮಾಸ್ತಥಾ ।
ಷಡಕ್ಷರಾರ್ಚನಸ್ಯೈತೇಕೋಟ್ಯಂಶನಾಪಿನೋಸಮಾಃ ।

ಟೀ ॥ ಅದುಕಾರಣವಾಗಿ ಪಂಚಾಗ್ನಿ ಮಧ್ಯ ಮೊದಲಾದ ತಪ ಸ್ಸು, ಅಶ್ವಮೇಧ ಮೊದಲಾದ ಯಜ್ಞಗಳು, ಕೃಛ್ರಚಾಂದ್ರಾಯಣ ಮೊ ದಲಾದ ವ್ರತನಿಯಮಂಗಳು, ಇವಿಷ್ಟು ಶಿವ ಷಡಕ್ಷರೀ ಮಂತ್ರಯುಕ್ತ ಮಾಗಿ ಮಾಡುವ ಶಿವಲಿಂಗಪೂಜೆಯ ಕೋಟ್ಯಂಶದೊಳಗೊಂದಂಶಕ್ಕೂ ಸಮಾನವಾಗಲಾರದು.

ಮೂ ॥ ಅಶುದ್ಧೋವಾವಿಶುದ್ಧೋವಾಸಕೃತ್ಪಂಚಾಕ್ಷರೇಣಯಃ ।
ಪೂಜಯೇತ್ಪತಿತೋವಾಪಿಮುಚ್ಯತೇನಾತ್ರಸಂಶಯಃ॥

ಟೀ ॥ ಬಳಿಕ ಶಿವಾರ್ಚನೆಯಲ್ಲಿ ನಿರ್ಮಲಜ್ಞಾನಿಯೇ ಅಧಿಕಾರಿ

ಯೆಂದು ಹೇಳಿದುದರಿಂ ಅಶುದ್ಧ ಬುದ್ಧಿಗಳಿಗೇ ಸುಗತಿಯೆಂದರೆ ದುಷ್ಟ ಹೃ
ದಯನಾಗಲಿ ನಿರ್ಮಲ ಚಿತ್ತನಾಗಲಿ ಪತಿತನಾಗಲಿ ಒಂದುಸರ್ತಿ ಪಂಚಾಕ್ಷ
ರೀ ಮಂತ್ರದಿಂ ಯಾವನು ಶಿವಲಿಂಗಮಂ ಪೂಜಿಸುವನೋ ಅವನು ಸಕಲ
ಪಾಪಗಳಿಂದಲೂ ಮುಕ್ತನಹನು.

ಮೂ। ಸಕೃದುಚ್ಚಾರಮಾತ್ರೇಣ ಪಂಚಾಕ್ಷರಮಹಾಮನೋಃ।
ಸರ್ವೇಷಾಮಪಿ ಜಂತೂನಾಂ ಸರ್ವಪಾಪಕ್ಷಯೋ ಭವೇತ್॥

ಟೀ। ಬಳಿಕ ಒಂದೇಸಾರಿ ಪಂಚಾಕ್ಷರ ಮಂತ್ರೋಚ್ಚಾರಣೆ
ಯಿಂ ಸಕಲರಿಗೂ ಸರ್ವಪಾಪಕ್ಷಯವಹುದೋ ಎಂದರೆ ಪಂಚಾಕ್ಷರ
ಮಹಾಮಂತ್ರವಂ ಒಂದುಭಾರಿ ಉಚ್ಚರಿಸಿದ ಮಾತ್ರದಿಂ ಸಕಲ ಪ್ರಾಣಿಗ
ಳಿಗೂ ಸಕಲ ಪಾಪಕ್ಷಯವಹುದು.

ಮೂ। ಅನ್ಯೇಪಿ ಬಹವೋ ಮಂತ್ರಾ ವಿದ್ಯಂತೇ ಸಕಲಾಗಮೇ।
ಭೂಯೋ ಭೂಯಸ್ಸಮಭ್ಯಾಸಾತ್ಪುರುಷಾರ್ಥಪ್ರದಾಯಿನಃ।
ಏಷ ಮಂತ್ರೋ ಮಹಾಶಕ್ತಿರೀಶ್ವರಪ್ರತಿಪಾದಕಃ॥
ಸಕೃದುಚ್ಚಾರಣಾದೇವ ಸರ್ವಸಿದ್ಧಿಪ್ರದಾಯಕಃ॥

ಟೀ। ಸಮಸ್ತವಾದ ಶಿವಾಗಮಂಗಳಲ್ಲಿ ಈ ಪಂಚಾಕ್ಷರೀ ಮಂ
ತ್ರ ವ್ಯತಿರಿಕ್ತವಾಗಿ ಬಹು ಮಂತ್ರಂಗಳು ಇವೆ. ಅವುಗಳು ಪುರಶ್ಚರಣದ
ಬಾಹುಳ್ಯದತ್ತಣಿಂ ಫಲವಂ ಕೊಡುವಂಥಾವು. ಈ ಪಂಚಾಕ್ಷರೀ ಮಂತ್ರ
ಮಾದರೋ ಮಹಾಸಾಮರ್ಥ್ಯವುಳ್ಳದ್ದು. ಈಶ್ವರನ ವಿಶ್ವಮಯ ವಿಶ್ವೋತ್ತೀ
ರ್ಣಸಾಮರಸ್ಯರೂಪವಾದ ಮಹತ್ವವ ಪ್ರತಿಪಾದಿಸುವಂಥಾದ್ದು ಅದು
ಕಾರಣವಾಗಿ ಒಂದುಸಾರಿ ಉಚ್ಚರಿಸಿದ ಮಾತ್ರದಿಂದಲೇ ಸಕಲ ಸಿದ್ಧಿಗ
ಳಂ ಕೊಡುವಂಥಾದ್ದೆಂಬುದರಿಂ ಸರ್ವಶ್ರೇಷ್ಠವು

ಮೂ। ಪಂಚಾಕ್ಷರೀಂ ಸಮುಚ್ಚಾರ್ಯ ಪುಷ್ಪಂ ಲಿಂಗೇ ವಿನಿಕ್ಷಿಪೇತ್।
ಯಸ್ತಸ್ಯ ವಾಜಪೇಯಾನಾಂ ಸಹಸ್ರಫಲಮಿಷ್ಯತೇ॥

ಟೀ॥ ಬಳಿಕ ಸಮಂತ್ರಕವಾದ ಶಿವಲಿಂಗಪೂಜಾ ಫಲವೇನಂದರೆ
ಯಾವನು ಪಂಚಾಕ್ಷರೀ ಮಂತ್ರವನ್ನುಚ್ಚರಿಸಿ ಲಿಂಗಮಸ್ತಕದಲ್ಲಿ ಕುಸು
ಮಸಮರ್ಪಣೆಯಂ ಮಾಡುವನೋ ಅವನಿಂ ಸಹಸ್ರ ವಾಜಪೇಯ ಯಾಗ
ಫಲಮುಚ್ಚವಿಷಯಮಾಗಿ ಮಾಡಲ್ಪಡುತ್ತಿಹುದು.

ಮೂ। ಅಗ್ನಿಹೋತ್ರಂ ತ್ರಯೋ ವೇದಾ ಯಜ್ಞಾಶ್ಚ ಬಹುದಕ್ಷಿಣಾಃ।
ಪಂಚಾಕ್ಷರಜಪಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ॥

ಟೀ ॥ ಬಳಿಕೀ ಪಂಚಾಕ್ಷರೀ ಜಪಫಲಮೇನೆಂದರೆ-ಸಾಯಂಪ್ರಾತಃಕಾಲದಲ್ಲಿ ಮಾಡುವ ಅಗ್ನಿಹೋತ್ರವು; ಋಗ್ಯಜುಸ್ಸಾಮಾಧ್ಯಯನಂಗಳು; ಜ್ಯೋತಿಷ್ಟೋಮಾದಿಯಾಗಂಗಳು. ಬಹು ದಕ್ಷಿಣೆಗಳುಳ್ಳ ಷೋಡಶಮಹಾದಾನಂಗಳು; ಇವಿಷ್ಟು ಪಂಚಾಕ್ಷರೀ ಜಪದ ಕೋಟ್ಯಂಶದಲ್ಲಿ ಒಂದಂಶಕ್ಕು ಸಮಾನವಾಗಂಥಾವಲ್ಲವು.

ಮೂ ॥ ಪುರಾಸಾನಂದಯೋಗೀಂದ್ರಶ್ಶಿವಜ್ಞಾನಪರಾಯಣಃ ।
ಪಂಚಾಕ್ಷರಂಸಮುಚ್ಚಾರ್ಯನರಕಾನುದತಾರಯುತ್ ॥

ಟೀ । ಬಳಿಕೀ ಪಂಚಾಕ್ಷರೀ ಮಂತ್ರಸಿದ್ಧಿಯುಳ್ಳ ಮಹಾಪುರುಷರ ಮಹತ್ವ ಪ್ರಕಾಶನಮುಖದಿಂದೀಮಂತ್ರಕ್ಕೆ ಆಧಿಕ್ಯಮಂ ಪ್ರತಿಪಾದಿಸುವಲ್ಲಿ ಪೂರ್ವದಲ್ಲಿ ಶಿವಜ್ಞಾನಯೋಗಸಿಷ್ಠನಾದ ಸಾನಂದಗಣೇಶ್ವರನು ಪಂಚಾಕ್ಷರ ಮಂತ್ರಮಂ ವಾಚಕರೂಪದಿಂದುಚ್ಚರಿಸಿ ಇಪ್ಪತ್ತೆಂಟುಕೋಟಿನಾಯಕ ನರಕದಲ್ಲಿದ್ದ ಪಾಪಿಗಳನ್ನು ದಾಟಿಸಿದನು.

ಮೂ । ಸಿದ್ಧ್ಯಾಪಂಚಾಕ್ಷರಸ್ಯಾಸ್ಯಶತಾನಂದಃಪುರಾಮುನಿಃ ।
ನರಕಂಸ್ವರ್ಗಮಕರೋತ್ಸಂಗಿರಸ್ಯಾಪಿಪಾಪಿನಃ ॥

ಟೀ ॥ ಮತ್ತಂ ಪೂರ್ವದಲ್ಲಿ ಶತಾನಂದನೆಂಬ ಮುನೀಶ್ವರನು ಈ ಪಂಚಾಕ್ಷರ ಮಂತ್ರ ಜಪಸಿದ್ಧಿಯಿಂ ಪಾಪಿಷ್ಠನಾದ ಸಂಗಿರನಿಗೆ ನರಕಲೋಕಮಂ ಸ್ವರ್ಗನನ್ನಾಗಿ ಮಾಡಿದನು.

ಮೂ । ಉಪಮನ್ಯುಃಪುರಾಯೋಗೀಮಂತ್ರೇಣಾನೇನಸಿದ್ಧವಾನ್ ।
ಲಬ್ಧವಾನ್ಪರಮೇಶಾನಾಚ್ಛಿವಶಾಸ್ತ್ರಪ್ರವಕ್ತೃತಾಂ ॥

ಟೀ । ಮತ್ತಂ ಪೂರ್ವದಲ್ಲಿ ಉಪಮನ್ಯುವೆಂಬ ಯೋಗೀಶ್ವರನೀಮಂತ್ರಜಪದಿಂ ಸಿದ್ಧಿಯುಳ್ಳವನಾಗಿ ಶ್ರೀಪರಮೇಶ್ವರನ ಅನುಗ್ರಹದ ದೆಸೆಯಿಂ ಶೈವಶಾಸ್ತ್ರದಲ್ಲಿ ಆಚಾರ್ಯತ್ವಮಂ ಪಡೆದನು.

ಮೂ ॥ ವಶಿಷ್ಠವಾಮದೇವಾದ್ಯಾಮುನಯೋಮುಕ್ತಕಿಲ್ಬಿಷಾಃ ।
ಮಂತ್ರೇಣಾನೇನಸಂಸಿದ್ಧಾಮಹಾತೇಜಸ್ವಿನೋಭವನ್ ॥

ಟೀ ॥ ಬಿಡಲ್ಪಟ್ಟ ಪಾಪಕರ್ಮಗಳುಳ್ಳ ವಸಿಷ್ಠ ವಾಮದೇವ ಮೊದಲಾದ ಮುನಿಗಳು ಈ ಪಂಚಾಕ್ಷರ ಮಂತ್ರದಿಂ ಸಿದ್ಧರಾದವರಾಗಿ ಶಾಪಾನುಗ್ರಹ ಸಮರ್ಥರಾದರು.

ಅವ. ಬ್ರಹ್ಮಾದಿ ದೇವತೆಗಳು ಈ ಮಂತ್ರದಿಂದಲೇ ಸೃಷ್ಟ್ಯಾದಿ ಕೃತ್ಯಂಗಳಿಗಧಿಕಾರಿಗಳಾದರೆಂಬಲ್ಲಿ ಹೇಳುತ್ತೇನೆ.

ಮೂ । ಬ್ರಹ್ಮಾದೀನಾಂಚದೇವಾನಾಂಜಗತ್ಸೃಷ್ಟ್ಯಾದಿಕರ್ಮಣಿ।
ಮಂತ್ರಸ್ಯಾಸ್ಯೈವಮಹಾತ್ಮ್ಯಾತ್ಸಾಮರ್ಥ್ಯಮುಪಜಾಯತೆ

ಟೀ ॥ ಬ್ರಹ್ಮ ವಿಷ್ಣು ರುದ್ರ ಮೊದಲಾದ ದೇವತೆಗಳಿಗೆ ಸೃಷ್ಟಿಸ್ಥಿತಿ ಸಂಹಾರಾದಿ ಕರ್ಮಗಳಲ್ಲಿ ಸಾಮರ್ಥ್ಯವು ಈ ಮಂತ್ರ ಪ್ರಭಾವದಿಂದಲೇ ಉಂಟಾಗುತ್ತಿರುವದು.

ಮೂ । ಕಿಮಿಹಬಹುಭಿರುಕ್ತೈರ್ಮಂತ್ರಮೇನಂಮಹಾತ್ಮಾಪ್ರಣವಸಹಿತಮಾದೌಯಸ್ತುಪಂಚಾಕ್ಷರಾಖ್ಯಂ।ಜಪತಿಪರಮಭಕ್ತ್ಯಾಪೂಜಯನ್ದೇವದೇವಂಸಗತದುರಿತಬಂಧೋಮೋಕ್ಷಲಕ್ಷ್ಮೀಂಪ್ರಯಾತಿ॥

ಟೀ । ಮತ್ತಂ ಬಹುಮಾತುಗಳಿಂದೇನುಪ್ರಯೋಜನವು ಮಹಾತ್ಮನಾದಆವಂ ಮೊದಲು ಉತ್ಕೃಷ್ಟವಾದ ಭಕ್ತಿಯಿಂ ದೇವದೇವನಾದಶಿವನಂ ಪೂಜಿಸಿ ಪ್ರಣವಯುಕ್ತವಾದ ಪಂಚಾಕ್ಷರೀ ಮಂತ್ರಮಂ ಜಪಿಸುತ್ತಿಹನೋ ಅತನು ಸಕಲ ಪಾಪಗಳಿಂದಲೂ ಬಿಡಲ್ಪಟ್ಟವನಾಗಿ ಮೋಕ್ಷಲಕ್ಷ್ಮಿಯಂ ಪಡೆವನು.

ಇತಿ ಶ್ರೀಮತ್ಪರಶಿವಚರಣಕಮಲಾರಾಧಕನಾದ ತೋಂಟದಸಿದ್ಧೇಶ್ವ
ರನೆಂಬಾಚಾರ್ಯನಿಂಸಂಗ್ರಹಿಸಲ್ಪಟ್ಟ ಷಟ್ಸ್ಥಲಕೌಮುದಿ
ಯೊಳ್ ಅಷ್ಟಾವರಣ ಪ್ರಕರಣದೊಳ್ ಮಂತ್ರಸ್ವ
ರೂಪಣಂ ಸಮಾಪ್ತವಾದುದು.

ಅನಂತರದೊಳ್ ಪಾದೋದಕ ಲಕ್ಷಣವಂ ನಿರೂಪಿಸುವೆಂ

ಪಾದೋದಕ ಲಕ್ಷಣ ಪ್ರಶಂಸೆ.

ಮೂ । ಅಥಾತೋಮಹಾದೇವಸ್ಯಪಾದೋದಕವಿಧಿಂವ್ಯಾಖ್ಯಾಸ್ಯಾಮಃ ಶ್ರೀರುದ್ರೇಣಪವಿತ್ರೇಣಶತಧಾರೇಣಸಹಸ್ರಧಾರೇಣಾಛಿದ್ರಮನಂತಮಪರಿಮಿತಮವಿಘ್ನಮಕ್ಷಯಮಭೀಷ್ಟದಮಚ್ಯುತಂ ಪರಮಂಪವಿತ್ರಂಭಗವಂತಮೇವಂಸ್ನಾಪಯಿತ್ವಾಸರ್ವೋವೈ ರುದ್ರಇತಿದ್ವಾಭ್ಯಾಂಋತಂಸತ್ಯಂಪರಬ್ರಹ್ಮೇತಿಪ್ರಾಶಯೇತ್ ಹೀಗೆಂದು ಬೋಧಾಯನ ಸೂತ್ರವು.

ಟೀ । ಶ್ರೀರುದ್ರದಿಂ ಪವಿತ್ರವಾದ ಶತಧಾರಸೂಕ್ತದಿಂ ಸಹಸ್ರಧಾರಸೂಕ್ತದಿಂದ ಅಖಂಡನಾದಅನಂತನಾದ ಮಿತಿರಹಿತನಾದ ವಿಘ್ನರಹಿತನಾದಕೇಡಿಲ್ಲದ, ಇಷ್ಟಾರ್ಥವಂ ಕೊಡುವನಾದ, ನಿತ್ಯನಾದುತ್ಕೃಷ್ಟನಾದ

ಪವಿತ್ರನಾದ ಷಡ್ಗುಣೈಶ್ವರ್ಯ ಸಂಪನ್ನನಾದ ಇಂತಪ್ಪ ಈಶ್ವರನ ಶ್ರೀಪಾದ
ಗಳಂ ಅಭಿಷೇಕಿಸಿ(ಸರ್ವೋವೈರುದ್ರಃ)ಎಂಬಮಂತ್ರದಿಂದಲೂ ಋತಂಸತ್ಯಂ
ಸತ್ಯಂಪರಬ್ರಹ್ಮ ಎಂಬ ಮಂತ್ರದಿಂದಲೂ ಸ್ವೀಕರಿಸಬೇಕು.

ಮೂ ॥ ಭಗವತಃಪಾದೌಪ್ರಕ್ಷಾಳ್ಯಶಂಖಂಪ್ರಪೂರ್ಯಗಂಧಪುಷ್ಪಾಕ್ಷ
ತಾದಿಭಿರಭ್ಯರ್ಚ್ಯಚರುಂನಿವೇದ್ಯಇಮಂಮೆ ಗಂಗೆ ಯಮುನೆ
ತ್ಯಭಿಮಂತ್ರ್ಯಕದ್ರುದ್ರಾಯೇತಿಪಾತ್ವಾರುದ್ರಾಯೇತಿಸಂ
ಮಾರ್ಜನಂಕೃತ್ವಾಋತಂಸತ್ಯಂಪರಬ್ರಹ್ಮೇತಿಪ್ರಾಶಯೇತ್
ಯಏವಂಕುರ್ಯಾತ್ಸಕುಲಜಾನ್ದಶಪೂರ್ವಾನ್ದಶಾಪರಾನಾ
ತ್ಮಾನಂಚತಾರಯೇತ್॥

ಟೀ ॥ ಮತ್ತಂ॥ ಭಗವಂತನಾದ ಸದಾಶಿವಮೂರ್ತಿಯ ಶ್ರೀ
ಪಾದಗಳನ್ನು ಪ್ರಕ್ಷಾಳಿಸಿ ಆ ಪಾದೋದಕದಿಂ ಶಂಖವಂ ತುಂಬಿ ಗಂಧ ಪು
ಷ್ಪಾಕ್ಷತೆ ಮೊದಲಾದವುಗಳಿಂ ಪೂಜಿಸಿ ಚರುವಂ ಸಮರ್ಪಿಸಿ ಇಮಂ
ಮೆ ಗಂಗೆ ಯಮುನೆ ಎಂಬ ಮಂತ್ರದಿಂದಭಿಮಂತ್ರಿಸಿ ಕದ್ರುದ್ರಾಯ ಎಂ
ಬ ಮಂತ್ರದಿಂದಲೂ ಪಾತ್ವಾರುದ್ರಾಯ ಎಂಬ ಮಂತ್ರದಿಂದಲೂ ಸಮ್ಮಾ
ರ್ಜನವಂಮಾಡಿ(ಋತಂಸತ್ಯಂಪರಬ್ರಹ್ಮ)ಎಂಬಮಂತ್ರದಿಂದಲು ಪಾನವಂ
ಮಾಡುವದು. ಈ ರೀತಿಯಿಂದಾವನಾನೊರ್ವನು ಶ್ರೀ ಶಿವಪಾದೋ
ದಕ ಸ್ವೀಕಾರವಂಮಾಡುವನೋ ಆತನು ತನ್ನ ಕುಲದಲ್ಲಿ ಪುಟ್ಟಿದ ತನ್ನಿಂ
ದ ಮೊದಲು ಹತ್ತು ಮಂದಿಯನ್ನೂ ತನ್ನ ನಂತರದ ಪುಟ್ಟಿದ ಹತ್ತು
ಮಂದಿಯನ್ನೂ ತನ್ನನ್ನುಸಹದಾಂಟಿಸುವನೆಂದುಜಾಬಾಲಿ ಶಾಖಾವಾಕ್ಯವು

ಮೂ । ಕುರುಕ್ಷೇತ್ರನೈಮಿಶಂಚಭೂಮಿಭಾಗಾಶ್ಚಯೇಶುಭಾಃ।
ಶಿವಪಾದೋದಕಸ್ಯೈತೆಕಲಾಂನಾರ್ಹಂತಿಷೋಡಶೀಂ ॥

ಟೀ । ಮತ್ತಂ ಕುರುಕ್ಷೇತ್ರವು ನೈಮಿಶಾರಣ್ಯವು ಪವಿತ್ರಗಳಾ
ದ ಆ ಪುಕ್ಷೇತ್ರಂಗಳುಂಟೋ[ಇವೆಲ್ಲವು ಶಿವನ ಶ್ರೀಪಾದತೀರ್ಥದ ಹದಿ
ನಾರನೆಯ ಒಂದು ಭಾಗವನ್ನು ಪಡೆಯಲಾರವು

ಮೂ । ಅಕಾಲಮೃತ್ಯುಮಥನಂಸರ್ವವ್ಯಾಧಿವಿನಾಶನಂ ।
ಸರ್ವಪಾಪೌಘಶಮನಂಶಂಭೋಃಪಾದೋದಕಂಶುಭಂ॥

ಟೀ ॥ ಅಕಾಲದ ಮೃತ್ಯುವನ್ನು ಕೊಲ್ಲುವಂಥಾ ಸಮಸ್ತವಾದ
ರೋಗಂಗಳನ್ನು ಪರಿಹರಿಸುವಂಥಾ ಸಮಸ್ತ ಪಾಪಂಗಳಂ ಕೆಡಿಸುವಂಥಾ
ಶಿವನಪಾದ ತೀರ್ಥವು ಶುಭವಾದಂಥಾದ್ದು ಆದುಕಾರಣದಿಂ ಶಿವಪಾದೋ

ದಕವನ್ನೆ ಸ್ವೀಕರಿಸಬೇಕು

ಮೂ ॥ ಸರ್ವೋತ್ಪಾತಪ್ರಶಮನಂ ಸರ್ವರೋಗಪ್ರಭೇದನಂ।
ದುಷ್ಟಗ್ರಹೋಪಶಮನಮಿಷ್ಟಸಿದ್ಧಿಪ್ರದಾಯಕಂ।
ಸರ್ವಮಂಗಳಮಾಂಗಲ್ಯಂ ಸರ್ವಪಾಪಪಾವನಂ।
ಸರ್ವತೀರ್ಥಫಲಂ ಸದ್ಯಃ ಪ್ರಾಪ್ಯತೆ ಮೂರ್ಧ್ನಿಧಾರಣಾತ್।

ಟೀ ॥ ಮತ್ತು ಸಮಸ್ತವಾದ ಉತ್ಪಾತಂಗಳಂ ಕೆಡಿಸುವಂಥಾ ಸಕಲ ರೋಗಂಗಳನ್ನು ಛೇದಿಸುವಂಥಾ ದುಷ್ಟವಾದ ಗ್ರಹಂಗಳಂ ಪರಿಹರಿಸುವ ಇಷ್ಟಸಿದ್ಧಿಪ್ರದಾಯಕವಾದ ಸಮಸ್ತವಾದ ಶುಭಂಗಳಿಗೂ ಶುಭವಾದ ಸಕಲವಾದ ಪವಿತ್ರಂಗಳಿಗೂ ಪವಿತ್ರವಾದ ಅವುದಾನೊಂದು ಶಿವಪಾದತೀರ್ಥವುಂಟೋ ಆ ಶಿವ ಪಾದೋದಕವಂ ಶಿರಸ್ಸಿನಲ್ಲಿ ಧರಿಸುವದರತ್ತಣಿಂ ಆ ಕ್ಷಣವೇ ಸಕಲವಾದ ತೀರ್ಥಸ್ನಾನ ಫಲವು ಹೊಂದಲ್ಪಡುತ್ತಿಹುದು.

ಮೂ ॥ ಅಗಮ್ಯಾಗಾಮಿನಶ್ಚೈವ ಮಹಾಪಾಪಚಾರಾಶ್ಚಯೇ ನರಾಃ।
ತೇಪಿ ಪೂತಾ ಭವಂತ್ಯಾಶು ಸದ್ಯಃ ಪಾದಾಂಬುಧಾರಣಾತ್।

ಟೀ ॥ ಮತ್ತಂ ಆಗಮ್ಯಾಗಮನವಂ ಮಾಡಿದವರುಗಳು ಪಾಪವ್ಯಾಪಾರುಗಳುಳ್ಳಂಥಾ ಆವ ಮನುಷ್ಯರುಗಳಿದ್ದಾರೋ ಅವರುಗಳು ಸಹವಾಗಿ ಪಾದೋದಕವನ್ನು ಧರಿಸುವದರತ್ತಣಿಂ ಆ ಕ್ಷಣವೇ ಶೀಘ್ರವಾಗಿ ಪವಿತ್ರರಾಗುತ್ತಿಹರು.

ಮೂ ॥ ✓ಅಶೌಚಂ ನೈವ ವಿದ್ಯೇತ ಜಾತಕಂ ಮೃತಕಂ ತಥಾ।
ಗೃಹೆ ಯಸ್ಮಿನ್ ಪ್ರಸೂತಾ ಸ್ತ್ರೀ ಸೂತಕಂ ನಾತ್ರ ವಿದ್ಯತೆ।

ಟೀ ॥ ಮತ್ತಂ ಜನನ ಪ್ರಯುಕ್ತ ಸೂತಕವು ಮೃತಸೂತಕವು ಇಲ್ಲವು ಆವ ಮನೆಯಲ್ಲಿ ಸ್ತ್ರೀ ಪ್ರಸವಿಸಿದ್ದರು ಸೂತಕದಿಂದುಂಟಾಗುವ ಪಾಪವಿಲ್ಲ

ಅವ. ಮತ್ತಂ ಶಿವಪಾದೋದಕ ಸಂಸ್ಪರ್ಶದತ್ತಣಿಂ ಸಕಲ ಪಾಪವು ಪರಿಹಾರವಾಗುವದೆಂಬಲ್ಲಿ

ಮೂ ॥ ಶಿವಪಾದಾಂಬುಸಂಸ್ಪರ್ಶಾತ್ಸರ್ವಪಾಪಂ ಪ್ರಣಶ್ಯತಿ।
ದೂಷಿತಶ್ಚಾಪಿ ಪಾದಾಂಬು ಬಿಭ್ರಚ್ಛುದ್ಧಿಮವಾಪ್ನುಯಾತ್

ಟೀ ॥ ಶಿವನ ಪಾದತೀರ್ಥದ ಸೋಂಕಿನತ್ತಣಿಂ ಸಕಲ ಪಾಪವು ಕೆಟ್ಟು ಪೋಪುದು ಪಾಪಿಯಾದೊಡಂ ಶಿವಪಾದತೀರ್ಥವನ್ನು ಧರಿಸಿದವನಾದೊಡೆ ಪರಿಶುದ್ಧಿಯನ್ನೈದುವನು.

ಮೂ ॥ ಪಾದೋದಕಂಪುರಭಿದಃಪಾಶಜಾಲಂಹರಂಪರಂ ।
ಪಾಣಿಶುಕ್ತಿಭಿರಾದಾಯಪಪುಃಕಾಮಂಗಣೇಶ್ವರಾಃ ॥

ಟೀ ॥ ಮತ್ತಂ ಅವಿದ್ಯಾ ಪಾಪ ಸಮೂಹಂಗಳಂ ಛೇದಿಸುವಂಥಾ ಸರ್ವೋತ್ಕೃಷ್ಟವಾದ ಪರಮೇಶ್ವರನ ಶ್ರೀಪಾದತೀರ್ಥವನ್ನು ಪ್ರಮಥಗಣಂಗಳು ಹಸ್ತಂಗಳೆಂಬ ಮುತ್ತಿನ ಚಿಪ್ಪುಗಳಿಂ ತೆಗದುಕೊಂಡು ಯಥೇಷ್ಟವಾಗಿ ಪಾನವಂಮಾಡಿದರು.

ಮೂ ॥ ಶಂಭೋಃಪಾದೋದಕಂಪೀತ್ವಾಪಶ್ಚಾದಶುಚಿಶಂಕಯಾ।
ಯಆಚಮತಿಮೋಹೇನತಂವಿಂದ್ಯಾದ್ಬ್ರಹ್ಮಘಾತುಕಂ ॥

ಟೀ । ಪರಮೇಶ್ವರನ ಶ್ರೀಪಾದತೀರ್ಥವನ್ನು ಪಾನವಂ ಮಾಡಿ ಅನಂತರದಲ್ಲಿ ಅಪವಿತ್ರವೆಂಬ ಶಂಕೆಯಿಂದಾವನಾನೋರ್ವನು ಅಜ್ಞಾನದಿಂದ ಶುದ್ಧಾಚಮನವಂ ಮಾಡುತ್ತಿದ್ದಾನೋ ಅವನನ್ನುಬ್ರಹ್ಮಘಾತುಕನೆಂದು ತಿಳಿಯುವದು.

ಮೂ । ಪಾದೌಪ್ರಕ್ಷಾಲ್ಯದೇವಸ್ಯಕರಾಭ್ಯಾಂಕಮಲೇಕ್ಷಣಃ ।
ಅಭ್ಯುಕ್ಷ್ಯಚಾತ್ಮನೋಮೂರ್ಧ್ನ್ಯತಿಥೇಶ್ಚಗುರೋಸ್ತಥಾ ॥

ಟೀ । ಎಲೈ ವಿಷ್ಣುವೇ ಎನ್ನ ಪಾದಂಗಳನ್ನು ಪ್ರಕ್ಷಾಳಿಸಿ ಹಸ್ತಗಳಿಂದ ತನ್ನ ಶಿರಸ್ಸಿನಲ್ಲಿ ಪ್ರೋಕ್ಷಣವಂ ಮಾಡುವದು ಹಾಗೆಯೇ ಅತಿಥಿಯ ಪಾದೋದಕವಂ ಶ್ರೀಗುರುವಿನ ಪಾದೋದಕವಂ ಪ್ರೋಕ್ಷಿಸಿಕೊಂಬುದು

ಮೂ । ಪ್ರಮಥಪ್ರವರೈಃಪೀತಂಸುರಮುಖ್ಯೈಶ್ಶಿರೋಧೃತಂ ।
ಶುದ್ಧಂತತ್ವತಯಾದಿಷ್ಟಂವಲ್ಮೀಕಪ್ರಭವೇನಚ॥

ಟೀ । ಮತ್ತಂ ಶಿವಪಾದೋದಕವು ಯಾರಿಂದ ಸೇವಿಸಲ್ಪಟ್ಟಿತೆಂದರೆ ಪ್ರಮಥಶ್ರೇಷ್ಠರುಗಳಿಂಪಾನವಂ ಮಾಡಲ್ಪಟ್ಟಿತು, ದೇವರ್ಕಳೇಮೊದಲಾದವರ ಶಿರಸ್ಸಿನಿಂ ಧರಿಸಲ್ಪಟ್ಟಿತು ವಾಲ್ಮೀಕಿ ಮುನೀಶ್ವರನಿಂದಲೂ ಯಥಾರ್ಥವಾದುದರಿಂ ಪರಿಶುದ್ಧವಾದುದೆಂದು ಹೇಳಲ್ಪಟ್ಟಿತು.

ಮೂ । ಪಾದೋದಕಂಯಥಾಭಕ್ತ್ಯಾಸ್ವೀಕರೋತಿಮಹೇಶಿತುಃ ।
ತಥಾಃಶಿವಾತ್ಮನೋನಿತ್ಯಂಗುರುಜಂಗಮಯೋರಪಿ ॥

ಟೀ ॥ ಅನಂತರಂ ಶಿವಲಿಂಗ ಪಾದೋದಕವನೆಂತು ಭಕ್ತಿಯಿಂ ತೆಗದುಕೊಳುತ್ತಿಹನೋ ಹಾಂಗೆ ಎಲ್ಲಾಗಳು ಶಿವಾತ್ಮಕರಾದ ಗುರುಜಂಗಮರುಗಳ ಪಾದೋದಕವನ್ನು ತೆಗದುಕೊಂಬುದು.

ವಿಚಾರಂ ಅರುಶುದ್ಧರೂ ಪವಿತ್ರರೂ ವೀರಶೈವ ಮತಾನುವರ್ತಿಗ

ಈಗ ಅಷ್ಟಾವರಣ ಸ್ವರೂಪಮಂ ತಿಳಿದ ಷಟ್ಸ್ಥಲಜ್ಞಾನಸಂಪನ್ನರೂ ಆದ ಶಿವಭಕ್ತರಿಂ ಆಚರಿಸಲುಯೋಗ್ಯವಾದ ಗುರುಜಂಗಮಪಾದ ಪೂಜಾಕಾಲ, ತದ್ವಿಧಾನ, ತದ್ಗ್ರಹಲಕ್ಷಣವಂ ಸತ್ಪುರುಷರುತಿಳಿದು ಆಚರಿಸಿ ದುಷ್ಟವಾದ ಚರ್ಯಂಗಳಂ ಬಿಟ್ಟು ಕೃತಾರ್ಥರಾಗಲೋಸುಗ ನಿರೂಪಿಸುವ ನದೆಂತೆನೆ;—

ಮೂ॥ ಆದೌಗುರುಪದಂಧ್ಯಾತ್ವಾಭೂತಿಮಾದಾಯಶಾಂಭವೀಂ॥
ರಭ್ಯಪಾತ್ರೇಷುಪೂಜಾದ್ರವ್ಯೌಘಂನಿಕ್ಷಿಪೇತ್ತತ್ಸಮಂತ್ರಕಂ।
ಗುರುಮೂರ್ತಿಂಚರಂಚಾಪಿಪೂಜಯಿತ್ವಾನಿರಂತರಂ॥

(ಧ್ಯಾತ್ವಾಗುರುಂಸ್ವಹೃದಯೇ ಪ್ರಾಣಾಯಾಮತ್ರಯಃಸುಧೀಃ)ಎಂಬವಚನದಿಂಪೂಜಕನ ಪ್ರಾತಃಕಾಲಾಹ್ನಿಕಾನಂತರಂಮಧ್ಯಾಹ್ನಿಕಶಿವಪೂಜಾಪ್ರಾರಂಭದಲ್ಲಿಭಕ್ತಸ್ಥಲಪನ್ನೈದಿತ್ರತ್ಸ್ಥಲೋಕ್ತಕ್ರಿಯಾನಂತರಂ ಗುರುಜಂಗಮ ಪಾದಪೂಜಾಕಾಲವೆಂದು ತಿಳಿಯಬೇಕು.

ಮತ್ತಂ ಗುರುಜಂಗಮಾರ್ಚನವೂ ತತ್ಪಾದತೀರ್ಥ ಪ್ರಸಾದ ಗ್ರಹಣವೂ ಭಕ್ತಸ್ಥಲೋಕ್ತವಾದುದರಿಂ ಭಕ್ತಸ್ಥಲ ವ್ಯತಿರಿಕ್ತ ಮಾಹೇಶ್ವರಾದಿ ಪಂಚಸ್ಥಳದಲ್ಲಿ ಕ್ರಮವಾಗಿ ಶ್ರೀಮತ್ಷಡಕ್ಷರೀ ಮಂತ್ರಾನುಷ್ಠಾನವು ದಶಾವಧಾನ ನಿರೀಕ್ಷಣವು. ಅಂತರ್ಬಹಿರ್ಲಿಂಗಾರ್ಚನವು ನೈವೇದ್ಯ ಸಮರ್ಪಣವು ಪ್ರಸಾದಭೋಗಸಂತೃಪ್ತಿಯು ಹೇಳಲ್ಪಟ್ಟದು. ಸರ್ವಾಂಗನಿವೇಶನಾನಂತರಂ ಕ್ರಿಯೆಯೇ ಹುಟ್ಟುವದಿಲ್ಲವಾಗಿ ಗುರುಜಂಗಮಾರ್ಚನೆಯು ಭಕ್ತಸ್ಥಳದಲ್ಲಿಯೇ ಆಚರಿಸಲು ತಕ್ಕುದೆಂದಂಗೀಕರಿಸಲ್ವೇಳ್ಕುಂ. ಈ ಉಕ್ತ ಪ್ರಕಾರವನತಿಕ್ರಮಿಸಿ, ಕೆಲವರು ಪಾಮರರಾದ ಪೂಜಕರು ಶಾಸ್ತ್ರಾರ್ಥಮನಾಲೋಚಿಸದೆ ಸದ್ಗುರುವಂ ಹೊಂದದೆ ಸ್ಥಲಸಂಚರವನ್ನಂಗೀಕರಿಸಿ,ಅಸಮಯದಲ್ಲಿ ಭಕ್ತಸ್ಥಲೋಕ್ತವಾದ ಕ್ರಿಯೆಗೋಸ್ಕರ ಶುಕ್ತಿಯಲ್ಲಿರ ಜತಭ್ರಾಂತಿ ಬಂದಂತೆ ಜಂಗಮವೆಂದು ಪೂಜಿಸಿ ತೀರ್ಥವೆಂದು ಪ್ರಸಾದವೆಂದು ಭ್ರಮಿಸಿ ಸ್ವೀಕರಿಸುವರು. ಮತ್ತೆನಿಜಾಯುಗಾದಿಪೋಳ್ಕೆಲವರು ಶೈವರು ಕೇವಲ ದುರಾಚಾರಗಳಲ್ಲಿ ಪ್ರವರ್ತಿಸಿ ಅನೇಕವಾಗಿ ಶಿವದ್ರೋಹವನ್ಮಾಡಿ ಆ ಬಳಿಕ ಸಕಲ ಶಾಸ್ತ್ರಪಾರಂಗತನಾದ ವೇದವೇದಾಂತವಿಚಕ್ಷಣನಾದಂತಮರ್ಹಷಿಯಾದ ಪರಶಿವಭಕ್ತನಾದ ಶಾಪಾನುಗ್ರಹ ಸಾಮರ್ಥ್ಯವುಳ್ಳ ಮಹಾಪುರುಷನಾದಶಿವಯೋಗೀಶ್ವರನಂ ದೂಷಿಸಿಅಪರಾಧವಂಮಾಡಿದದಕ್ಕಾರ

ಣ ಆ ಶಿವಯೋಗೀಶ್ವರನು ಆದ್ರೋಹಿಗಳಿಂದತ್ಯುತ್ಕಟವಾದ ಪಾಪಂಗಳನ್ನನುಭವಮಾಡಿಸಬೇಕೆಂದಾಲೋಚಿಸಿ ಆಪಾಪಾತ್ಮರಂ ಕುರಿತು ಎಲೈ ಪಾಪಿಷ್ಠರುಗಳಿರಾ ನೀವು ಈ ಯುಗದಲ್ಲಿ ಕೆಲವು ಕಾಲದಮೇಲೆ ವೀರಶೈವ ಮತದಲ್ಲಿ ಪುಟ್ಟಿ ಅತ್ಯುತ್ಕಟವಾದ ಪಾತಕಗಳಿಗೆ ಆಸ್ಪದವಾದ ಕೃತ್ಯಂಗಳಂಅನುಕರಿಸಿ ಅಂತ್ಯದಲ್ಲಿ ಮಹಾ ಭಯಂಕರವಾದ ರೌರವ ನರಕವನ್ನೈದಿರೆಂದು ಶಾಪವಂಕೊಟ್ಟಕಾರಣ ಆ ಮಹಾ ಯೋಗೀಶ್ವರನಿಂ ಕೊಡಲ್ಪಟ್ಟ ಶಾಪಾಗ್ನಿಯಿಂದಸುಡಲ್ಪಟ್ಟು ಮತ್ತರಾಗಿ ಜನಂಗಳಾಡಿಸಲ್ಪಟ್ಟ ಶಿವಭಕ್ತಿಯುಳ್ಳವರಾಗಿ ಅವಿದ್ಯಾವಂತರಾಗಿ ಗರ್ವಿಷ್ಠರುಗಳಾಗಿ ಶಿವಾಗಮಾಮ್ನಾಯದೂಷಕರಾಗಿವಿಶಿಷ್ಟವಾದ ಶಾಸ್ತ್ರಾಚಾರಪರಾಙ್ಮುಖರಾಗಿ ಕುಮಾರ್ಗಾಚಾರವರ್ತಿಗಳಾಗಿ ತದೀಯನಿರ್ಮಿತಕುವಚನ ರಚನೆಗಳಿಂ ಮತಿಗೆಟ್ಟು ಪುಣ್ಯಶ್ಲೋಕರಾದ ಮಹಾತ್ಮರ ಆಚಾರಕ್ರಮದಲ್ಲಿ ಹೋಗದೆ ಮತಪ್ರವರ್ತಕರಾದ ಮಹಾ ಪುರುಷರುಗಳಿಂದುಕ್ತವಾದ ಶಿವಾಜ್ಞಾರೂಪವಾದ ಸಚ್ಛಾಸ್ತ್ರಗಳಂನಿರಾಕರಿಸಿ ಸದಾಚಾರರಹಿತರಾಗಿ ಸನ್ಮಾರ್ಗ ಭ್ರಷ್ಟರಾಗಿ ಅಸನ್ಮಾರ್ಗಾವಲಂಬಿಗಳಾಗಿ ಶಿವಾಗಮೋಕ್ತವಾದಾಚಾರಗಳೊಂದನ್ನೂ ಅನುಸರಿಸದೆಸಕಲ ದೇವತೆಗಳಿಗತ್ತಣಿಂ ಋಷಿಗಳಿಗತ್ತಣಿಂ ತಾವೇ ಸರ್ವೋತ್ತಮರೆಂದು ತಿಳಿದು ಲೋಕದಲ್ಲಿ ಅಲಸರಾದ ಪಾಮರರಾದ ಪಾಪಿಷ್ಠರುಗಳಾದ ಜನಗಳನ್ನು ಬೋಧಿಸಿ ಶಾಸ್ತ್ರದಲ್ಲಿ ಅವಿಶ್ವಾಸವಂ ಪುಟ್ಟಿಸಿ, ಸ್ವಕೀಯ ಪಾದಪ್ರಕ್ಷಾಳನೋದಕಪಾನ, ತಮ್ಮ ಪೂಜೆ, ಸ್ವಕೀಯೋಚ್ಛಿಷ್ಟಾನ್ನಭೋಜನ ಇವುಗಳಿಂದಲೇ ಸಕಲವು ದೊರಕುವದೆಂದು ಮತ್ತಂ ಸ್ವಪಾದಪ್ರಕ್ಷಾಳನೋದಕದಿಂಸಕಲವೂ ಪವಿತ್ರವಹುದೆಂದು ಸಕಲ ದೇವತಾ ಜನನಸ್ಥಾನವಾದದ್ದು ತಮ್ಮ ಪಾದವೆಂದುಬೋಧಿಸಿ ಪಾಮರರಾದ ಜನಗಳಂ ಈ ದುರಾಚಾರದಲ್ಲಿ ಪ್ರವರ್ತಿಸಲೋಸುಗ (ಅಂಗಲಿಂಗೀಜ್ಞಾನರೂಪಸ್ಸತೀಜ್ಞೇಯಶ್ಶಿವಃಪತಿಃ ।

(ಎಂಬುವರಿಂ ಮತ್ತಂ)ಸತೀಚಾಹಂಪತಿರ್ಲಿಂಗಂಹೃದಿಯುಕ್ತ
ಸ್ವಯಂಪ್ರಭುಃ॥ ಎಂಬ

ಶರಣಸ್ಥಲೋಕ್ತವಚನಗಳಿಂದ ಸತೀಪತಿ ನ್ಯಾಯವುಂಟಾಗಿ ಸತಿಯಾದ ತಾನು ತನ್ನ ಪಾದೋದಕವನ್ನು ತನ್ನ ಪತಿಗೆ ಬಲಾತ್ಕಾರದಿಂ ಕೊಟ್ಟಂತೆ ತಾವೇ ಸ್ವಕೀಯ ಪಾದ ಪ್ರಕ್ಷಾಳನೋದಕವನ್ನು ತಮ್ಮ ಲಿಂಗಕ್ಕಭಿಷೇಕಿಸಿ ತಾವು ಪಾನವಂ ಮಾಡಿ ತಮ್ಮುಚ್ಛಿಷ್ಟವನ್ನೇ

ಎಂದರೆ ಇತ್ಯಾದಿವಚನಗಳಿಂದೀಲೋಕದೊಳ್ ಪಾಪಿಷ್ಠರ
ನೇಕಮಂದಿ ಯತಿಗಳು ಶುಕ್ಲವಾದ ದಂತಗಳುಳ್ಳವರಾಗಿ ಸ್ರಕ್ಚಂನಾದಿ
ವಿಷಯಗಳಲ್ಲಾಸಕ್ತಿಯುಳ್ಳವರಾಗಿ ಮುಂಡಿತಂಗಳಾದ ಶಿರಸ್ಸುಗಳುಳ್ಳರಾ
ಗಿ ಕಾಷಾಯ ವಸ್ತ್ರಂಗಳಂ ಧರಿಸಿಕೊಂಡು ಈ ಕಲಿಯುಗದೊಳ್
ಯವಾದ ಶೂದ್ರ ಧರ್ಮಂಗಳನ್ನಾಚರಿಸುವರು. ಮತ್ತಂ ದುರ್ಭೋಜನ
ದಲ್ಲಿಯೂ ದುರಾಲಾಪಂಗಳಲ್ಲಿಯೂ ದುಷ್ಪ್ರತಿಗ್ರಹದಲ್ಲಿಯೂ ಅತ್ಯಂತಾ
ಸಕ್ತಿಯುಳವರಾಗಿ ದುರ್ವಿಹಾರಂಗಳಂ ಮಾಡುತ್ತಾ ದುರಾಚಾರಂಗಳನ್ನ
ಡೆಯುತ್ತಾ ವ್ಯರ್ಥವಾದ ಗರ್ವದಿಂ ಕೂಡಿ ಬಹಳ ನಿಂದ್ಯರಾಗಿ ಅಧಿಕವಾದ
ಧನಾಶೆಯಿಂದತ್ಯಂತ ವಿಗರ್ಹಿತವಾದ ಪಾಠಪತ್ಯವನಂಗೀಕರಿಸುವರು
ಮತ್ತಂ ಗ್ರಾಮಣ್ಯದಲ್ಲಿ ತತ್ಪರರಾಗಿ ಮಂತ್ರಯಂತ್ರ ತಂತ್ರಗಳಂ ಕಲ
ತು ಮುಂಡೆಯರಿಗುಪದೇಶವಂ ಮಾಡುತ್ತಾ ಅವರ ಸಂಗಡಲೇ ಸರಸಾ
ಲ್ಲಾಪಗಳನ್ನು ಗೈಯುತ್ತ ಅದರಿಂದಲೇ ಜೀವಿಸುವರು. ಮತ್ತಂ ಸ್ವಯಂ
ವೈರಾಗ್ಯದಿಂ ಹೀನರಾಗಿ ಪರರಿಗೆ ಮಾತ್ರ ವೈರಾಗ್ಯವಂ ಉಪದೇಶಿಸುತ್ತಾ
ದ್ರವ್ಯದಲ್ಲಿ ಅಧಿಕವಾದ ಆಶೆಯಿಂ ಕಂಡಕಂಡ ಜನರಂ ಯಾಚಿಸುವರು
ಮತ್ತಮಪರಿಮಿತವಾದ ತೃಷ್ಣೆಎಂಬ ಪಿಶಾಚಿಯಿಂದಆಕ್ರಮಿಸಲ್ಪಟ್ಟವರಾ
ಗಿ ಗಮ್ಯಾಗಮ್ಯ ಪ್ರದೇಶಗಳಂ ವಿಚಾರಿಸದೆ ಸರ್ವತ್ರ ಸಂಚರಿಸುವರ
ಮತ್ತಂ ಪ್ರತಿದಿನವು ದಿವ್ಯವಾದ ದಧಿ ಘೃತ ಕ್ಷೀರ ಶಾಲ್ಯೋದನಗಳ
ಸೇವಿಸಿ ಯೌವನದಕೊಬ್ಬಂ ತಡೆಯಲಾರದೆಮತ್ತರಾಗಿ ಮನಸ್ಸು ಬಂದಂ
ತೆ ಪ್ರವರ್ತಿಸಿ ಅತ್ಯಂತವಾಗಿ ಪಾತಿತ್ಯವಂ ಪಡೆಯುವರು. ಮತ್ತಂ
ಲವರು ಕಾಷಾಯಧಾರಿಗಳು ವಿಷಯಲಂಪಟರಾಗಿ ಶಿಶ್ನೋದರ ಪಂಡಿತ
ಣರಾಗಿ ವೇದಶಾಸ್ತ್ರಂಗಳಲ್ಲಿ ಸಿದ್ಧಾಂತಿಸಲ್ಪಟ್ಟ ಪುಣ್ಯಪಾಪಂಗಳನ್ನು
ಪರಲೋಕವಂ ಸಹ ಅಪಲಪಿಸುತ್ತಾ ಶುದ್ಧನಾಸ್ತಿಕರೇಆಗಿ ಜನರಂವೊ
ಹಪಡಿಸುವದಕ್ಕೋಸ್ಕರ ಅನ್ಯಾಯವಾಗಿ ವಿರಕ್ತ ವೇಷಗಳಂ ಧರಿಸಿ ಜೀ
ವನವಂಮಾಡುತ್ತ ನರಕಗಾಮಿಗಳೇ ಆಗುವರು ಅದುದರಿಂಯೋಗ್ಯನಾದ
ತ್ಪುರುಷರು ಇಂಥಾ ನೀಚರಾದ ಜನರಂ ಕಣ್ಣಿನಿಂದಲೂ ನೋಡಬಾ
ದು. ನೋಡಿದರೆ ನರಕವನ್ನೇ ಪಡೆಯುವರು. ಎಂಬ ಸ್ಕಂದಾದಿತ್ಯ ಪುರಾ
ಣ ವಚನಾರ್ಥಗಳಿಗೆ ವಿಷಯರಾಗಿ ಶಾಸ್ತ್ರಪ್ರಮಾಣವಿಲ್ಲದೆ ಅಶಾಸ್ತ್ರೀ
ಯವಾಗಿ ಪಾಪಹೇತುವಾಗಿ ತಾವು ಆಚರಿಸುವದಲ್ಲದೆ ತಾವು ಆಚರಿ
ಸುವ ದುರಾಚಾರಗಳಂ ಶಿಷ್ಟಾಚಾರವೆಂದು ಗುರುಗಳು ಅನುಸರಿಸಿದರೆಂದು

ತನ್ನ ಗುರುಗಳ ಅಜ್ಞಾತ್ವವಂ ಪ್ರಕಾಶವಾಗಿ ತಿಳಿಹಿಸುವಂಥಾ ಗುರು
ದ್ರೋಹಿಗಳು (ಯಶ್ಶಾಸ್ತ್ರವಿಧಿಮುತ್ಸೃಜ್ಯವರ್ತತೇಕಾಮಕಾರತಃ
ನಾಸಸಿದ್ಧಿಮವಾಪ್ನೋತಿನಸುಖಂನ್ನಪರಾಂಗತಿಂ) ಎಂಬ ಭಗವದ್ವಾಕ
ಸವಂ ಸಾರ್ಥಕವನ್ನಾಗಿ ಮಾಡುವರು. ಮತ್ತೊಂದು ಪ್ರಕಾರ ಕಾರಣ
ಮುಂಟದೆಂತೆನೆ ಶಿವನು ಈ ಕಲಿಯುಗದೊಳು ಶಿವದ್ರೋಹಿಗಳನ್ನು ಈ
ಪ್ರಕಾರವಾಗಿ ಪುಟ್ಟಿಸಿ ಅವರುಗಳಿಂದ ಅಸಂಖ್ಯಾತದುಷ್ಕರ್ಮಗಳಂ ಮಾ
ಡಿಸಿ ಮಹಾ ದುಃಖ ಪ್ರದಮಾದ ನರಕವನ್ನು ಯೈದಿಸುವನೆಂದು ಆದಿತ್ಯ
ಪುರಾಣೋಕ್ತಮಾದ ಶಿವ ಸಹಸ್ರನಾಮ ವ್ಯಾಖ್ಯಾನದಲ್ಲಿ ಏಳನೂರ ಅರ
ವತ್ತೆರಡನೆಯದಾದ ಶಿಷ್ಯಾಯನಮಃ ಯೆಂಬ ನಾಮದ ವ್ಯಾಖ್ಯಾನದಲ್ಲಿ
ಸ್ಪಷ್ಟವಾಗಿರುವದರಿಂ ನಿಶ್ಚಯವೆಂದು ತಿಳಿಯತಕ್ಕದ್ದು ಆದುದರಿಂದೀಪ್ರ
ಕಾರಮಾದ ದುರಾಚಾರಂಗಳಂ ಸರ್ವಥಾಬಿಡಬೇಕೆಂದಂಗೀಕೃತಮಕ್ಕುಂ
ಮತ್ತಂ ಚತುಷಷ್ಟಿ ಶೀಲಾಚಾರಧುರಂಧರರಾದ ಪಾಲ್ಕುರಿಕೆಯ ಸೋಮ
ನಾಥರಿಂದುಕ್ತಮಾದ ಶ್ರೀಮದ್ಬಸವರಾಜೀಯವೆಂಬ ಗ್ರಂಥದಲ್ಲಿಯೂ ಶಿ
ವತತ್ವನಿಧಿಯಾದ ಮಲ್ಲಪ್ಪಯ್ಯರಿಂದುಕ್ತಮಾದ ಶಿವಜ್ಞಾನ ದೀಪಿಕೆಯೆಂ
ಬ ಗ್ರಂಥದಲ್ಲಿಯೂ ಸಮಸ್ತ ತತ್ವವೇತ್ತರಾದ ಪದ್ಮರಾಜರಿಂದುಕ್ತಮಾದ
ಸಾನಂದ ಚರಿತೆಯೆಂಬ ಗ್ರಂಥದಲ್ಲಿಯೂ ಸಕಲಶೈವಾಗಮಾಭಿಜ್ಞರಾದ
ಜ್ಯೋತಿರ್ನಾಥರಿಂದುಕ್ತಮಾದ ಶೈವರತ್ನಾಕರವೆಂಬ ಗ್ರಂಥದಲ್ಲಿಯೂ
ಮತ್ತಂ ಜಗದಾರಾಧ್ಯನಾಗೇಶರಿಂದುಕ್ತವಾದ ಶಿವಜ್ಞಾನಸಮುಚ್ಚಯ
ವೆಂಬ ಗ್ರಂಥದಲ್ಲಿಯೂ ನೀಲಕಂಠನಾಗನಾಥಾಖ್ಯದೇಶಿಕರಿಂದುಕ್ತಮಾದ
ವೀರಮಹೇಶ್ವರಾಚಾರಸಂಗ್ರಹವೆಂಬಗ್ರಂಥದಲ್ಲಿಯೂಸಾಕ್ಷಾತ್ ವೀರಶೈವ
ಮತೋದ್ಧಾರಕರಾದ ಜಗದ್ಗುರು ರೇಣುಕಾಚಾರ್ಯರಿಂದುಕ್ತವದ ಸಿ
ದ್ಧಾಂತ ಶಿಖಾಮಣಿಯೆಂಬ ಗ್ರಂಥದಲ್ಲಿಯೂ ಇನ್ನೂ ಅನೇಕಗ್ರಂಥಗಳಲ್ಲಿ
ಯುಕ್ತವಾದ್ದರಿಂದ ಸತ್ಪುರುಷರಿಂದನಾದರಿಸಲ್ಪತಕ್ಕದೆಂಬುದೇ ಸಿದ್ಧಮ
ಕ್ಕುಂ ಆದರೆ ಗುರುಜಂಗಮ ಪಾದಪೂಜೆಯಂಹ್ಯಾಂಗೆಮಾಡತಕ್ಕದ್ದು ಕಾ
ದ್ಯಾಮವು ಸ್ವೀಕರಿಸುವದು ಹ್ಯಾಗೆಯೆಂದರೆ ತದ್ವಿಧಾನವಂ ಸಕಲ
ವೀರಶೈವಶಾಸ್ತ್ರ ತತ್ವಜ್ಞರೊಡಂಬಡುವಂತೆ ನಿರೂಪಿಸುವೆನದೆಂತೆನೆ;—
(ಏಕಮೂರ್ತಿಸ್ತ್ರಯೋಭಾಗಾಗುರುರ್ಲಿಂಗಂಚಜಂಗಮಃ॥ಜಂಗಮಶ್ಚ
ಗುರುರ್ಲಿಂಗಂತ್ರಿಧಂತ್ವೇಕಮುಚ್ಯತೆ) ಎಂಬ ವಚನದಿಂದಲೂ (ಏಕಏವ
ಶಿವಸ್ಸಾಕ್ಷಾತ್ಸರ್ವಾನುಗ್ರಹಕಾರಕಃ॥ಗುರುಜಂಗಮಲಿಂಗಾತ್ಮಾವರ್ತತೇ

ಭುಕ್ತಿಮುಕ್ತಿದಃ) ಎಂಬವಚನದಿಂದಲೂ ವೇದಪ್ರಸಿದ್ಧನಾಗಿ ಸರ್ವಾನು
ಗ್ರಾಹಕನಾಗಿ ಸತ್ಯಜ್ಞಾನಾನಂದಾತ್ಮಕನಾದಶಿವನೊಬ್ಬನೇ ಶ್ರೀಗುರು
ಲಿಂಗಜಂಗಮ ಸ್ವರೂಪನಾಗಿರುವದರಿಂದ ಶಿವಗುರುಚರಮೂರ್ತಿಗಳಿಗೆ ಅ
ಭೇದಭಾವನೆಯುಂಮಾಡಬೇಕೆಂಬುವದು ಸಿದ್ಧಮುಕ್ಕು (ಯಥಾದೇವೇಜಗ
ನ್ನಾಥೇ ಸರ್ವಾನುಗ್ರಹಕಾರಕೇ। ತಥಾಗುರುವರೇಕುರ್ಯಾದುಪಚಾರಾನ್ವಿನೆ
ನೆ) ಎಂದರೆ ಸರ್ವ ಜಗನ್ನಾಯಕನಾದ ಸರ್ವಾನುಗ್ರಹಕನಾದ ಪರಶಿವ
ನಲ್ಲಿ ಹ್ಯಾಗೆ ಉಪಚಾರಂಗಳಂ ಮಾಡುತ್ತಿಹನೋ ಹಾಗೆ ಸದ್ಗುರುವಿನಲ್ಲಿ
ಯೂ ಭಕ್ತ್ಯಾದ್ಯುಪಚಾರಂಗಳಂ ಮಾಡಬೇಕು (ಯಥಾಗುರೌ ತಥಾ
ಲಿಂಗೇಭಕ್ತಿರ್ಮಾನ್ಯ ರಿವರ್ತತೇ ಜಂಗಮೇಚ ತಥಾನಿತ್ಯಂ ಭಕ್ತಿಂ ಕುರ್ಯಾದ್ವಿಚ
ಕ್ಷಣಃ) ಎಂದರೆ ವಿಚಕ್ಷಣನಾದ ಶಿವಭಕ್ತನು ಗುರುವಿನಲ್ಲಿಯೂ ಲಿಂಗದಲ್ಲಿ
ಯೂ ಹ್ಯಾಗೆ ಭಕ್ತಿಯುಳ್ಳವನಾಗಿರುವನೋ ಹಾಂಗೆಯೇ ಜಂಗಮದಲ್ಲಿ
ಯೂ ಭಕ್ತಿಯಂ ಮಾಡಬೇಕ (ಶಿವಯೋಗೀ ಶಿವಸ್ಸಾಕ್ಷಾದಿತಿಕ್ಯಂಕರ್ಯಭ
ಕ್ತಿತಃ। ಪೂಜಯೇದಾದರೇಣೈವ ಯಥಾಲಿಂಗಂ ಯಥಾಗುರುಂ) ಎಂದರೆ ಶಿವಲಿಂ
ಗಮೂರ್ತಿಯನ್ನು ಗುರುವನ್ನೂ ಹ್ಯಾಗೆ ಪೂಜಿಸುವನೋ ಹಾಂಗೆಯೇ
ಮಯೋಗೀಶ್ವರನಾದ ಜಂಗಮ ಮೂರ್ತಿಯನ್ನು ಪ್ರತ್ಯಕ್ಷ ಶಿವನೆಂದ
ಭಾವಿಸಿ ಆದರದೊಡನೆಕೂಡಿದಭಕ್ತಿಯಿಂ ಪೂಜಿಸಬೇಕೆಂಬಿವೇ ಮೊದಲ
ಪ ಪೂರ್ವೋಕ್ತ ವಚನ ಬಾಲಗಳ ಪರ್ಯಾಲೋಚನೆಯಿಂ ಶಿವಗುರುಚ
ಮೂರ್ತಿಗಳರ್ಚನೆಯು ಒಂದೇ ಪ್ರಕಾರವೆಂದು ತಿಳಿಯುವದರಿಂದ ಅಭೇ
ದಭಾವನವಾವಶ್ಯಕವಾದ್ದರಿಂ ಗುರುಜಂಗಮಪಾದಪೂಜೆಯುಂ ಮಾಡಬೇ
ಕೆಂಬಲ್ಲಿ ತದ್ವಿಧಾನವಂ ಸಂಕ್ಷೇಪವಾಗಿ ಸೂಚಿಸುವನದೆಂತೆನೆ

ಪೂಜಕಂ ಪ್ರಾತಃಕಾಲೀನಾಹ್ನಿಕಾನಂತರಂ ಮಾಧ್ಯಾಹ್ನಿಕಪೂಜಾ ಪ್ರಾ
ರಂಭದಲ್ಲಿ ಭಕ್ತಸ್ಥಲೋಕ್ತಕ್ರಿಯಾನಂತರಂ ಮಾಹೇಶ್ವರಸ್ಥಲ ಪ್ರವೇ
ಕ್ಕೆ ಪೂರ್ವಭಾವಿ ಗುರುಜಂಗಮಾರ್ಚನಕಾಲವಾವುದರಿಂ ಇಲ್ಲಿ ಭಕ್ತಮಾ
ಹೇಶ್ವರ ಪ್ರಸಾದಿ ಪ್ರಾಣಲಿಂಗಿ ಸ್ಥಲೋಕ್ತ ಕ್ರಿಯೆಗಳಂ ಸಾಂಗವಾ
ನೆರವೇರಿಸಿ ಶರಣ ಸ್ಥಲದಲ್ಲಿ ಇರುವಂಥಾ ಪೂಜ್ಯನ ಸಮೀಪವಂ ಸೈದಿ ಗ
ರುಮೂರ್ತಿಯಾಗಿದ್ದಲ್ಲಿ ಶ್ರೀಮದ್ರುದ್ರನಿಟಿಲಲೋಚನ ಜ್ವಲಜ್ವಾಲಾ
ಗ್ಧಪುನರ್ಜೀವಿತ ಮದನ ಪ್ರೋಜ್ವಲಿತ ಬಡಬಾಲನ ಸಂತಾಪಿತ ವಿಷಮ
ಸಂಗಪ್ರಚುರತರಂಗಸಂಗವೇಗಾಹಾವರ್ತದುಸ್ತರಸಂಸಾರಘೋರಾರ್ಣ
ಪತಾರಕಪ್ಲವರೂಪಶಿವಜ್ಞಾನಪ್ರದ, ಲೋಭಸಂಕೇಂದ್ರಿಯಾರಾತಿವೈ

ಪಿಶಾಚಕ್ರೋಧವ್ಯಾಘ್ರಮಪುತ್ರಾಹಿಕನ್ಯಾಮದನಚೋರ ಮದಾಂಧಕಾರ ತಾಪತ್ರಯಗರ್ತವಿಷಕಂಟಕಾಸೂಯಾವಿಷಲತಾಹಂಕಾರವಿಷಹ್ರದಾದಿ ಮಹದುಪದ್ರವ ವಿಶಿಷ್ಟಸಂಸಾರ ಕಾಂತಾರಭೇದಕಉತಾರ ಶಿವಜ್ಞಾನದಾಯಕದೀಕ್ಷಾಗುರೋಶಿಕ್ಷಾದೇಶಿಕ ಭವದರ್ಶನಾರ್ಥಂ ಆಜ್ಞಾದೀಯತಾಂ ಎಂಬದಾಗಿ ವಿಜ್ಞಾಪಿಸಿ ದೀರ್ಘದಂಡ ನಮಸ್ಕಾರವಂ ಮಾಡುವದು. ಜಂಗಮಮೂರ್ತಿಯಾದರೆ

(ಸರ್ವಲೋಕೋಪಕಾರಾಯಯೋದೇವಃಪರಮೇಶ್ವರಃ ।ಚರತ್ಯತಿಥಿರೂಪೇಣನಮಸ್ತೆಜಂಗಮಾತ್ಮನೆ)ಎಂದು ನಮಸ್ಕರಿಸಿ ಆ ಪೂಜ್ಯನ ಮುಂದುಗಡೆ ಆಸನದಲ್ಲಿ ಕುಳ್ಳಿರ್ದುಪೂಜಾಸಾಧನ ದ್ರವ್ಯಂಗಳನ್ನಿರಿಸಿಕೊಂಡು ಪಾದ ಪೂಜೆಯುಂ ಮಾಡುವದು. ಇಲ್ಲಿ ಪಾದಪೂಜೆಯುಂಮಾಡಬೇಕಾದರೆ ಭಕ್ತಿಯೊಡನೆ ಕೂಡಿ ನಮಸ್ಕರಿಸಿ ಆಸನದಲ್ಲಿ ಕುಳ್ಳಿರ್ದು ಶುದ್ಧೋದಕದಿಂ ಹಸ್ತ ಪ್ರಕ್ಷಾಳನಂಗೈದು ಪ್ರಾಣಾಯಾಮತ್ರಯಮುಂಮಾಡಿ ( ಉಪಾತ್ತದುರಿತಕ್ಷಯದ್ವಾರಾಶ್ರೀಪರಮೇಶ್ವರಪ್ರೀತ್ಯರ್ಥಂಜಂಗಮಪಾದಪೂಜಾಂಕರಿಷ್ಯೆಯಂದು ಸಂಕಲ್ಪಿಸಿ,ಆ ಚರಮೂರ್ತಿಯ ಪಾದಂಗಳಂತನ್ನವಾಮಹಸ್ತದಲ್ಲಿರಿಸಿಕೊಂಡು(ಚರಮೂರ್ತಿಶ್ಶಿವಸ್ಸಾಕ್ಷಾತ್ಪಾಶಮುಕ್ತಃಪರಶ್ಶಿವಃ ।ವಸತ್ಯಂಘ್ರಿದ್ವಯೇಹ್ಯಸ್ಯತ್ರೈಲೋಕ್ಯಂಸಚರಾಚರಂ ।ಅಂಗುಷ್ಠಾಗ್ರೇಷ್ಯಷ್ಟಷಷ್ಟಿತೀರ್ಥಾನಿನಿವಸಂತಿಚ।ನಕ್ಷತ್ರಗ್ರಹಬೃಂದಾನಿಗುಲ್ಫೆತಸ್ಯವಸಂತಿವೈ । ಸಪ್ತಾಬ್ಧಯಶ್ಚಪಾದಾಧಸ್ತದೂರ್ಧ್ವೇಕುಲಪರ್ವತಾಃ। ಜಂಘಯೋರ್ವಸತೇನಿತ್ಯಂಷಟ್ತ್ರಿಂಶತ್ತತ್ವಬೃಂದಕಂ) ಹೀಗೆಂದು ನಮಸ್ಕರಿಸಿ ಭಸ್ಮವಂ ಸಮರ್ಪಿಸಿ, ಸ್ನಾನಾದ್ಯುಪಚಾರಂಗಳಂಮಾಡಿ

(ಪುಷ್ಪೈರ್ನಾನಾವಿಧೈಸ್ಸ್ತೋತ್ರೈರ್ಮಾಲ್ಯೈಶ್ಚೈವಸುಗಂಧಿಭಿಃಶ್ರೀಗುರೋರ್ವಿಗ್ರಹಸ್ಯಾಸ್ಯಕಂಧ●ಸಂಧ●ಪ್ರಪೂಜಯೇತ್) ಹೀಗೆಂಬ ವಚನದತ್ತಣಿಂದೀಪ್ರಕಾರಂ ಪೂಜಿಸಿ,ಸರ್ವೋಪಚಾರಂಗಳಂ ಮಾಡಿ ನಿರ್ಮಾಲ್ಯವಂ ವಿಸರ್ಜಿಸಿ,ಪಾದ ಶಬ್ದದಿಂದಂಗುಷ್ಠ ಮಾತ್ರವನ್ನಲ್ಲದೆ ವಿಶಿಷ್ಟಪಾದದ್ವಯಮುಂ ಪಾತ್ರೆಯಲ್ಲಿರಿಸಿ ಮೂಲಮಂತ್ರದಿಂದಭಿಷೇಕವಂಮಾಡಿ ಆ ತೀರ್ಥಮುಂಸ್ವರ್ಣಾದಿ ಪಾತ್ರೆಯುಳ್ಳಿ ತುಂಬಿ,ಗಂಧ ಪುಷ್ಪಾಕ್ಷತೆಗಳಿಂಪೂಜಿಸಿ ನೈವೇದ್ಯ ಸಮರ್ಪಣೆಯುಂಮಾಡಿ ‹‹ಇಮಮ್ಮೆ ಗಂಗೆ ಯಮುನೆ,, ಎಂಬ ಮಂತ್ರದಿಂದಲೂ‹‹ಕದ್ರುದ್ರಾಯಪ್ರಚೇತಸೆ,, ಎಂಬ ಮಂತ್ರದಿಂದಲೂ‹‹ಮಾತಾ ರುದ್ರಾಣಾಂ ದುಹಿತಾ,, ಎಂಬ ಮಂತ್ರದಿಂದಲೂ ಅಭಿಮಂತ್ರಿಸಿ

ಪಾದೋದಕಂಯಥಾಭಕ್ತ್ಯಾಸ್ವೀಕರೋತಿಮಹೇಶಿತುಃ
ತಥಾಶಿವಾತ್ಮನೋರ್ನಿತ್ಯಂಗುರುಜಂಗಮಯೋರಪಿ ॥
ಎಂಬ ವಚನದಿಂ ಶಿವಪಾದೋದಸ್ವೀಕಾರವತ್‌ಗುರುಚರಪಾದೋದಕವಂ ಸ್ವೀಕರಿಸಬೇಕಾದುದರಿಂ ಸುವರ್ಣ, ರಜತಾದಿ ಪಾತ್ರೆಯೊಳ್ಪಡೆದುಕೊಳ್ಳ ತೀರ್ಥವಂ ದಕ್ಷಿಣಹಸ್ತತಲದಲ್ಲಿತೆಗದುಕೊಂಡು ವಾಮಹಸ್ತದಲ್ಲಿರುವಇಷ್ಟ ಲಿಂಗಕ್ಕೆರೆದು(ಋತಂಸತ್ಯಂ)ಎಂಬ ಮಂತ್ರದಿಂಪಾದೋದಕಸ್ವೀಕಾರವಂ ಮಾಡಬೇಕೆಂಬುವದು ಸಕಲ ವೀರಶೈವ ಶಾಸ್ತ್ರ ತತ್ವಾರ್ಥ ಪರ್ಯಾಲೋಚ ನಯಿಂ ನಿಶ್ಚಯಿಸಲ್ಪಟ್ಟವಿಧಾನವಿಮಸತ್ಪುರುಷರಿಂದಂಸ್ವೀಕರಿಸಲ್ತಕ್ಕುದು

ಅದರೆಏಕತ್ರಬಹುಜನ ಮಹೇಶ್ವರರು ಇಲ್ಲದೆ ಅವರುಗಳು ಭಕ್ತಸ್ಥಲ ಕ್ರಿಯೆಗೋಸ್ಕರ ಪ್ರತ್ಯೇಕಪ್ರತ್ಯೇಕವಾಗಿ ಚರಾರ್ಚನೆಯಂ ಮಾಡತಕ್ಕ ದ್ದೋ ಎಂದರೆ ತೀರ್ಥ ಸಂಪಾದನಾರ್ಥವಾಗಿ ಚರಪಾದಪೂಜೆಯಂ ಮಾ ಡುವ ಮಾಹೇಶ್ವರನು ಭಕ್ತಸ್ಥಲದಲ್ಲಿರುವಮಾಹೇಶ್ವರರಂ ನಮಸ್ಕರಿಸಿ ಅವ ರಪಾದ ಸ್ಪರ್ಶವಂಮಾಡಿಕೊಂಡು ಅವರಿಂ ಧರಿಸಲ್ಪಟ್ಟ ಭಸ್ಮವುಳ್ಳವನಾ ಗಿಈ ಪ್ರಕಾರವಾಗಿ ಎಷ್ಟುಜನ ಮಹೇಶ್ವರರಿದ್ದರೂಕ್ರಮವಾಗಿ ನಮಸ್ಕರಿಸಿ ಅವರಾಜ್ಞೆಯುಂಪಡೆದು ಬಂದು ಪಾದಾರ್ಚನಾದಿ ತೀರ್ಥಪೂಜಾಂತವಾಗಿ ಮಾಡಿ ಈ ಪೂಜಕನು ಪಾರ್ಶ್ವ ದಲ್ಲಿಕುಳಿತುಕೊಂಡಿರಲು;ಆ ಮಹೇಶ್ವರರು ಯಾವ ಕ್ರಮದಲ್ಲಿ ಭಸ್ಮವಂ ಧರಿಸಿದರೋಆ ಕ್ರಮದಲ್ಲಿಯೇ ಒಬ್ಬರೊಬ್ಬ ರೇ ಸೂಕ್ಷ್ಮವಾಗಿ ಜಲ,ಭಸ್ಮ,ಗಂಧ, ಅಕ್ಷತೆ,ಪುಷ್ಪಗಳಂ ತೆಗದುಕೊಂಡು ಬಂದು ನಮಸ್ಕರಿಸಿ;ಪೂಜ್ಯರ ಪಾದಕ್ಕೆಸಮರ್ಪಿಸಿ ವಾಮಹಸ್ತದೊಳಿಷ್ಟಲಿಂ ಗವುಂ ತೆಗೆದಿಟ್ಟುಕೊಂಡು,ತೀರ್ಥಕ್ಕೆರಗಿ,ಪಂಚಾಂಗುಲಿಗಳಿಂ ತೀರ್ಥವಂ ತೆಗದುಕೊಂಡು ಲಿಂಗದಮೇಲೆರೆದು, ಪೂರ್ವೋಕ್ತಮಂತ್ರದಿಂ ಸ್ವೀ ಕರಿಸುವದು. (ಇಲ್ಲಿ ಭಸ್ಮವಂ ಅವರು ಪೂಜಕನಿಗೆ ಯಾತಕ್ಕೆಧರಿಸಬೇಕೆಂ ದರೆತಾವುಮಾಡತಕ್ಕಚರಾರ್ಚನೆಯುಇವನಿಂಮಾಡಲ್ಪಡುವದಕ್ಕಾಗಿಕೊಡ ಲ್ಪಟ್ಟವರಣರೂಪವುಎಂದು ತಿಳಿಯಲ್ತಕ್ಕುದು) ಆಬಳಿಕಪೂಜಕನು ಹಾಗೆ ತೀರ್ಥವಂ ನಿಶ್ಶೇಷವಾಗಿ ತೆಗದುಕೊಂಡು ಅನಂತರಂ ಪೂಜ್ಯರಿಗೆ ಶಿವಾ ರ್ಪಣೆಗೋಸ್ಕರ ಸಮಸ್ತ ಪದಾರ್ಥಂಗಳನ್ನು ಶಿವಭಾಜನದಲ್ಲಿ ನೀಡಲು, ಪೂಜ್ಯರು ಯಥಾವಿಧಿಯಾಗಿ ಇಷ್ಟಲಿಂಗಕ್ಕೆಪದಾರ್ಥವಂ ಸಮರ್ಪಿಸಿಐಕ್ಯ ಸ್ಥಲಪ್ರವಿಷ್ಟರಾಗಿ ಶಿವ ಪ್ರಸಾದವಂ ಸ್ವೀಕರಿಸಿದನಂತರಂ

ಯಥಾಶಿವಪ್ರಸಾದಾನ್ನಂಸ್ವೀಕಾರ್ಯಂಲಿಂಗತತ್ಪರೈಃ

ತಥಾಗುರೋಃಪ್ರಸಾದಾನ್ನಂತಥೈವಶಿವಯೋಗಿನಾಂ

ಎಂದರೆ ಶಿವ ಪ್ರಸಾದವಂ ಸ್ವೀಕರಿಸುವಂತೆ ಗುರುಚರ ಪ್ರಸಾದ ವನ್ನೂಸ್ವೀಕರಿಸಬೇಕೆಂದು ಪ್ರಮಾಣವಿರುವದರಿಂ ಚರಪ್ರಸಾದಾನ್ನವನ್ನು ತೀರ್ಥವಂ ಸ್ವೀಕರಿಸಿದ ಕ್ರಮದಲ್ಲಿಯೇ ನಮಸ್ಕರಿಸಿ ಬಂದು ಪೂಜ್ಯರಿಂ ಕೊಡಲ್ಪಟ್ಟ ಪ್ರಸಾದ ಸಿಕ್ಥಗಳಂ ತೆಗದುಕೊಂಡು ಮೂಲಮಂತ್ರದಿಂ ಸ್ವೀಕರಿಸುವನು. ಪ್ರಕಾರಾಧಿಕನಾದೊಡೆ ಬಟ್ಟಲಲ್ಲಿ ತೆಗದುಕೊಳ್ಳಬೇಕು. ಅನಂತರಂ ಯಥಾಸ್ಥಾನವನ್ನೈದಿ ಕುಳ್ಳಿರ್ದು ಮಾಹೇಶ್ವರಸ್ಥಲಪ್ರವಿಷ್ಟ ನಾಗಿ ಕ್ರಮವಾಗಿ ಶಿವಾರ್ಚನೆಯಮ್ಮಾಡುವದು ಆದರೆ ಗುರುಜಂಗಮರ ಪಾದೋದಕ ಪ್ರಸಾದಂಗಳಂ ಲಿಂಗಕ್ಕೆ ಸಮರ್ಪಿಸದೆ ಸ್ವೀಕರಿಸುವದು ಮತ್ತೊಂದು ಪಕ್ಷ ಅದಕ್ಕೆ ಸಾಧಕವಾಗಿ ಅವರು ಹೇಳುವದೇನಂದರೆ;— (ಅನಿವೇದ್ಯಚಭುಂಜಾನೋನರೋಭವತಿಕಿಲ್ಬಿಷೀ) ಎಂಬ ವಚನದಿಂ ಶಿವ ಲಿಂಗಕ್ಕೆ ಸಮರ್ಪಿಸದೆ ಸ್ವೀಕರಿಸಿದರೆದೋಷವಿಲ್ಲವೋ ಎಂದರೆ ಆ ವಚ ನವು ಪದಾರ್ಥಪರವಾದ್ದರಿಂದದೋಷಜ್ಞಾನವು ಭ್ರಾಮಕವು. ಹಾಂಗಾ ದರೆ ಚರವಾದ ತೀರ್ಥ ಪ್ರಸಾದ ಸ್ವೀಕಾರದಲ್ಲಿ ಇಷ್ಟಲಿಂಗಕ್ಕೆಸಮರ್ಪಿ ಸಿ ಸ್ವೀಕರಿಸಬೇಕೆಂಬ ವಿಧಾನಕ್ಕೇನುಗತಿಯೆಂದರೆ ಆ ವಿಧಾನವು ಶಾ ಸ್ತ್ರಾರ್ಥ ಪರ್ಯಾಲೋಚನೆಯಿಂ ತತ್ವವಿಚಾರವಮ್ಮಾಡಿ ಪರಾಮರ್ಶಂಗೆಯ್ಯಲು ಸಂಘಟಿಸುವದಿಲ್ಲವು. ಹ್ಯಾಂಗೆಂದರೆ

(ಏಕಮೂರ್ತಿಸ್ತ್ರಯೋಭಾಗಾಗುರುರ್ಲಿಂಗಂಚಜಂಗಮಂ ।
ಜಂಗಮಶ್ಚಗುರುರ್ಲಿಂಗಂತ್ರಿಧಂತ್ವೇಕಮುಚ್ಯತೇ॥)

ಎಂಬ ವಚನದಿಂ ಒಬ್ಬ ಪರಶಿವನೇ ಗುರುವೆಂದು ಜಂಗಮವೆಂದು ಲಿಂಗವೆಂ ದು ಮೂರು ಪ್ರಕಾರವಾದನು. ಇವು ಮೂರುಒಬ್ಬಪರಶಿವನೇಯೆಂಬುದರಿಂ ದಲೂ ಮತ್ತಂ.

(ಏಕಏವಶಿವಸ್ಸಾಕ್ಷಾತ್ಸರ್ವಾನುಗ್ರಹಕಾರಕಃ।
ಗುರುಜಂಗಮಲಿಂಗಾತ್ಮಾವರ್ತತೇಭುಕ್ತಿಮುಕ್ತಿದಃ )

ಎಂದರೆ ಭುಕ್ತಿಮುಕ್ತಿಗಳ ಕೊಡುವಂಥ ಸರ್ವಾನುಗ್ರಹ ಕಾರಕನಾದ ಸಾಕ್ಷಾತ್ಪರಶಿವನೊಬ್ಬನೇಗುರುಲಿಂಗಜಂಗಮಾತ್ಮಕನಾದನು. ಮೂರ್ತಿತ್ರ ಯಸ್ವರೂಪೈಕ್ಯವಾದ್ದರಿಂದ ಪರಸ್ಪರಪ್ರಸಾದೈಕ್ಯವಾಯಿತಾಗಿ ಸಮರ್ಪ ಣೆಯು ಸಂಭವಿಸುವದಿಲ್ಲವು ಮತ್ತಂ

(ಪ್ರಥಮಂಪೂಜಯೇದ್ರುದ್ರಂ) ಎಂಬುದು ಮೊದಲಾಗಿ

ಸರ್ವಲಿಂಗಮಯಂಧ್ಯಾತ್ವಾಪಾದಂಜಂಗಮಲಿಂಗಿನಃ ।
ಪ್ರಕ್ಷಾಳಿತಂತತ್ತೀರ್ಥಂಪೀತ್ವಾಶಿರಸಿಧಾರಯೇತ್

ಎಂಬ ಪ್ರಸಿದ್ಧ ವಚನದಿಂಸಂಭವಿಸುವದಿಲ್ಲವು. ಹ್ಯಾಗೆಂದೊಡೆ ಜಂಗಮಮೂರ್ತಿಯ ಪಾದವಂಪೂಜಿಸಿ ಪಾದೋದಕವಂ ಪಡಕೊಂಡು ಸ್ವೀಕರಿಸಿ, ಶಿರಃಪ್ರೋಕ್ಷಣವಂಮಾಡಿಕೊಳ್ಳಬೇಕೆಂದುಕ್ತವಾಯಿತಲ್ಲದೆಸ ಮರ್ಪಿಸಿಸ್ವೀಕರಿಸಬೇಕೆಂದುಕ್ತವಾಗಲಿಲ್ಲವಾದುದರಿಂಸಂಘಟಿಸುವದಿಲ್ಲವು. ಮತ್ತಂ (ಅರ್ಪಿತಾನ್ಯರ್ಪಯೇದ್ಯಸ್ತುರೌರವಂನರಕಂವ್ರಜೇತ್) ಎಂಬ ವೀರಾಗಮ ವಚನದ ದೆಸೆಯಿಂ ಶಿವಲಿಂಗಕ್ಕೆಸಮರ್ಪಿಸಲ್ಪಟ್ಟುದನ್ನುಸಮ ರ್ಪಿಸಿದೊಡೆ ದೋಷಪ್ರಾಪ್ತಿಯಾಗುವದರಿಂ ಸಂಭವಿಸುವದಿಲ್ಲವು. ಮತ್ತಂ ಶಿವಾರ್ಪಣಕಾಲದಲ್ಲಿ ನಿವೇದನಕ್ಕೆ ಯೋಗ್ಯವಾದುದು ಪದಾರ್ಥವು. ಆ ಯಾ ಪದಾರ್ಥ ಭಾವನೆಯಿಂ ಹೊರತು ಸಮರ್ಪಣೆಯಾಗುವದಿಲ್ಲವಾಗಿ (ಪ್ರಸಾದಸ್ಯಪದಾರ್ಥತ್ವಂದೋಷಾಯಭವತಿಧ್ರುವಂ)ಎಂಬುದರಿಂಪ್ರಸಾ ದದಲ್ಲಿ ಪದಾರ್ಥತ್ವಂ ಹೇಳುವದು ದೋಷಕ್ಕೋಸ್ಕರವಾಗತ್ತಂದೆಸೆಶ್ಚಯ ವು ಎಂಬ ವಾತುಲಾಗಮ ವಚನದಿಂದಿಲ್ಲಿ ಶಿವಲಿಂಗ ಚರಪ್ರಸಾದಕ್ಕೆಪದಾ ರ್ಥತ್ವವನ್ನು ಭಾವಿಸುವದಿಲ್ಲವು. ಮತ್ತಂ

ಮಹತಾಲಿಂಗರೂಪೇಣಮಹತಾಜಂಗಮೇನಚ ।
ದ್ವಿವಿಧೇನಸಮುದ್ಭೂತಪ್ರಸಾದಾಯನಮೋನಮಃ ॥

ಎಂಬಪುರಾಣವಚನದಿಂ ಅಲ್ಲಿಚರಮೂರ್ತಿಯಿಂ ಶಿವಲಿಂಗಕ್ಕೆಸಮರ್ಪಿತವಾದ ದ್ದರಿಂದಆ ಶಿವಲಿಂಗ ಮುಖದಿಂದಲೂಅನಂತರ ತತ್ಪ್ರಸಾದವನ್ನು ಚರಮೂ ರ್ತಿಯು ಸೇವಿಸಿದ್ದರಿಂದ ಈಚರಮೂರ್ತಿ ಮುಖದಿಂದಲೂ ಹುಟ್ಟಿದಂಥ ಪ್ರಸಾದಕ್ಕೋಸ್ಕರ ನಮಸ್ಕಾರವುಎಂದು ಹೇಳಿಸ್ವೀಕರಿಸಬೇಕಾಗಿರುವದ ರಿಂದಪುನಃಸಮರ್ಪಣೆಯುಸಂಭವಿಸುವದಿಲ್ಲವು ಮತ್ತುಲಿಂಗದ್ವಯಪ್ರಸಾ ದಂಚಯೋಭುಂಜೇತ್ ಶ್ರದ್ಧಯಾನ್ವಿತಃ।ತದೀಯೋಚ್ಛಿಷ್ಟಸಾಸಾದ್ಯಸರ್ವ ಯಾಂತಿಪರಾಂಗತಿಂ ಎಂಬ ವಚನದಿಂ ಅಲ್ಲಿಯೆ ಸ್ಥಿರಚರಲಿಂಗಗಳು ಕ್ರಮ ವಾಗಿ ಭುಂಜಿಸಿದ್ದು ಲಿಂಗದ್ವಯಪ್ರಸಾದವು; ಅದು ಭುಂಜಿಸಬೇಕೆಂದು ಹೇಳಿದ್ದರಿಂದಲೂ ಸಂಭವಿಸುವದಿಲ್ಲವು ಮತ್ತಂ ಪೂಜಕನಾದವನು ಪೂಜ್ಯ ನಂ ಶಿವಸಮಾನನೆಂದು ಭಾವಿಸಬೇಕೆಂದು ವಚನವಿರುವದರಿಂದಾರೀತಿಯಲ್ಲಿ ಯೇ ಪೂಜಕನು ಗುರುಚರಮೂರ್ತಿಗಳುಶಿವಸಮಾನರೆಂದು ಭಾವಿಸಿಕೊ ಳ್ಳುವದರಿಂ ಸಮರ್ಪಣೆ ಸಂಭವಿಸುವದಿಲ್ಲವು. ಮತ್ತಂ ಪ್ರಪಂಚದೊಳ್

ಪೂಜ್ಯನಪ್ರಸಾದವು ಪೂಜಕನಿಂ ಸೇವಿಸಲ್ಪಡುವದಕ್ಕೆ ಯೋಗ್ಯವು. ಇಲ್ಲಿ ಸರ್ವಜಗನ್ನಾಯಕನಾದ ಪರಮೇಶ್ವರನು ಪೂಜ್ಯನು. ಮಿಕ್ಕ ಬ್ರಹ್ಮಾದಿ ಮನುಷ್ಯಾಂತವಾಗಿ ಪೂಜಕರಾದುದರಿಂ ಸಂಭವಿಸುವದಿಲ್ಲವು. ಅಂಥಾ ಪರಬ್ರಹ್ಮ ವಿಷಯಕವಾದ ಜ್ಞಾನಬಲದಿಂದ ತನ್ನ ಚಿತ್ಕ್ರಿಯಾ ಶಕ್ತಿಗಳಿಂ ವಿಶ್ವಪ್ರಕಾಶನಾದ ಶಿವನು ಅತಿಶಯದೊಳವನೆ ಮಾಯಾಕಾರ್ಯಕೋಟಿಪ್ರವಿಷ್ಟಂಗಳಾದ ಸಮಸ್ತ ಪದಾರ್ಥಂಗಳಂ ಅನಿತ್ಯವೆಂದು ತಿಳಿದು ಅದಂ ಮೀರಿ ಅದಕ್ಕೆ ಜೀವನಭೂತವಾದಜ್ಞಾತೃಕರ್ತೃತ್ವಸ್ವಭಾವನಾದವನನ್ನಾಗಿತಿಳಿದು ಅಂಥಾ ಜೀವೇಶ್ವರ ಸಾಧಾರಣವಾದ ಅಸ್ಮದ್ರೂಪಾತ್ಮಕತ್ವಾಭಿನ್ನ ಶಿವನೇ ತಾನೆಂಬ ದೃಢನಿಶ್ಚಯದಿಂ ಸ್ವಸ್ವರೂಪವಂ ತಿಳಿದರೂ ಅವನೇ ಆತನಾದುದರಿಂ ಸಂಭವಿಸುವದಿಲ್ಲವು. ಇಲ್ಲಿ ಯಾರು ಪೂಜ್ಯರು ಯಾರು ಪೂಜಕರು ಎಂದರೆ (ಅನ್ಯೋನ್ಯಗುರುವೋಭಕ್ತಾಃ) ಎಂಬ ವಚನದಿಂ ಪರಸ್ಪರ ಪೂಜ್ಯರು ಪರಸ್ಪರ ಪೂಜಕರು ಯೆಂದು ತಿಳಿಯಲ್ತಕ್ಕದು. ಹಾಗಾದರೆ ಶಿವಗುರು ಚರಮೂರ್ತಿಗಳಿಗೆ ಭೇದವಿಲ್ಲದುದರಿಂ ಪ್ರತ್ಯೇಕವಾಗಿ ಗುರುಚರ ಮೂರ್ತಿಗಳನ್ನು ಏನುಕಾರಣ ಪೂಜಿಸಬೇಕು. ಪರಸ್ಪರ ಶಿವಪಾದೋದಕ ಪ್ರಸಾದವೇ ಗುರುಚರಪಾದೋದಕ ಪ್ರಸಾದವು ಎಂಬುವದರಿಂ ಪ್ರತ್ಯೇಕವಾಗಿ ಗುರುಚರ ತೀರ್ಥಪ್ರಸಾದವಂ ಏನು ಕಾರಣ ಸ್ವೀಕರಿಸಬೇಕೆಂದರೆ

(ಪಾದೋದಕಂಯಥಾಭಕ್ತ್ಯಾ) ಎಂಬ ವಚನದಿಂದಲೂ ಮತ್ತಂ
( ಯಥಾಶಿವಪ್ರಸಾದಾನ್ನಂ ) ಎಂಬ ವಚನದಿಂದಲೂ ಮತ್ತಂ
(ಯಥಾದೇವೇ ಜಗನ್ನಾಥೆ) ಎಂಬ ವಚನದಿಂದಲೂ ಮತ್ತಂ

ಯಸ್ಯದೇವೆಪರಾಭಕ್ತಿರ್ಯಥಾದೇವೇತಥಾಗುರೌ ಎಂಬ ಶ್ರುತಿಯಿಂದಲೂ ಮತ್ತಂ (ಯಥಾಗುರೌಯಥಾಲಿಂಗೆಭಕ್ತಿರ್ಮಾನ್ಪರಿವರ್ತತೆ।ಜಂಗಮೆಚತಥಾನಿತ್ಯಂಭಕ್ತಿಂಕುರ್ಯಾದ್ವಿಚಕ್ಷಣಃ) ಯೆಂಬ ಪೂರ್ವೋಕ್ತವಚನಗಳತ್ತಣಿಂ ಗುರುಚರ ಪೂಜೆಯು ತತ್ಪಾದೋದಕ ಪ್ರಸಾದ ಸ್ವೀಕಾರವು ವಿಧಿ ಪ್ರಾಪ್ತವಾದುದರಿಂ ಸರ್ವಥಾ ಬಿಡದಾಚರಿಸತಕ್ಕದು ಎಂದು ಸತ್ಯವು. ಮತ್ತು ಈ ವಚನಗಳಿಂದಲೂ ಗುರುಚರ ಪಾದತೀರ್ಥ ಪ್ರಸಾದವಂ ಇಷ್ಟಲಿಂಗಕ್ಕೆ ಸಮರ್ಪಿಸಬೇಕೆಂಬ ವಿಧಾನವು ಪೂರ್ವಪಕ್ಷವಂ ಪಡೆಯುತ್ತಲಿವೆ. ಅದು ಹ್ಯಾಗೆಂದರೆ ಶಿವಪಾದೋದಕವಂ ಹ್ಯಾಗೆ ಭಕ್ತಿಯಿಂ ಸ್ವೀಕರಿಸುವರೋ ಮತ್ತಂ ಶಿವಪ್ರಸಾದವಂ ಹ್ಯಾಗೆ ಭಕ್ತಿಯಿಂ ಸ್ವೀಕರಿಸುವರೋ

ಹಾಂಗೆಯೇ ಗುರುಚರ ಪಾದತೀರ್ಥವಂ ಪ್ರಸಾದವಂ ಸ್ವೀಕರಿಸಬೇಕೆಂಬಲ್ಲಿ ಶಿವ ಪ್ರಸಾದವು ಉಪಮಾನವಾಯಿತು; ಗುರುಚರಪ್ರಸಾದವು ಉಪಮೇಯ ಮಾಯಿತು; ಆದ್ದರಿಂದಲೇ ಶಿವಪಾದೋದಕವತ್ ಗುರುಚರ ಪಾದೋದಕ ವಂಸ್ವೀಕರಿಸಬೇಕೆಂತಲೂ ಶಿವಪ್ರಸಾದವತ್ ಗುರುಚರ ಪ್ರಸಾದವಂಸ್ವೀ ಕರಿಸಬೇಕೆಂತಲೂ ವಚನವು ಪ್ರವರ್ತಿಸಿತಲ್ಲದೆ ಸಮರ್ಪಿಸಿ ಸ್ವೀಕರಿಸಬೇ ಕೆಂಬದಾಗಿ ವಚನವು ಪ್ರವರ್ತಿಸಲಿಲ್ಲವಾಗಿ ಸಂಭವಿಸುವದಿಲ್ಲವು. ಆದರೂ (ತಸ್ಮಾಲ್ಲಿಂಗೇ ಪ್ರಸಾದಂಚನಿರ್ಮಾಲ್ಯಂ ಪಜ್ಜಲಂ ತಥಾ। ಅರ್ಪಯೇಚ್ಚರಲಿಂಗ ಸ್ಯಶೃಣುಷಣ್ಮುಖಸರ್ವದಾ) ಎಂಬ ವಿಶೇಷ ವಚನದಿಂ ವಿಧಿಪ್ರಾಪ್ತ ವಾಯಿತಾಗ್ಗಿ ಮತ್ತಂ ಅಭ್ಯನುಜ್ಞೆ ಇರುವದರಿಂದಲೂ ಪೂಜಕನು. ಗುರುಚರಪಾದೋದಕಪ್ರಸಾದಗಳಂ ಇಷ್ಟಲಿಂಗಕ್ಕೆ ಸಮರ್ಪಿಸಿ ಸ್ವೀಕರಿ ಸಬೇಕೆಂಬುದಂಗೀಕರಿಸಲ್ತಕ್ಕುದು. ಇಲ್ಲಿಸ್ವೀಕರಿಸಬೇಕಾದರೆ ಪೂರ್ವೋ ಕ್ತಪ್ರಕಾರವಾಗಿ ಕೊಡಲ್ಪಟ್ಟತೀರ್ಥವಂ ದಕ್ಷಿಣಹಸ್ತತಲದಲ್ಲಿ ತೆಗದು ಕೊಂಡು ಶಿವಲಿಂಗಕ್ಕೆ ಸಮರ್ಪಿಸಿ ಸ್ವೀಕರಿಸತಕ್ಕುದು. ಇಲ್ಲಿಸಮರ್ಪಣೆಯ ಲ್ಲದೆಅಭಿಷೇಕವುಸಂಭವಿಸುವದಿಲ್ಲವು. (ಹೀಗಿದ್ದಾಗ್ಯೂ ಚರಸ್ಯಪಾದತೀರ್ಥೇ ನಲಿಂಗಮಜ್ಜನಮುಕ್ತಮಾಂ) ಎಂಬ ಬಲವತ್ತರವಾದ ವಿಶೇಷ ವಚನ ಪ್ರ ಮಾಣದಿಂದಲೂ, ಪುರಾತನದ ಸಂಪ್ರದಾಯದಿಂದಲೂ, ಜಂಗಮಪಾದೋ ದಕವಂ ಇಷ್ಟಲಿಂಗಕ್ಕಭಿಷೇಕಿಸಿ, ತೆಗೆದುಕೊಳ್ಳಬೇಕೆಂಬುವದೇ ಸಿದ್ಧಾಂ ತಮಕ್ಕುಂ. ಗುರುಚರಪಾದತೀರ್ಥಸ್ವೀಕಾರವುತತ್ಪ್ರಸಾದಸ್ವೀಕಾರವು ಏಕಕಾಲಿಕವಾದ್ದರಿಂಪ್ರಸಾದಸ್ವೀಕಾರವಿಷಯವು ತೀರ್ಥಪ್ರಕರಣದಲ್ಲಿ ಯೇ ಹೇಳಲ್ಪಟ್ಟಿತು.

ಇತಿಶ್ರೀಮತ್ಪರಶಿವ ಚರಣ ಕಮಲಾರಾಧಕನಾದ ತತ್ಪ್ರಸಾದಾದಿತ
ನಿರ್ಮಲಜ್ಞಾನ ವೈಭವನಾದನಿಖಿಲನಿಗಮಾಗಮೇತಿಹಾಸ ಸ್ಮೃತಿಪುರಾ
ಣ ಪದವಾಕ್ಯಪ್ರಮಾಣ ಪಾರಾವಾರ ಪಾರೀಣನಾದ ನಿರಾಭಾರಿ
ವೀರಶೈವ ಸಾಮ್ರಾಜ್ಯ ಧುರಂಧರನಾದತೋಟದ ಸಿದ್ಧೇಶ್ವ
ರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ ಷಟ್ಸ್ಥಲಶಾ
ಮುದಿಯೊಳ್ ಅಷ್ಟಾವರಣ ಪ್ರಕರಣೆ ಶಿವಪಾದೋ
ದಕಸ್ವೀಕಾರ ಗುರುಚರ ತೀರ್ಥ ಪ್ರಸಾದ
ಸ್ವೀಕಾರ ಲಕ್ಷಣನಿರೂಪಣಂ.

## ಶಿವಪ್ರಸಾದ ಲಕ್ಷಣವಂ ನಿರೂಪಿಸುವೆನದೆಂತೆನೆ.

(ರುದ್ರೇಣಾತ್ತಮಶ್ನಂತಿರುದ್ರೇಣಪೀತಂಪಿಬಂತಿರುದ್ರೇಣಾಘ್ರಾತಂಜಿಘ್ರಂತಿತಸ್ಮಾದ್ಬ್ರಾಹ್ಮಣಾಃಪ್ರಶಾಂತಮನಸೋವಿದ್ವಾಂಸೋನಿರ್ಮಾಲ್ಯಮೇವಭಕ್ಷಯಂತಿನಿರ್ಮಾಲ್ಯಮೇವನಿಷೇವೇತನಿರ್ಮಾಲ್ಯಮೇವಾಶ್ನಿಯಾತ್ ). ಎಂಬ ಜಾಬಾಲ ಶ್ರುತ್ಯನುಸಾರವಾಗಿ॥ ಶ್ರೇಷ್ಠರುಗಳಾದ ಶುದ್ಧಾಂತಃಕರಣರುಶಿವನಿಂಭುಂಜಿಸಲ್ಪಟ್ಟುದನ್ನೇ ಭುಂಜಿಸುತ್ತಿಹರು. ಶಿವನಿಂದಘ್ರಾಣಿಸಲ್ಪಟ್ಟದನ್ನೇ ಅಘ್ರಾಣಿಸುತ್ತಿಹರು. ಶಿವನಿಂ ಪಾನವಂ ಮಾಡಲ್ಪಟ್ಟುದನ್ನೇ ಪಾನವಂ ಮಾಡುತ್ತಿಹರು.

ಅವ. ಶಿಷ್ಟಾಶ್ಯಾಂತಾಶ್ಚ ರುದ್ರೇಣಭುಕ್ತಮೇವಹಿಭುಂಜತೇ ।
ಘ್ರಾತಮೇವಹಿಜಿಘ್ರಂತಿಪೀತಮೇವಪಿಬಂತಿಚ ॥

ಎಂಬ ಸ್ಕಾಂದ ಪುರಾಣಚನವಪ್ರಮಾಣವನ್ನನುಸರಿಸಿ ಹೇಳುತ್ತೇನೆ

ಮೂ ॥ ಭುಂಜೀಯಾದ್ರುದ್ರಭುಕ್ತಾನ್ನಂರುದ್ರಪೀತಂಜಲಂಪಿಬೇತ್
ರುದ್ರಾಘ್ರಾತಂಸದಾಜಿಘ್ರೇದಿತಿಜಾಬಾಲಿಕೀಶ್ರುತಿಃ॥

ಟೀ ॥ ಶಿವಲಿಂಗಕ್ಕೆ ಸಮರ್ಪಿಸಿದ ಪ್ರಸಾದವನ್ನೇ ಭುಂಜಿಸುವದುಶಿವನಿಗೆ ಸಮರ್ಪಿಸಿದ ಉದಕವಂನ್ನೇ ಪಾನವಂ ಮಾಡುವದು ತತ್ಸಮರ್ಪಿತದ ಕುಸುಮವಂ ವಾಸಿಸುವದು. ಪ್ರಮಾಣಂ.

ಮೂ ॥ ನಿರ್ವಿಕಲ್ಪಧಿಯಾಶಂಭುಭುಕ್ತೋಚ್ಛಿಷ್ಟಾನ್ನಪಾನಕಂ।
ಯೋಭುಂಕ್ತೇಸಗಣಾಧೀಶೋಯಾವಜ್ಜೀವಂಪ್ರತಿಜ್ಞಯಾ ॥

ಟೀ ॥ ಆವನಾನೋರ್ವ ಕೃತಾರ್ಥನು ತನ್ನಪ್ರಾಣ ಪರ್ಯಂತವು ಪ್ರತಿಜ್ಞೆಯೊಡನೆ ನಿಶ್ಚಯಬುದ್ಧಿಯಿಂ ಪರಮೇಶ್ವರನಿಂಭುಂಜಿಸಲ್ಪಟ್ಟ ಮಿಕ್ಕನ್ನಪಾನೀಯವನ್ನು ಭುಂಜಿಸುತ್ತಾನೋ ಅತನು ಗಣಾಧೀಶ್ವರನು.

ಮೂ ॥ ತತಸ್ಸ್ವಯಂಚಭುಂಜೀಯಾಚ್ಛುದ್ಧಮನ್ನಂಯಥಾಸುಖಂ ।
ನಿವೇದಿತಂಚದೇವಾಯತಚ್ಛೇಷಂಚಾತ್ಮಶುದ್ಧಯೇ ॥

ಟೀ ॥ ಅದಕಾರಣದದೆಸೆಯಿಂದತಾನುಅಂತಃಕರಣಪರಿಶುದ್ಧಿಗೋಸ್ಕರ ಈಶ್ವರನಿಗೆ ಸಮರ್ಪಿಸಲ್ಪಟ್ಟ ಶಿವ ಪ್ರಸಾದ ಶೇಷವಾದ ಪವಿತ್ರವಾದನ್ನವನ್ನು ಹ್ಯಾಗೆ ಸುಖಪಹುದೋಹಾಗೆ ಭುಂಜಿಸುವದು.

ಮೂ॥ ಸ್ವೇಷ್ಟಲಿಂಗಸ್ಯಯದ್ದತ್ತಂಚರುಕಂತನ್ನಸಂಶಯಃ ।
ತತ್ಪ್ರಾಶಯೇತ್ಸ್ವಯಂಪ್ರಾಜ್ಞೋಹ್ಯನ್ಯಸ್ಮೈನತುದಾಪಯೇತ್

ಟೀ ॥ ಪ್ರಾಜ್ಞನಾದವನು ನಿರ್ಮಾಲ್ಯವಂಭುಂಜಿಸಕೂಡದೆಂಬ ಸಾಮಾನ್ಯ ವಚನಗಳಿಂದುಂಟಾಗುವಸಂಶಯವಿಲ್ಲದವನಾಗಿಸ್ವಾರಾಧ್ಯವಾದ ಸ್ವೇಷ್ಟಲಿಂಗಕ್ಕೆ ಯಾವದು ನಿವೇದಿತವಾಗಿಹೆಯೋ ಆ ಚರುವನ್ನು ತಾನೇ ಭುಂಜಿಸಬೇಕು. ಅದನನ್ಯರಿಗೆ ಕೊಡಕೂಡದು.

ಅವ. ನಿರ್ಮಾಲ್ಯಧಾರಣ ಪಾದೋದಕ ಪ್ರಸಾದಾನ್ನ ಸೇವನದಿಂದೇನು ಪ್ರಯೋಜನವೆನೆ

ಮೂ ॥ ನಿರ್ಮಾಲ್ಯಧಾರಣಾತ್ಪುತ್ರಸಾಲೋಕ್ಯಂಲಭತೇನರಃ ।ಪಾದೋದಕಸ್ಯಪಾನೇನಸಾಮೀಪ್ಯಂಭಜತೇಸದಾ । ಮತ್ಪ್ರಸಾದೋಪಭೋಗೇನಸಾರೂಪ್ಯಂಪ್ರತಿಪದ್ಯತೇ॥

ಟೀ ॥ ಎಲೈ ಕುಮಾರಸ್ವಾಮಿಯೇ ಎನ್ನ ನಿರ್ಮಾಲ್ಯವನ್ನು ಧರಿಸುವದರತ್ತಣಿಂ ಮನುಷ್ಯನು ಸಾಲೋಕ್ಯವನ್ನೈದುವನು. ಸರ್ವ ಕಾಲದಲ್ಲಿಯೂ ಎನ್ನ ಪಾದ ತೀರ್ಥ ಸ್ವೀಕಾರದಿಂ ಸಾಮೀಪ್ಯವನ್ನೈದುವನು. ನನ್ನ ಶೇಷ ಪ್ರಸಾದ ಭೋಗದಿಂ ಸಾರೂಪ್ಯವನ್ನೈದುವನು.

ಮೂ ॥ ಕದಾಚಿದೀಶಪಾದಾಂಬುನಿರ್ಮಾಲ್ಯಪರಿಮಿಳತಃ ।ಪವನಃಪನ್ನಗೇಶೇನನಿಪೀತಃಪುಣ್ಯಕಾರಿಣಾ ತೇನವಿಶ್ವಂಭರಾಭಾರಧುರೀಣತ್ವಮವಾಪ್ಯತೇ । ಭೋಗೀಶ್ವರತ್ವಮವಲಮೀಶಭೂಷಣತಾಪಿಚ ಸರ್ವಜ್ಞತಾಚಸಂಜಾತಾದೇವೇಂದ್ರನಹಿಂಸಂಶಯಃ। ಸಾಕ್ಷಾತ್ಪ್ರಸಾದಭೋಗೇನಭಕ್ತೋಯಲ್ಲಭತೇಫಲಂ। ತದ್ವಕ್ತುಂನಹಿಮೇಶಕ್ತಿರ್ನಗಿರೋನಗಿರಾಂಪತೇಃ।

ಟೀ ॥ ಎಲೈದೇವೇಂದ್ರನೇ ಒಂದಾನೊಂದುವೇಳೆಯಲ್ಲಿ ಪರಮೇಶ್ವರನಪಾದೋದಕನಿರ್ಮಾಲ್ಯದೊಡನೆ ಕೂಡಿದಂಥಾ ವಾಯುವು ಪುಣ್ಯವಂ ಮಾಡಿದಂಥಾ ಮಹಾಶೇಷನಿಂದ ಪಾನಮಾಡಲ್ಪಟ್ಟಿತು ಆ ಶಿವ ಪ್ರಸಾದ ಸೇವನದಿಂದ ಆಶೇಷನಿಗೆ ಸಕಲಭೂಮಂಡಲದ ಭಾರವಂ ವಹಿಸುವಂಥಾ ಯೋಗ್ಯತೆಯೂ ಚಲನೆ ಇಲ್ಲದ ಸರ್ಪಾಧಿ ಪತ್ಯವೂ, ಪರಮೇಶ್ವರನಿಗಲಂಕಾರವಹತನವೂ ಸರ್ವಜ್ಞತ್ವವೂ ಪಡೆಯಲ್ಪಟ್ಟವೆಂಬಲ್ಲಿ ಸಂದೇಹವಿಲ್ಲ ಪ್ರತ್ಯಕ್ಷ ಶಿವಪ್ರಸಾದಭೋಗದಿಂ ಶಿವಭಕ್ತನುಆವ ಫಲವಂ ಪಡೆಯುತ್ತಿಹನೋಆಫಲವಂಪೇಳಲೋಸ್ಕರ ಎನಗೆ ಸಾಮರ್ಥ್ಯವಿಲ್ಲ. ಮತ್ತು ಸರಸ್ವತಿಗೂ ಬೃಹಸ್ಪತಿಗೂ ಕೂಡಸಾಮರ್ಥ್ಯವಿಲ್ಲವೆಂದುಮಹಾಭಾರತದಲ್ಲಿಮೇ ಹಿಮವಂಶದಲ್ಲಿ ಪುರುಹೂತನಾರದ ಸಂವಾದದವಚನವು.

ಮೂ ॥ ಶಿರಸಾಧಾರಯೆದ್ಭಕ್ತ್ಯಾಯೋನಿರ್ಮಾಲ್ಯಮುಲೋಭತಃ । ಅ
ಹಮೆವಧೃತಸ್ತೇನಸೋಮಸ್ಸೋಮಕಳಾಧರಃ ॥

ಟೀ ॥ ಯಾವನೋರ್ವನು ಶಿವನಿರ್ಮಾಲ್ಯವನ್ನು ಮಸ್ತಕದಿಂ ಭಕ್ತಿಯೊಡನೆ ಕೂಡಿ ಲೋಭವಿಲ್ಲದೆ ಧರಿಸುವನೋ ಆತನಿಂದ ಚಂದ್ರಕಲೆಯಂ ಧರಿಸಿದಂಥಾ ಉಮಾ ಸಮೇತನಾದ ನಾನೇ ಧರಿಸಲ್ಪಟ್ಟೆನು

ಅವ. ಈ ನಿರ್ಮಾಲ್ಯಧಾರಣದಿಂದೇನು ಫಲವೆಂದರೆ ॥

ಮೂ ॥ ನಿರ್ಮಾಲ್ಯಂಧಾರಯೇದ್ಭಕ್ತ್ಯಾಶಿರಸಾಪಾರ್ವತೀಪತೇಃ । ರಾ
ಜಸೂಯಸಹಸ್ರಸ್ಯಫಲಂಭವತಿನಾರದ ॥

ಟೀ ॥ ಎಲೈ ನಾರದಮುನಿಯೇ ಕೇಳು? ಪಾರ್ವತೀವಲ್ಲಭನಾದ ಪರಮೇಶ್ವರನ ನಿರ್ಮಾಲ್ಯವನ್ನು ಯಾವನು ಭಕ್ತಿಯೊಡನೆ ಶಿರಸ್ಸಿನಿಂ ಧರಿಸುವನೋ ಆತಂಗೆ ಸಾವಿರ ರಾಜಸೂಯ ಯಜ್ಞಂಗಳ ಫಲವಹುದು.

ಮೂ ॥ ಪೃಥಿವ್ಯಾಂಯಾನಿತೀರ್ಥಾನಿಯಾನದ್ಯಃಪುಣ್ಯದಾಶ್ಶುಭಾಃ। ಮ
ತ್ಪಾದಸ್ಥಾಪಿತಾನಿತ್ಯಂತಸ್ಮಾದ್ಧಾರ್ಯಂಪ್ರಸಾದಕಂ । ಪಾ
ದೋದಕಂಚನಿರ್ಮಾಲ್ಯಂಭಕ್ತ್ಯಾಧಾರ್ಯಂಪ್ರಯತ್ನತಃ॥

ಟೀ ॥ ಮತ್ತಂ ಭೂಮಿಯಲ್ಲಿ ಆವ ಪುಣ್ಯ ತೀರ್ಥಂಗಳು ಇಹವೋ ಪುಣ್ಯವಂಕೊಡುವಂಥಾಮಂಗಳಕರವಾದ ಆವ ನದಿಗಳಿರುತ್ತಿಹವೋ ಆ ನದಿಗಳೆಲ್ಲವೂ ಆವಾಗಲೂ ಎನ್ನ ಪಾದದಲ್ಲಿರುವವು ಅದುಕಾರಣದಿಂ ನನ್ನ ಪ್ರಸಾದವು ಧರಿಸಬೇಕಾದುದು ಪಾದತೀರ್ಥವು ನಿರ್ಮಾಲ್ಯವು ಭಕ್ತಿಯತ್ತಣಿಂ ಪ್ರಯತ್ನಪೂರ್ವಕವಾಗಿ ಧರಿಸಲ್ತಕ್ಕುದು.

ಮೂ ॥ ನಶ್ಯಂತಿಪಾಪಾನಿಮನೋವಾಕ್ಕಾಯಜಾನಿಚ। ನಿರ್ಮಾ
ಲ್ಯಧಾರಣಂಶಂಭೋಃಪಾದೋದಕನಿಷೇವಣಂ ।ಪ್ರಸಾದಭೋ
ಜನಂಚೇತಿಪ್ರತ್ಯೇಕಂಪಾತಕಾಪಹಂ । ನಿರ್ಮಾಲ್ಯಂಶಿರಸಾಧೃ
ತ್ವಾಭುಕ್ತ್ವಾನೈವೇದ್ಯಮೇವಚ । ತತ್ಪ್ರಸಾದೋದಕಂಪೀ
ತ್ವಾಗಾಣಾಪತ್ಯಂಲಭೆದ್ಧ್ರುವಂ।

ಟೀ ॥ ಮತ್ತಮಾನಿರ್ಮಾಲ್ಯವನ್ನುಧರಿಸುವರುಗಳನ್ನುಮನೋವಾಕ್ಕಾಯಗಳಿಂದ ಪುಟ್ಟಿದ ದೋಷಂಗಳು ನಾಶಂಗಳು ನಶಿಸುವವು ಪರಮೇಶ್ವರನ ನಿರ್ಮಾಲ್ಯವನ್ನು ಧರಿಸುವದು ಶ್ರೀಪಾದ ತೀರ್ಥಪಾನವಂ ಮಾಡುವದು ಶಿವ ಪ್ರಸಾದವಂ ಸ್ವೀಕರಿಸುವದು ಇವು ಒಂದೊಂದೇ ಸಮಸ್ತ ಪಾತಕಂಗಳಂ ಕೆಡಿಸುವಂಥಾದ್ದು ನಿರ್ಮಾಲ್ಯ ಪುಷ್ಪ ಮೊದಲಾದುದನ್ನು ಮಸ್ತಕ

ದಿಂ ಧರಿಸಿ ಪ್ರಸಾದವಂ ಭುಂಜಿಸಿ ನನ್ನ ಪ್ರಸಾದೋದಕ ಪಾನವಂ ಮಾ ಡಿಸೊಡೆ ಗಣೇಶ್ವರತ್ವವನ್ನು ಪಡೆಯುವನು. ನಿಶ್ಚಯವು

ಮೂ ॥ ಸಿರ್ಮಾಲ್ಯಂಪರಮಂಪುಣ್ಯಂನೈವೇದ್ಯಂಪಾಪನಾಶನಂ । ಬ್ರಹ್ಮಚಾರೀಗೃಹಸ್ಥಾನಾಂ ।ಯತೀನಾಂಭುಕ್ತಿಮುಕ್ತಿದಂ । ನಿರ್ಮಾಲ್ಯಂಪರಮಾನಂದಂನಿರ್ಮಾಲ್ಯಂಶುದ್ಧಶೈವದಂ । ನಿರ್ಮಾಲ್ಯಂ ಪರಮಂಜ್ಞಾನಂನಿರ್ಮಾಲ್ಯಂಪ ರಮಾಮೃತಂ । ನಿರ್ಮಲತ್ವಾಚ್ಚನಿರ್ಮಾಲ್ಯಂನೃಣಾಂನೈರ್ಮಲ್ಯಕಾರಣಂ ॥

ಟೀ ॥ ಶಿವ ನಿರ್ಮಾಲ್ಯವು ಉತ್ಕೃಷ್ಟವಾದ ಪುಣ್ಯವು. ಶಿವನಿವೇದಿತವು ಪಾಪವಂ ಕೆಡಿಸುವಂಥಾದ್ದು. ಬ್ರಹ್ಮ ಚಾರಿಗಳಿಗೂ ಗೃಹಸ್ಥರಿಗೂ ಸನ್ಯಾಸಿಗಳಿಗೂ ಭೋಗ ಮೋಕ್ಷಂಗಳಂಕೊಡುವಂಥಾದ್ದು. ಶಿವ ನಿರ್ಮಾಲ್ಯವು. ಪರಮಾನಂದ ಸ್ವರೂಪವು ಶಿವ ನಿರ್ಮಾಲ್ಯವು ಶುದ್ಧವಾದ ಶಿವಜ್ಞಾನವ ಕೊಡುವಂಥಾದ್ದು ಶಿವ ನಿರ್ಮಾಲ್ಯವು ಉತ್ಕೃಷ್ಟವಾದಜ್ಞಾನರೂಪವು ಶಿವ ನಿರ್ಮಾಲ್ಯವು ಅಮೃತ ಸ್ವರೂಪವು. ನಿರ್ಮಲವಹತನದತ್ತಣಿಂ ಶಿವ ಪ್ರಸಾದವು ಶಿವ ನಿರ್ಮಾಲ್ಯವೆನಿಸಿಕೊಂಬುದು ಅದುದರಿಂ ಮನುಷ್ಯರ್ಗೆ ಮನೋನೈರ್ಮಲ್ಯಕ್ಕೆ ಕಾರಣವಾಗಿರುವದು.

ಮೂ । ಯದ್ಯದಾತ್ಮಹಿತಂಲೋಕೇತತ್ತದ್ದ್ರವ್ಯಮವಂಚಯ॥ಶಿವಲಿಂಗಾಪಿರ್ತಂಕುರ್ಯಾತ್ರ ತತ್ರತುಷ್ಯಾಮಿಪಾರ್ವತಿ ॥

ಟೀ । ಎಲೈ ಪಾರ್ವತಿಯೆ ಈ ಜಗತ್ತಿನಲ್ಲಿ ಆವಾವುದು ತನಗೆ ಹಿತವಾದ ವಸ್ತುವೋ ಆಯಾ ದ್ರವ್ಯವನ್ನು ವಂಚಿಸದಾತನಾಗಿ ಶಿವಲಿಂಗಕ್ಕೆ ಸಮರ್ಪಣೆಯಂ ಮಾಡಿದೊಡೆ ಆ ಶಿವಲಿಂಗದಲ್ಲಿ ಸಂತುಷ್ಟನಾಗುತ್ತಿರುವೆನು

ಮೂ । ಶಿವೋಪಭುಕ್ತನಿರ್ಮಾಲ್ಯಂಪವಿತ್ರಂಪಾಪನಾಶನಂ । ತಸ್ಮಾದ್ಭುಕ್ತ್ವಾಚಪೀತ್ವಾಚಶಿವೇನಸಹಮೋದತೇ ॥

ಟೀ । ಶಿವನಿಂ ಸೇವಿಸಲ್ಪಟ್ಟ ನಿರ್ಮಾಲ್ಯವು ಪವಿತ್ರವಾದುದು ಪಾಪವಂ ಕೆಡಿಸುವಂಥಾದ್ದು ಅದುಕಾರಣದಿಂ ಶಿವ ಪ್ರಸಾದವಂ ಭುಂಜಿಸಿ ಶಿವಪಾದ ತೀರ್ಥವನ್ನೀಂಟಿದವನು ಶಿವನೊಡನೆ ಸಂತುಷ್ಟನಾಹನು.

ಮೂ । ಶಿವಾನುಭುಕ್ತಮಖಿಲಂನಿರ್ಮಾಲ್ಯಮತಿಪಾವನಂ। ಭೋಜ್ಯಂ ಧಾರ್ಯಮಿತಿದ್ವೇಧಾಶಿವಾಚಾರ್ಯೈಃಪ್ರಕೀರ್ತ್ತತೇ।

ಟೀ । ಈಶ್ವರನಿಂದನುಭವಿಸಲ್ಪಟ್ಟ ಸಮಸ್ತ ಶೇಷ ಪ್ರಸಾದವು ಅತ್ಯಂತ ಪವಿತ್ರವಾದಂಥಾದ್ದು ಅಲ್ಲಿ ಭೋಜ್ಯವೆಂದು ಧಾರ್ಯವೆಂದು ಎ

ರಡು ಪ್ರಕಾರವು ಎಂದು ಶಿವಾಚಾರ್ಯರಿಂ ಹೇಳಲ್ಪಡುತ್ತಿದ್ದೀತು.

ಮೂ । ತತ್ರಭೋಜ್ಯಂಭಕ್ಷ್ಯಲೇಹ್ಯಪೇಯಾದೇರುಪಲಕ್ಷಣಂ।ಧಾರ್ಯಂ ವಾಸೋವಿಭೂಷಾದೇರುಪಲಕ್ಷಣಮುಚ್ಯತೆ

ಟೀ । ಅಲ್ಲಿ ಭೋಜ್ಯವೆಂಬುದು ಭಕ್ಷ್ಯ ಲೇಹ್ಯ ಪಾನೀಯ ಮೊದಲಾದದ್ದಕ್ಕೆ ಉಪಲಕ್ಷಣವು ಧಾರ್ಯವೆಂಬುದು ವಸ್ತ್ರಾಲಂಕಾರಮೊದಲಾದದ್ದವಕ್ಕೆ ಉಪಲಕ್ಷಣವು ಯೆಂದು ಪೇಳಲ್ಪಡುತ್ತಿಹುದು. ಈ ಅರ್ಥದಲ್ಲಿ ನಿರ್ಮಾಲ್ಯಂದ್ವಿವಿಧಂಪ್ರೋಕ್ತಮನ್ನಪಾನಾದಿಭೂಷಣ ಮೆಂಬುದಾಗಿಸ್ಕಾಂದಪುರಾಣ ವಚನವು ಉದಾಹರಣವು.

ಮೂ । ಫಲಂಪುಷ್ಪಂಸುಗಂಧಂಚವಸ್ತ್ರಾಣ್ಯಾಭರಣಾನಿಚ। ಲಿಂಗೇರ್ಪಯಿತ್ವಾಸ್ವೀಕುರ್ಯಾದನ್ಯಥಾಕಿಲ್ಬಿಷಂಭವೇತ್॥

ಟೀ ॥ ಶಿವಲಿಂಗಮೂರ್ತಿಗೆ ಸಮರ್ಪಿಸದೆ ಯಾವದನ್ನಾದರೂ ಸ್ವೀಕರಿಸಿದರೆ ದೋಷವುಂಟೇಯಂದರೆ ಫಲವನ್ನೂಪುಷ್ಪವನ್ನೂಪರಿಮಳದ್ರವ್ಯವನ್ನೂ ವಸ್ತ್ರಂಗಳನ್ನೂಆಭರಣಂಗಳನ್ನೂಇಷ್ಟಲಿಂಗದಲ್ಲಿ ಸಮರ್ಪಿಸಿ ಸ್ವೀಕರಿಸುವದು. ಹಾಂಗಲ್ಲದಿದರ್ದೊಡೆ ಪಾಪವಹುದು.

ಮೂ । ಭೋಜ್ಯಂಲೇಹ್ಯಂಚಚೋಷ್ಯಂಚಯತ್ತಲ್ಲಿಂಗಾರ್ಪಿತಂಶುಭಂ। ನೋಚೆದಿಷ್ಟಾನ್ನಮಿಶ್ರಸ್ತುಪ್ರಸಾದೋನಿಷ್ಫಲೋಭವೇತ್

ಶಿವಲಿಂಗ ಪ್ರಸಾದದೊಡನೆ ಅನಿವೇದಿತವಾದನ್ನಮಂ ಕೂಡಿಸಿದೊಡೆ ಪಾಪವುಂಟೆಯಂದರೆ;—

ಟೀ । ಅನ್ನ ಮೊದಲಾದದ್ದು ಕಚ್ಚಡಿ ಮೊದಲಾದದ್ದು ಚೋಷ್ಯ ಮೊದಲಾದದ್ದು ಅವುದಾನೊಂದುಂಟೋ ಅದು ಶಿವಲಿಂಗಮೂರ್ತಿಗೆ ಸಮರ್ಪಿಸಿದ್ದಾದೊಡೆ ಸ್ವೀಕರಿಸುವದಕ್ಕೆ ಯೋಗ್ಯವು ಅಲ್ಲದೆ ಇಷ್ಟಾನ್ನಮಿಶ್ರಮುಂಮಾಡಿದೊಡೆ ಪ್ರಸಾದವು ನಿಷ್ಫಲವಹುದು.

ಮೂ । ಬಹ್ವಪಿಸ್ತೋಕಮೇವಾಪಿಶಿಷ್ಟಾನ್ನೇನವಿಮಿಶ್ರಿತಂ । ಅನರ್ಪಿತಂಚಭುಂಜಾನಿಸ್ತದೇವೋನ್ನತಕಿಲ್ಬಿಷಂ॥

ಟೀ । ಹಾಂಗಾದರೆ ನಿಷ್ಫಲಮಾತ್ರವೆಯೋ ದೋಷವುಂಟೋಯಂದರೆ ಬಹಳವಾದೊಡಂ ಅಲ್ಪವಾದೊಡಂ ಶ್ರೇಷ್ಠನಾದ ಶಿವ ಪ್ರಸಾದದೊಡನೆ ಅನರ್ಪಿತವಾದುದನ್ನು ಕೂಡಿಸಿ ಭುಂಜಿಸಿದನಾದೊಡೆ ಮಹಾಪಾಪವು

ಈ ಅರ್ಥದಲ್ಲಿ (ನಿರ್ಮಾಲ್ಯಮೇವಭಕ್ಷಯಂತಿನಿರ್ಮಾಲ್ಯಮೇವಾಶ್ನಿಯಾತ್

ನಿರ್ಮಾಲ್ಯಮೇವನಿಷೇವೇತ್) ಎಂಬಶ್ರುತಿಪ್ರಮಾಣವು

ಮೂ ॥ ಖಾದ್ಯಾನಿಚಾದನೀಯಾನಿ । ಪೇಯಾದ್ಯನ್ನಾನಿಯಾನಿಚ । ದೇಯಾನ್ಯೆತಾನಿಪ್ರೈಶಂಭೋರಶ್ನಿಯಾದ್ದಾಸಭಾವತಃ॥

ಟೀ । ಭೋಜ್ಯಂಗಳು ಭಕ್ಷ್ಯಂಗಳು ಪಾನೀಯ ಮೊದಲಾದ ಅನ್ನಗಳು ಆವಾವದುಂಟೋ ಅವುಗಳು ಶಿವಂಗೆ ಸಮರ್ಪಿಸಲ್ತಕ್ಕವು ಆಸಮರ್ಪಿತವಾದ ಪ್ರಸಾದವನ್ನು ಭೃತ್ಯಭಾವದಿಂ ಭುಂಜಿಸಬೇಕು.

ಮೂ । ಅನರ್ಪಿತಾನ್ನಸಮ್ಮಿಶ್ರಮರ್ಪಿತಂಚಾಪ್ಯನರ್ಪಿತಂ।ಯೊಭುಜ್ತಿಹಿತದೇವಾನ್ನಂಕಿಲ್ಬಿಷಾಶೀಭವೇನ್ನರಃ॥

ಟೀ ॥ ಶಿವಂಗೆ ಸಮರ್ಪಿತವಾದ ಪ್ರಸಾದಾನ್ನವು ಅನರ್ಪಿತವಾದನ್ನದಿಂ ಮಿಶ್ರಿತವಾದರೆಆ ಅರ್ಪಿತವು ಕೂಡ ಅನರ್ಪಿತವೇಸರಿ,ಯಾವ್ವಮನುಷ್ಯ ಆ ಅನರ್ಪಿತ ಸಮ್ಮಿಶ್ರಿತಾನ್ನವಂ ಭುಂಜಿಸುವನೋ ಅವನು ಕಿಲ್ಬಿಷವನ್ನೇ ಭುಂಜಿಸುವನು.

ಮೂ ॥ ಭೋಜ್ಯಾಲೆಹ್ಯಶ್ಚ ಚೋಷ್ಯಾಶ್ಚ ಯೇಚಲಿಂಗಾರ್ಪಿತಾಃಪರೆ। ಲಿಂಗೋಚ್ಛಿಷ್ಟಂತುಭುಂಜೀತಪ್ರಸಾದಾಪ್ತಿರುದಾಹೃತಾ ।

ಟೀ । ಮತ್ತಂ ಭಕ್ಷ್ಯಭೋಜ್ಯ ಲೇಹ್ಯಚೋಹ್ಯ ಪಾನೀಯ ಮೊದಲಾದವು ಆವುದುಂಟೋಅವೆಲ್ಲವು ಶಿವಲಿಂಗಕ್ಕೆ ಸಮರ್ಪಿಸಲ್ಪಟ್ಟವಾದರೆ ಅವು ಸ್ವೀಕರಿಸುವದಕ್ಕೆ ಯೋಗ್ಯವು ಅಂಥಾ ಶಿವಲಿಂಗ ಪ್ರಸಾದವು ಸ್ವೀಕರಿಪುದು ಪ್ರಸಾದಾಪ್ತಿ ಎನಿಸಿಕೊಳುವದು

ಮೂ । ಇಕ್ಷುದಂಡಫಲಾಪೂಸಖಾದ್ಯಾನಿವ್ಯಂಜನಾನಿಚ । ಪ್ರಸಾದಮೇವಭೋಕ್ತ್ರವ್ಯಮನ್ಯಬ್ಗೋಮಾಂಸವಿಟ್ಸಮಂ ।

ಟೀ । ಈ ರೀತಿಯಿಂ ಶಿವಲಿಂಗಕ್ಕೆ ಸಮರ್ಪಿಸದೆ, ಸ್ವೀಕರಿಸಿದರೆ ದೋಷವುಂಟೇಎನೆ ಕಬ್ಬು ಫಲಗಳು ಕಜ್ಜಾಯ ಮೊದಲಾದ ಭಕ್ಷ್ಯಗಳು ಮೇಲೋಗರಗಳುಸಹಿತಾಗಿ ಶಿವಲಿಂಗಪ್ರಸಾದವನ್ನೆ ಭುಂಜಿಸಬೇಕು ಅಲ್ಲದೆ ಅನರ್ಪಿತವಾದುದೆಲ್ಲವು ಗೋಮಾಂಸ ಪುರೀಷಂಗಳಿಗೆ ಸಮಾನವು.

ಮೂ । ಇಕ್ಷುರಂಭಾಫಲಾದೀನಿಸಖಂಡಾನಿನಿವೇದಯೇತ್। ದ್ರಾಕ್ಷಾಖರ್ಜೂರಚೂತಾದೀನ್ಯಖಂಡಾನಿನಿವೇದಯೇತ್।

ಫಲ ಮುಂತಾದ್ದನ್ನು ಹ್ಯಾಗೆ ಸಮರ್ಪಿಸಬೇಕೆಂದರೆ.

ಟೀ । ಕಬ್ಬು ಬಾಳೇಹಣ್ಣು ಮೊದಲಾದದ್ದನ್ನು ಖಂಡಿಸಲ್ಪಟ್ಟವಾಗಿ ಶಿವಲಿಂಗಕ್ಕರ್ಪಿಸುವದು. ದ್ರಾಕ್ಷಿ ಖರ್ಜೂರ ಮಾವಿನಹಣ್ಣು ಮೊದ

ಲಾದವನ್ನು ಖಂಡಿಸದೆ ಲಿಂಗಕ್ಕೆ ಅರ್ಪಿಸುವದು.

ಮೂ ॥ ಕ್ಷೀಯಂತೇಶವಕಾರೋಹೆತಪೋಯಜ್ಞಕ್ರಿಯಾದಯಃ । ನಕ್ಷೀ
ಯತೆಮಂತ್ರಶುದ್ಧೀರಪಕ್ತ್ರಹುತಂಹವಿಃ॥

ಟೀ । ಎಲೈ ಪಾರ್ವತಿಯೇ ಕಂದಮೂಲ ಫಲಾಹಾರ, ಪಂಚಾಗ್ನಿ ಮಧ್ಯನಿವಾಸ ಉಪವಾಸ ಕೃಛ್ರ ಚಾಂದ್ರಾಯಣ ರೂಪವಾದ ತಪಸ್ಸು ವಾಜಪೇಯ ಪೌಂಡರೀಕ ಮುಂತಾದ ಯಜ್ಞಗಳು ದಾನಗಳು ಕರ್ಮಗಳು ಇವುಗಳ ಫಲಗಳು ಕ್ಷೀಣವಾಗುವವು. ಪಂಚಾಕ್ಷರೀ ಮಂತ್ರ ಜಪದಿಂದ ಪರಿಶುದ್ಧವಾದ ವೀರಮಾಹೇಶ್ವರನ ಮುಖದಲ್ಲಿ ಹೋಮ ಮಾಡಲ್ಪಟ್ಟ ಹವಿಸ್ಸು (ಎಂದರೆ ಭಕ್ತಮಹೇಶ್ವರರ ತೃಪ್ತ್ಯರ್ಥವಾಗಿ ಕೊಟ್ಟ ಅನ್ನದ ಫಲವು ) ಕ್ಷೀಣವಾಗುವದಿಲ್ಲ.

ಮೂ ॥ ನೈವೆದ್ಯಂಪುರತೋನ್ಯಸ್ತಂದರ್ಶನಾತ್ಸ್ವೀಕೃತಂಮಯಾ॥ರಸಾ
ಭಕ್ತಸ್ಯಜಿಹ್ವಾಗ್ರಾದಶ್ನಾಮಿಕಮಲೋದ್ಭವ।

ಟೀ । ಎಲೈ ಬ್ರಹ್ಮನೇ ಕೇಳು ನನ್ನ ಮುಂದೆ ಇರಿಸಿದ ನೈವೇದ್ಯವನ್ನು ದರ್ಶನ ಮಾತ್ರದಿಂದ ಸ್ವೀಕರಿಸುತ್ತೇನೆಯೇ ಹೊರತು ಭುಂಜಿಸುವದಿಲ್ಲ ಅಷ್ಟಾವರಣ ಸಂಪನ್ನನಾದ ವೀರ ಮಾಹೇಶ್ವರನೆಂಬ ನನ್ನ ಭಕ್ತನ ಜಿಹ್ವಾಗ್ರದ ಮುಖದಿಂದ ಮಧುರಾದಿ ಸಕಲ ಷಡ್ರಸಗಳನ್ನು ಸಾಕ್ಷಾತ್ತಾಗಿ ಸ್ವೀಕರಿಸುತ್ತೇನೆ. ಎಂದು ಪಃ ಶಿವನು ಬ್ರಹ್ಮನಿಗೆ ನಿರೂಪಿಸಿದನು.

ಮೂ । ಗುರುಜಂಗಮಲಿಂಗಾನಾಂನಿರ್ಮಾಲ್ಯಂಭುಕ್ತಿಮುಕ್ತಿದಂ ॥ಸದ್ಯೈ
ವಾನುಭವೆದ್ದಿವಿಪ್ರಸಾದವ್ರತಮುತ್ತಮಂ ॥

ಟೀ । ಅಜ್ಞಾನತಿಮಿರಾಂಧಸ್ಯಜ್ಞಾನಾಂಜನಶಲಕಯಾ । ಚಕ್ಷುರುನ್ಮೀಲಿತಂ ಯೇನತಸ್ಮೈಶ್ರೀ ‌(ಗುರವೆನಮಃ) ಎಂಬ ವಚನಾನುಸಾರವಾಗಿ ಜ್ಞಾನಪ್ರದಾಯಕನಾದ ಗುರುವಿನ ಜಾನಾತ್ಯತೀಶಯಾದ್ಯೈತುಶಿವಂ ವಿಶ್ವಪ್ರಕಾಶಕಂ। ಸ್ವಸ್ವರೂಪತಯಾತೆತಜಂಗಮಾಇತಿ ಕೀರ್ತಿತಾಃ) ಎಂಬ ಪ್ರಮಾಣದಿಂದ ಲಿಂಗಾಂಗ ಸಾಮರಸ್ಯಜ್ಞಾನಸಂಪನ್ನನಾದ ಜಂಗಮನ, ಮತ್ತು ಲೀನತಿಗಚ್ಛತಿಯಸ್ಮಿನ್ಸಾಮಾಯಾಮುರ್ಘಟಕಾರೀಣೀ। ತದೆತಲ್ಲಿಂಗಮಿತ್ಯುಕ್ತಂಲಿಂಗತತ್ವವಿಶಾರದೈಃ) ಎಂಬ ವಚನದಿಂದ ಶಿವತತ್ವಸ್ವರೂಪವಾದ ಇಷ್ಟಲಿಂಗದ ಪ್ರಸಾದವು ಭೋಗ ಮೋಕ್ಷಗಳನ್ನು ಕೊಡುವದು ಈ ವಿಧವಾದ ಲಿಂಗತ್ರಯ ಪ್ರಸಾದಸೇವನರೂಪವಾದ ಉತ್ತಮ ವ್ರತವನ್ನು ವೀರಶೈವನು ನಿತ್ಯದಲ್ಲಿಯೂ ಆಚರಿಸಬೇಕು.

ಮೂ ॥ ಸ್ಥಾವರಂಜಂಗಮಂಚೈವದ್ವಿವಿಧಂಲಿಂಗಮುಚ್ಯತೇ।ಜಂಗಮಸ್ಯಾವಮಾನೇನಸ್ಥಾವರಂನಿಷ್ಫಲಂಭವೇತ್।

ಟೀ ॥ ಲಿಂಗವೆಂಬುವದು ಸ್ಥಾವರವೆಂದೂ, ಜಂಗಮವೆಂದೂ ಎರಡು ವಿಧ. ಶಿಲಾದಿಗಳಿಂ ನಿರ್ಮಿತವಾಗಿ ಷಡಧ್ವನ್ಯಾಸಾದಿಗಳಿಂದ ಸಂಸ್ಕೃತವಾದ ಶಿವಲಿಂಗವೇ ಸ್ಥಾವರವೆನಿಸುವದು. ವೇಧಾಕ್ರಿಯಾ ಮನುರೂಪವಾದ ದೀಕ್ಷಾತ್ರಯದಿಂದ ಶುದ್ಧವಾದತನುತ್ರಯವುಳ್ಳವನಾಗಿಯೂ ಶಿವಜ್ಞಾನಸಂಪನ್ನನಾಗಿಯೂ ಇರುವ ಶಿವಯೋಗಿಯೇ ಜಂಗಮಲಿಂಗವು. ಸ್ಥಾವರಕ್ಕೆ ಪ್ರಾಣಭೂತವೆನಿಸಿದ ಜಂಗಮಲಿಂಗಕ್ಕೆ ಅವಮಾನವಂ ಮಾಡಿದರೆ ಸ್ಥಾವರಲಿಂಗವು ನಿಷ್ಪ್ರಯೋಜನವಾಗುವದು.

ಮೂ ॥ ಸಕೃಲಿಂಗಾರ್ಚಕೋಚ್ಛಿಷ್ಟಂಸ್ವದೆಹೆಯಸ್ತುಲೇಪಯೆತ್।ವಜ್ರಕಾಯಸ್ಸಭವತಿಶಿವೆನಸಹಮೊದತೆ ।

ಟೀ । ಯಾವನು ಭಕ್ತಿಯಿಂದ ಶಿವಲಿಂಗಾರಾಧಕನಾದ ವೀರಮಹೇಶ್ವರನ ಪ್ರಸಾದದಿಂದ ಲಿಪ್ತವಾದ ಹಸ್ತದಿಂದ ತನ್ನ ಶರೀರವನ್ನು ಸವರಿಕೊಳ್ಳುತ್ತಾನೋ ಅವನು ಅರೋಗದೃಢಕಾಯನಾಗಿದ್ದು ದೇಹಾಂತ್ರದಲ್ಲಿ ಶಿವ ಸಾಯುಜ್ಯವನ್ನು ಹೊಂದಿ ಆನಂದಿಸುವನು.

ಮೂ ॥ ದೂರ್ವಾಸೋಚ್ಛಿಷ್ಟಶೇಷಸ್ಯಪಾದಬಾಹ್ಯಾಂಗಲೇಪನಾತ್। ಸಹಸಾವಜ್ರಕಾಯತ್ವಂಪ್ರಾಪ್ತವಾನ್ವಿಷ್ಣುರವ್ಯಯಂ।

ಟೀ । ಪೂರ್ವದಲ್ಲಿ ವೀರಮಾಹೇಶ್ವರನಾದ ದೂರ್ವಾಸ ಮುನಿಯು ವೈಕುಂಠಕ್ಕೆ ಹೋಗಲು ನಾರಾಯಣನು ಭಕ್ತಿಯಿಂದ ಅರ್ಘ್ಯಪಾದ್ಯಾದಿವಳಿಂದ ಪೂಜಿಸಿ, ಶಿವಾರ್ಪಣವುಂಮಾಡಿಸಿ, ಆತನ ಉಚ್ಛಿಷ್ಟಪ್ರಸಾದವನ್ನು ಭಕ್ತಿಯಿಂದ ತೆಗದುಕೊಂಡು ತನ್ನ ಕನಿಷ್ಠಾಂಗವಾದ ಅಂಗಾಲನ್ನು ಬಿಟ್ಟುಉಳಿದ ಅಂಗಗಳಿಗೆಲ್ಲ ಲೇಪಿಸಿಕೊಂಡದ್ದರಿಂದ ವಜ್ರಕಾಯತ್ವವನ್ನು ಪಡೆದನು.

ಮೂ । ಪಾದೊದಕಂಯಥಾಭಕ್ತ್ಯಾಸ್ವೀಕರೊತಿಮಹೆಶಿತುಃ। ತಥಾಶಿವಾತ್ಮನೋರ್ನಿತ್ಯಂಗುರುಜಂಗಮಯೊರಪಿ। ಅರ್ಪಯಿತ್ವಾನಿಜೆಲಿಂಗೆಪತ್ರಪುಷ್ಪಂಫಲಂಜಲಂ॥ ಅನ್ನಾದ್ಯಂಸರ್ವಭೋಜ್ಯಂಚಸ್ವೀಕುರ್ಯಾದ್ಭಕ್ತಿಮಾನ್ನರಃ।

ಟೀ । ಭಕ್ತನಾದವನು ಶಿವಪಾದೋದಕ ಪ್ರಸಾದಗಳನ್ನು ಹಾಗೆಯೇ ಶಿವ ಸ್ವರೂಪರಾದ ಗುರುಜಂಗಮರ ಪಾದೋದಕಪ್ರಸಾದಗ

ಳನ್ನಿಸ್ವೀಕರಿಸಬೇಕು. ಪುತ್ತು ಪತ್ರೆ, ಹೂವು ಹಣ್ಣು ನೀರುಗಳನ್ನೂ ಅನ್ನ ಮುಂತಾದ ಸಕಲಾಹಾರಗಳನ್ನೂ ಇಷ್ಟಲಿಂಗಕ್ಕೆ ಸಮರ್ಪಿಸಿ ಅನಂತರ ಆ ಪ್ರಸಾದವನ್ನು ಸ್ವೀಕರಿಸಬೇಕು.

ಇದು ಸಕಲ ವೀರಮಾಹೇಶ್ವರ ಪ್ರಸಾದಸಮಾಸಾದಿತ ಬುದ್ಧಿವೈಭವನಾದ ತೋಂಟದ ಸಿದ್ಧೇಶ್ವರನಿಂ ರಚಿಸಸಲ್ಪಟ್ಟ ವೀರಶೈವ ಪ್ರದೀಪಿಕೆಯಲ್ಲಿ ಪ್ರಸಾದ ಲಕ್ಷಣವೆಂಬ ಪ್ರಕರಣವು ಪರಿಸಮಾಪ್ತವಾದುದು.

---

ಶಿವಭಕ್ತಿ ಪ್ರಶಂಸೆ,

ಅವ. ಷಟ್ಸ್ಥಲಗಳ ಲಕ್ಷಣಗಳನ್ನೂ ಅಷ್ಟಾವರಣ ಸ್ವರೂಪವನ್ನು ಯಥೋಚಿತವಾಗಿ ತಿಳಿಸಿ, ಮುಂದೆ ಶಿವಭಕ್ತಿಯ ಮಹಿಮೆಯನ್ನುನಿರೂಪಿಸುವೆನು.

(ಸಾಮವೇದದಲ್ಲಿ.)

ಮೂ । ಅಪಿವಾಯಶ್ಚಂಡಾಲಶಿವೇತಿವಾಚಂವದೇತ್ತನಸಹಸಂವದೇತ್ತನಸಹಸಂವಸೇತ್ತನಸಹಸಂವಿಶೇತ್ತನಸಹಭುಂಜಿತ್‌ತನಸಹಭುಂಜೀತ ।

ಟೀ ॥ ಶಿವಭಕ್ತಿರಹಿತನಾದ ಬ್ರಾಹ್ಮಣನೊಡನೆ ಸಂಭಾಷಣಾದಿಗಳನ್ನು ಮಾಡುವದಕ್ಕಿಂತಲೂ ಶಿವಭಕ್ತಿಸಂಪನ್ನನಾಗಿ ಶಿವನಾಮೋಚ್ಚಾರಣೆಯಲ್ಲಿ ತತ್ಪರನಾದ ಚಂಡಾಲನೊಡನೆ ಸಂಭಾಷಣೆಯನ್ನೂ ಸಹವಾಸವನ್ನು ಕಡೆಗೆ ಸಹ ಭೋಜನವನ್ನು ಮಾಡಬಹುದು.

ಈ ಅರ್ಥದಲ್ಲಿ ಪದ್ಮಪುರಾಣ ವಚನವು ಸಾಕ್ಷಿಯಾಗಿದೆ.

ಮೂ । ಶಿವೇತಿಮಂಗಲಂನಾಮಯಸ್ಯವಾಚಿಪ್ರವರ್ತತೆ॥ ಸಪ್ತಜನ್ಮಕೃತಂಪಾಪಂಭಸ್ಮೀಭವತಿತಸ್ಯವೈ ॥ ವದೇತ್ತನವಸೇತ್ತನವಿಶೇತ್ತನ ಪುನಃಪುನಃ।ಭುಂಜೀತಸಹಭುಂಜೀತೆತ್ಯಾಹಸಾಮಶ್ರುತಿಃಖಲು

ಟೀ । ಯಾವನ ನಾಲಿಗೆಯಲ್ಲಿ ಶಿವ ಎಂಬ ಮಂಗಳಕರವಾದ ನಾಮವು ಹೊರಡುವದೊ ಅವನ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳೆಲ್ಲವೂ ಬೂದಿಯಾಗಿ ಹೋಗುತ್ತವೆ ಶಿವನಾಮೋಚ್ಚಾರಣೆಯನ್ನು ಮಾಡುವನು. ಯಾವ ಜಾತಿಯವನಾದರೂ ಅವನೊಡನೆ ಸಂಭಾಷಣೆ ಸಹವಾಸ ಸಹ ಭೋಜನಾದಿಗಳನ್ನು ಮಾಡಬಹುದೆಂದು ಸಾಮವೇದವು ಹೇಳುತ್ತದೆ.

( ಶಿವರಹಸ್ಯದಲ್ಲಿ )

ಮೂ ॥ ಶ್ವಪಚೋಪಿಮುನಿಶ್ರೇಷ್ಠಶ್ಶಿವಭಕ್ತ್ಯಾದ್ವಿಜಾಧಿಪಃ॥ಶಿವಭಕ್ತಿವಿಹೀನಸ್ತುದ್ವಿಜೋಪಿಶ್ವಪಚಾಧಮಃ ।ಶಿವೇತಿವಾಚಂಯೋನಿತ್ಯಂ ಚಂಡಾಲೋಪಿವದೇನ್ಮುದಾ । ಸಹತೇನವದೇದ್ವಾಚಂಸಹತೇನವಸೇತ್ಸದಾ ।

ಟೀ ॥ ಶ್ವಪಚನಾದರೂ ಶಿವಭಕ್ತಿಯಿಂದ ಮುನಿಶ್ರೇಷ್ಠನೂ ಬ್ರಾಹ್ಮಣೋತ್ತಮನೂ ಎನಿಸಿಕೊಳ್ಳುವನು. ಬ್ರಾಹ್ಮಣನಾದರೂ ಶಿವಭಕ್ತಿಯಿಲ್ಲದವನು ಶ್ವಪಚನಿಗಿಂತಲೂ ಕನಿಷ್ಠನೆನಿಸಿಕೊಳ್ಳುವನು. ಚಂಡಾಲನಾದಾಗ್ಯೂ ಯಾವನು ನಿರಂತರದಲ್ಲಿಯೂ ಶಿವನೇ ಎಂಬ ಮಾತನ್ನು ಉಚ್ಚರಿಸುತ್ತಾನೆಯೋ ಅವನೊಡನೆ ಸಂತೋಷದಿಂದ ಸಂಭಾಷಣೆಯನ್ನು ಮಾಡಬೇಕು. ಅವನೊಡನೆ ಸಹವಾಸವನ್ನು ಮಾಡಬೇಕು.

(ಆದಿತ್ಯ ಪುರಾಣ ಮಾನವೀಯ ಸಂಹಿತೆಯಲ್ಲಿ)

ಮೂ । ಬ್ರಾಹ್ಮಣಃಕ್ಷತ್ರಿಯೋವೈಶ್ಯಶ್ಶೂದ್ರೋವಾಪ್ಯಂತ್ಯಜಾತಿಜಃ ।ಶಿವಭಕ್ತಸ್ಸದಾಪೂಜ್ಯಸ್ಸರ್ವಬ್ರಾಹ್ಮಣೋತ್ತಮಃ। ಮ್ಲೇಚ್ಛೋಪಿವಾಯದಿಭವೇದ್ಭವಭಕ್ತಿಸಮನ್ವಿತಃ ॥ನತತ್ಸಮಶ್ಚತುರ್ವೇದೀನಾಗ್ನಿಷ್ಟೋಮಾದಿಯಜ್ಞಕೃತ್॥

ಟೀ । ಬ್ರಾಹ್ಮಣನಾಗಲಿ ಕ್ಷತ್ರಿಯನಾಗಲಿ, ವೈಶ್ಯನಾಗಲಿ ಶೂದ್ರನಾಗಲಿ ಶಿವಭಕ್ತಿಯುಳ್ಳವನೇ ಪೂಜ್ಯನು ಅವನೇ ಸಕಲ ಬ್ರಾಹ್ಮಣರೊಳಗೂ ಶ್ರೇಷ್ಠನು, ಮ್ಲೇಚ್ಛನಾದಾಗ್ಯೂ ಶಿವಭಕ್ತಿಯಿಂದಕೂಡಿದವನಾಗಿದ್ದರೆ ಅವನಿಗೆ ನಾಲ್ಕು ವೇದಗಳನ್ನು ಓದಿದವನಾದರೂ ಅಗ್ನಿಷ್ಟೋಮ ಮುಂತಾದ ಯಜ್ಞಗಳನ್ನು ಮಾಡಿದವನಾದರೂ ಸಮಾನನಾಗುವದಿಲ್ಲ.

(ಶಿವಧರ್ಮೋತ್ತರದಲ್ಲಿಶಿವ ವಚನವು.)

ಮೂ । ಮದ್ಭಕ್ತಜನವಾತ್ಸಲ್ಯಂಪೂಜಾಯಾಶ್ಚಾನುಮೋದನಂ ॥ ಸ್ವಯಮಭ್ಯರ್ಚನಂಭಕ್ತ್ಯಾಮಮಾರ್ಥೇಚಾಂಗಚೇಷ್ಟನಂ ॥ ಮತ್ಕಥಾಶ್ರವಣೇಭಕ್ತಿಸ್ಸ್ವರನೇತ್ರಾಂಗವಿಕ್ರಿಯಾ । ಮಮಾನುಸ್ಮರಣಂನಿತ್ಯಂಯಮುಪಜೀವತಿ ॥ ಏತದಷ್ಟವಿಧಂಚಿಹ್ನಂ ಯಸ್ಮಿನ್ಮ್ಲೇಚ್ಛೇಪಿವರ್ತತೇ ॥ಸವಿಪ್ರೇಂದ್ರೋಮುನಿಶ್ರೀಮಾನ್ಸಯತಿಸ್ಸಚಪಂಡಿತಃ।

ಟೀ ॥ ನನ್ನ ಭಕ್ತರಲ್ಲಿ ಪ್ರೀತಿಯು ಯಾರಾದರೂ ಭಕ್ತರಪೂಜೆಯನ್ನು ಮಾಡುತ್ತಿದ್ದರೆ ನೋಡಿಸಂತೋಷಪಡುವದು. ತಾನೇ ಭಕ್ತರ

ನ್ನು ಪೂಜಿಸುವದು; ನನಗೋಸ್ಕರ ಅಂಗಚೇಷ್ಟೆಗಳು, ನನ್ನ ಕಥೆಯನ್ನು ಕೇಳುವದರಲ್ಲಿ ಭಕ್ತಿಯು, ಗದ್ಗದ, ಆನಂದಬಾಷ್ಪ, ರೋಮಾಂಚ ಮುಂತಾದ ಸಾತ್ವಿಕ ಗುಣಗಳು, ನನ್ನನ್ನಾಶ್ರೈಸಿರುವದು. ನನ್ನಲ್ಲಿ ಕಪಟವಂ ಬಿಟ್ಟಿರುವದು ಈ ಎಂಟು ಲಕ್ಷಣಗಳು ಮ್ಲೇಚ್ಛನಾದವನಲ್ಲಿದ್ದರೂ ಅವನೇ ಬ್ರಾಹ್ಮಣೋತ್ತಮನು.ಅವನೇ ಷಡ್ಗುಣೈಶ್ವರ್ಯಸಂಪನ್ನನಾದ ಮುನಿಯು,ಅವನೇ ಜಿತೇಂದ್ರಿಯನು; ಅವನೇ ವಿದ್ವಾಂಸನು.

ಮೂ॥ ಶ್ರವಣಂಕೀರ್ತನಂಶಂಭೋಸ್ಸ್ಮರಣಂಪಾದಸೇವನಂ। ಅರ್ಚನಂ ವಂದನಂದಾಸ್ಯಂಸಖ್ಯಮಾತ್ಮನಿವೇದನಂ । ಏವಂನವವಿಧಾಭಕ್ತಿಃ ಪ್ರೋಕ್ತಾದೇವೇನಶಂಭುನಾ । ದುರ್ಲಭಾಪಾಪಿನಾಂಲೋಕೇಸು ಲಭಾಪುಣ್ಯಾತ್ಮನಾಂ ॥

ಟೀ। ಶಿವಕಥೆಯನ್ನುಕೇಳುವದು,ಶಿವಸ್ತುತಿಯನ್ನುಮಾಡುವದುಶಿವನನ್ನು ಧ್ಯಾನಿಸುವದು, ಶಿವ ಪಾದವಂ ಸೇವಿಸುವದು,ಶಿವನನ್ನುಪೂಜಿಸುವದು, ಶಿವನಿಗೆ ನಮಸ್ಕರಿಸುವದು, ಶಿವನ ಕೈಂಕರ್ಯವು, ಶಿವನೊಡನೆ ಸ್ನೇಹವು, ಶಿವನಿಗೆ ತನ್ನನ್ನು ಅರ್ಪಿಸುವದು. ಈ ರೀತಿಯಾಗಿ ಭಕ್ತಿಯು ಒಂಭತ್ತು ವಿಧವಾಗಿ ಹೇಳಲ್ಪಟ್ಟಿತು. ಲೋಕದಲ್ಲಿ ಈ ಭಕ್ತಿಯು ಪಾಪಿಗಳಿಗೆ ದುರ್ಲಭವಾಗಿಯೂ, ಪುಣ್ಯಶಾಲಿಗಳಿಗೆ ಸುಲಭವಾಗಿಯೂ, ಇರುವದು.

ಮೂ॥ ಅಧಮೇಚೋತ್ತಮೇವಾಪಿಯತ್ರಕುತ್ರಚಿದೂರ್ಜಿತಾ ॥ ವರ್ತತೇ ಶಾಂಭವೀಭಕ್ತಿಸ್ಸಭಕ್ತಇತಿಗೀಯತೆ । ಭಕ್ತಿಸ್ಸ್ಥಿರೀಕೃತಾ ಯಸ್ಮಿನ್ಮ್ಲೇಚ್ಛೇಪಿದ್ವಿಜಸತ್ತಮೆ । ಸಮೆಪ್ರಿಯಶ್ಚತುರ್ವೇದೀನ ಪ್ರಿಯೋಭಕ್ತಿವರ್ಜಿತಃ ।

ಟೀ। ನೀಚನಲ್ಲಾಗಲಿ ಉತ್ತಮನಲ್ಲಾಗಲಿ ಯಾವನಲ್ಲಾಗಲಿ ಶಿವಭಕ್ತಿಯು ಸಂಪೂರ್ಣವಾಗಿದ್ದರೆ ಅವನೇ ಭಕ್ತನೆನಿಸಿಕೊಳ್ಳುವನು. ಅಂಥಾ ಭಕ್ತಿಯು ಮ್ಲೇಚ್ಛನಲ್ಲಾದರೂ ಬ್ರಾಹ್ಮಣನಲ್ಲಾದರೂ ಯಾವನಲ್ಲಿ ನೆಲೆಗೊಂಡಿರುತ್ತದೋ ಅವನೇ ನನ್ನ ಪ್ರೀತಿಗೆ ಪಾತ್ರನು. ಭಕ್ತಿಯಿಲ್ಲದವನು ನಾಲ್ಕು ವೇದಗಳನ್ನು ಬಲ್ಲವನಾದರೂ ನನಗೆ ಪ್ರಿಯನಲ್ಲ.

[ ಆದಿತ್ಯ ಪುರಾಣದಲ್ಲಿ ]

ಮೂ। ಮಾರ್ಗಸ್ಥೋವಾಪ್ಯಮಾರ್ಗಸ್ಥೋ ಮೂರ್ಖೋವಾಪಂಡಿತೋಪಿವಾ । ಮಮಭಕ್ತೋಯದಿಭವೇತ್ಸರ್ವಸ್ಮಾದಧಿಕೋಹಿಸಃ

ಟೀ। ಸದ್ವೃತ್ತಿಯುಳ್ಳವನಾಗಲಿ ದುರ್ನೀತಿಯುಳ್ಳವನಾಗಲಿ

ಮೂಢನಾಗಲಿ, ವಿದ್ವಾಂಸನಾಗಲಿ, ಯಾವನು ನನ್ನಲ್ಲಿ ನೆಲೆಗೊಂಡಭಕ್ತಿ ಯುಳ್ಳವನಾಗಿರುವನೋ ಅವನು ಪ್ರಪಂಚದಲ್ಲಿ ಎಲ್ಲಕ್ಕಿಂತಲೂ ಶ್ರೇಷ್ಠನು ಇದು ಸತ್ಯವು.

( ಶಿವರಹಸ್ಯದಲ್ಲಿ )

ಮೂ ॥ ನಾಹಂವಸಾಮಿಕೈಲಾಸೇನಮೇರೌನಚಮಂದರೇ ।ಮದ್ಭಕ್ತಾಯತ್ರತಿಷ್ಠಂತಿತತ್ರತಿಷ್ಠಾಮಿಪಾರ್ವತಿ। ಚಂಡಾಲವಾಟಿಕಾಯಾಂವಾಶಿವಭಕ್ತಸ್ಸ್ಥಿತೋಯದಿ। ತಚ್ಛ್ರೇಣೀಶಿವಲೋಕಸ್ಸ್ಯಾತ್ತದ್ಗೃಹಂಶಿವಮಂದಿರಂ ।

ಟೀ । ಎಲೈ ಪಾರ್ವತಿಯೇ ನಾನು ರಜತಾದ್ರಿಯಲ್ಲಾದರೂ ಮೇರು ಪರ್ವತದಲ್ಲಾದರೂ ಮಂದರ ಪರ್ವತದಲ್ಲಾದರೂ ವಾಸಮಾಡುವದಿಲ್ಲ. ನನ್ನ ಭಕ್ತರು ಎಲ್ಲಿರುವರೋ ಅಲ್ಲಿರುತ್ತೇನೆ. ಶಿವಭಕ್ತನಾದವನು ಚಂಡಾಲ ಶ್ರೇಣಿಯಲ್ಲಿ ವಾಸಮಾಡುತ್ತಿದ್ದಾಗ್ಯೂ ಆ ಶ್ರೇಣಿಯೇ ಕೈಲಾಸವು. ಅತನ ಮನೆಯೇ ಶಿವಾಲಯವು.

[ ಆದಿತ್ಯ ಪುರಾಣದಲ್ಲಿ ]

ಮೂ । ದರ್ಶನಾಚ್ಛಿವಭಕ್ತಸ್ಯಸಕೃತ್ಸಂಭಾಷಣಾದಪಿ ॥ ಅತಿರಾತ್ರಸ್ಯಯಜ್ಞಸ್ಯಫಲಂಭವತಿನಾರದ ॥

ಟೀ । ಎಲೈ ನಾರದಮುನಿಯೇ ಶಿವಭಕ್ತನನ್ನು ದರ್ಶನ ಮಾಡುವದರಿಂದಲೂ ಒಂದು ಸಾರಿ ಅವನೊಡನೆ ಸಂಭಾಷಣೆಮಾಡುವದರಿಂದಲೂ ಅತಿರಾತ್ರವೆಂಬ ಯಜ್ಞವನ್ನು ಮಾಡಿದ ಫಲವು ಸಂಭವಿಸುವದು.

[ ಲೈಂಗ್ಯಪುರಾಣದಲ್ಲಿ ]

ಮೂ ॥ ಉಪಪಾತಕಕೋಟೀಶ್ಚ ಬ್ರಹ್ಮಹತ್ಯಾಯುತಾನಿಚ॥ ದಹತ್ಯಶೇಷಪಾಪಾನಿಶಿವಭಕ್ತಸ್ಯದರ್ಶನಂ ॥

ಟೀ । ಶಿವಭಕ್ತನ ದರ್ಶನವು ಅನೇಕವಾದ ಉಪ ಪಾತಕಗಳನ್ನೂ ಹತ್ತುಸಾವಿರ ಬ್ರಹ್ಮ ಹತ್ಯೆಗಳನ್ನೂ ಸಕಲವಾದ ಪಾಪಗಳನ್ನೂ ಅಗ್ನಿಯು ಕಾಷ್ಠಗಳನ್ನು ದಹಿಸುವಂತೆ ಲೀಲಾಮಾತ್ರದಿಂದ ದಹಿಸುವದು.

( ಸ್ಕಾಂದ ಪುರಾಣದಲ್ಲಿ )

ಮೂ ॥ ಚತುರ್ವೇದಧರೋವಿಪ್ರಶ್ಶಿವಭಕ್ತಿವಿವರ್ಜಿತಃ॥ ವೇದಭಾರಭರಾಕ್ರಾಂತಸ್ಸವೈಬ್ರಾಹ್ಮಣಗರ್ದಭಃ । ತಸ್ಯಭೋಜನದಾನೇನದಾತಾಚನರಕಂವ್ರಜೇತ್ ॥

ಟೀ। ನಾಲ್ಕು ವೇದಗಳನ್ನು ಸಾಂಗವಾಗಿತಿಳಿದವನಾಗಿದ್ದಾಗ್ಯೂ ಶಿವಭಕ್ತಿಯಿಲ್ಲದವನಾಗಿದ್ದರೆ ಅವನು ವೇದಂಗಳೆಂಬ ಹೊರೆಯನ್ನು ಹೊತ್ತಿರುವ ಬ್ರಾಹ್ಮಣ ಕತ್ತೆಯೆನಿಸಿಕೊಳ್ಳುವನು ನಾಲ್ಕು ವೇದಗಳನ್ನು ಓದಿದವನಾಗಿದ್ದರೂ ಯಾವನು ಶಿವಭಕ್ತಿಹೀನನಾಗಿರುವನೋ ಅವನಿಗೆ ದಾನವನ್ನು ಕೊಟ್ಟವನಿಗೂ ಭೋಜನವನ್ನು ಮಾಡಿಸಿದವನಿಗೂ ನರಕವಾಗುವದು.

( ಕಾಳಿಕಾಖಂಡದಲ್ಲಿ ವಿಷ್ಣುವಚನವು. )

ಮೂ। ವೈಕುಂಠವಾಸಿನಸ್ಸರ್ವೇಶೃಣ್ವಂತುಮಮಘೋಷಣಂ । ಸುವೃತ್ತೋದುರ್ವಿನೀತೋವಾಶಿವಭಕ್ತೋಪ್ರಭುರ್ಮಮ ॥ ಯೆದ್ವಿಷಂತಿಶಿವೇಭಕ್ತಾನ್ ಬ್ರಹ್ಮಚಾರಿಗೃಹಾಶ್ರಮಾನ್ । ವಾನಪ್ರಸ್ಥಾನ್ ಯತೀನ್ಮೂಢಾಃಪಾಷಂಡಾಸ್ತೇನಚಾಪರೇ ॥

ಟೀ। ವೈಕುಂಠ ಲೋಕದಲ್ಲಿ ವಾಸಮಾಡುವ ನನ್ನ ಭಕ್ತರೆಲ್ಲರೂ ನಾನು ಸಾರುವದನ್ನು ಕಿವಿಗೊಟ್ಟುಕೇಳಿರಿ. ಶಿವಭಕ್ತನಾದವನು ಒಳ್ಳೆನಡತೆಯುಳ್ಳವನಾಗಿರಲಿ ಕೆಟ್ಟನಡತೆಯುಳ್ಳವನಾಗಿರಲಿ ಅವನೇ ನನ್ನ ಸ್ವಾಮಿಯಾಗಿರುವನು. ಯಾರು ಶಿವಭಕ್ತರಾದ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿಗಳನ್ನು ದ್ವೇಷಿಸುತ್ತಾರೋ ಅವರೇ ಪಾಷಂಡರು ಉಳಿದವರು ಪಾಷಂಡರಲ್ಲ.

[ ಆದಿತ್ಯ ಪುರಾಣದಲ್ಲಿ ಬ್ರಹ್ಮನ ವಚನವು. ]

ಮೂ। ಶಿವಭಕ್ತಸ್ಸದಾಪೂಜ್ಯಸ್ಸರ್ವಾವಸ್ಥಾಗತೋಪಿವಾ । ನಾಸ್ಯಾಚಾರಂಪರೀಕ್ಷೇತನಕುಲಂನವ್ರತಂತಥಾ॥ ತ್ರಿಪುಂಡ್ರಾಂಕಿತಭಾವೇನಪೂಜ್ಯೋಪಿವಹಿನಾರದ ॥ ಕರ್ಮಣಾಮನಸಾವಾಚಾಯಸ್ತುಭಕ್ತಾನ್ವಿನಿಂದತಿ ॥ ನಿರಯಾನ್ನಿಷ್ಕೃತಿರ್ನಾಸ್ತಿತಸ್ಯಮೂಢಾತ್ಮನೋಮುನೇ ॥

ಟೀ। ಶಿವಭಕ್ತಿ ಸಂಪನ್ನನಾದವನು ಯಾವ ಸ್ಥಿತಿಯಲ್ಲಿದ್ದರೂ ಅವನ ಆಚಾರವನ್ನೂ ಅವನ ಕುಲವನ್ನೂ ಅವನ ನಿಯಮವನ್ನೂ ಪರೀಕ್ಷಿಸಕೂಡದು. ಆತನು ಭಸ್ಮತ್ರಿಪುಂಡ್ರ ಚಿಹ್ನೆಯುಳ್ಳವನಾಗಿರುವದರಿಂದ ಪೂಜ್ಯನೆನಿಸಿಕೊಳ್ಳುವನು. ಚೇಷ್ಟೆಯಿಂದಲಾಗಲಿ ಮನಸ್ಸಿನಿಂದಲಾಗಲಿ ಮಾತಿನಿಂದಲಾಗಲಿ ಯಾವನು ಶಿವಭಕ್ತರನ್ನು ನಿಂದಿಸುತ್ತಾನೋ ಮೂಢಾತ್ಮನಾದ ಅವನಿಗೆ ನರಕವನ್ನು ತಪ್ಪಿಸಿಕೊಳ್ಳುವದಕ್ಕೆ ತಕ್ಕ ಪ್ರಾಯಶ್ಚಿತ್ತವೇ ಇಲ್ಲ.

[ ಶಿವರಹಸ್ಯದಲ್ಲಿ ]

ಪುೂ । ಶಿವಭಕ್ತಾನ್ಸಕೃನ್ನಿಂದೆದ್ಯೋಜನಃಪಾಪಕರ್ಮಕೃತ್ । ಯುಗ ಕೋಟ್ಯಾಂಕ್ರಿಮಿರ್ಭೂತ್ವಾವಿಷ್ಠಾಯಾಂಜಾಯತೆಪುನಃ ॥ಸೂ ಕರಃಕೋಟಿಜನ್ಮಾನಿಜಾಯತೆಶತಕೋಟಿಶಃ ॥ ಮೃಗಶ್ಚಕೋಟಿ ಜನ್ಮಾನಿಸೃಗಾಲಃಕೋಟಿಜನ್ಮಸು । ಅಂಧಸ್ಸ್ಯಾತ್ಕೋಟಿಜನ್ಮಾ ನಿಕುಬ್ಜಸ್ಸ್ಯಾಸ್ಸಪ್ತಜನ್ಮಸು । ಪಂಗುಶ್ಚಶತಜನ್ಮಾನಿಪಾಷಂ ಡೋಜಾಯತೆಶತೆ । ಉಲೂಕವಾಯಸಗೃಧ್ರಸರ್ಪಸೂಕರಗ ರ್ದಭಾಃ।ಜಾಯತೆಮ್ರಿಯತೆಚೈವನಿಷ್ಕೃತಿರ್ನವಿಧೀಯತೆ ॥

ಟೀ । ಯಾವನು ಶಿವಭಕ್ತರನ್ನು ದೂಷಿಸುತ್ತಾನೋ ಆ ಪಾ ಪಿಯು. ಕೋಟಿಯುಗಗಳಲ್ಲಿ ಪುರೀಷದಲ್ಲಿ ಹುಳುವಾಗಿ ಹುಟ್ಟುತ್ತಾನೆ. ತಿರಿಗಿ ಕೋಟಿ ಸಾರಿ ಹಂದಿಯಾಗಿಯೂ,ನೂರುಕೋಟಿಸಾರಿ ಮೃಗವಾಗಿ ಯೂ,ಕೋಟಿ ಜನ್ಮಗಳಲ್ಲಿ ಕೋಣನಾಗಿಯೂ, ಕೋಟಿ ಜನ್ಮಗಳಲ್ಲಿಕು ರುಡನಾಗಿಯೂ, ಕೋಟಿ ಜನ್ಮಗಳಲ್ಲಿ ಕುಳ್ಳನಾಗಿಯೂ,ಏಳು ಜನ್ಮಗಳಲ್ಲಿ ಹೋಟನಾಗಿಯೂ,ನೂರು ಜನ್ಮಗಳಲ್ಲಿ ಪಾಷಂಡನಾಗಿಯೂ,ನೂರು ಜ ನ್ಮಗಳಲ್ಲಿ ಗೂಬೆ, ಕಾಗೆ, ಹದ್ದು, ಹಾವು, ಕತ್ತೆಗಳಾಗಿಯೂ ಹುಟ್ಟುವ ನು ಹೀಗೆ ಹುಟ್ಟುತ್ತಾ ಇರುವನು. ಈ ಪಾಪಕ್ಕೆ ಪ್ರತೀಕಾರವೇ ಇಲ್ಲ.

( ಶಿವಧರ್ಮೋತ್ತರತಲ್ಲಿ )

ಪುೂ । ಉಪವೀತಿಸಹಸ್ರೇಭ್ಯೋಬ್ರಹ್ಮಚಾರೀವಿಶಿಷ್ಯತೆ।ಬ್ರಹ್ಮಚಾರಿಸಹ ಸ್ರೇಭ್ಯೋವೆದಾಧ್ಯಾಯೀವಿಶಿಷ್ಯತೆ ॥ ವೆದಾಧ್ಯಾಯಿಸಹಸ್ರೇಭ್ಯ ಶ್ಚಾಗ್ನಿಹೋತ್ರೀವಿಶಿಷ್ಯತೆ।ಅಗ್ನಿಹೋತ್ರಿಸಹಸ್ರೇಭ್ಯೋಯಜ್ಞ ಯಾಜೀವಿಶಿಷ್ಯತೆ।ಯಜ್ಞಯಾಜಿಸಹಸ್ರೇಭ್ಯಸ್ಸತ್ರಯಾಜೀವಿಶಿ ಷ್ಯತೆ । ಸತ್ರಯಾಜಿಸಹಸ್ರೇಭ್ಯಸ್ಸರ್ವವಿದ್ಯಾರ್ಥಪಾರಗಃ । ಸರ್ವ ವಿದ್ಯಾರ್ಥವಿತ್ಕೋಟ್ಯಾಶ್ಶಿವಭಕ್ತೋವಿಶಿಷ್ಯತೆ।

ಟೀ । ಸಾವಿರ ಬ್ರಾಹ್ಮಣ ಕುಮಾರರೊಳಗೆ ಬ್ರಹ್ಮಚಾರಿಯು ಅಧಿಕನು. ಸಾವಿರ ಬ್ರಹ್ಮಚಾರಿಗಳೊಳಗೆ ವೇದಾಧ್ಯಯನ ಸಂಪನ್ನನಾದ ವನು ಅಧಿಕನು. ಸಾವಿರ ವೇದಾಧ್ಯಯನಸಂಪನ್ನರೊಳಗೆ ಒಬ್ಬ ಅಗ್ನಿ ಹೋತ್ರಮಾಡಿದವನು ಹೆಚ್ಚು. ಸಾವಿರ ಅಗ್ನಿಹೋತ್ರಿಗಳೊಳಗೆ ಯಜ್ಞ ಮಾಡಿದವನು ಅಧಿಕನು ಸಾವಿರಯಜ್ಞ ಕರೊಳಗೆ ಸತ್ರ ಯಾಗವನ್ನು ಮಾಡಿದವನು ಅಧಿಕನು. ಸಾವಿರ ಸತ್ರಯಾಜಿಗಳೊಳಗೆ ವೇದವೇದಾಂಗಾ

ದಿ ವಿದ್ಯೆಗಳನ್ನು ಬಲ್ಲವನು ಅಧಿಕನು. ಸಕಲ ವಿದ್ಯಾರ್ಥವನ್ನು ತಿಳಿದ ಕೋಟಿಮಂದಿಗಳೊಳಗೆ ಶಿವಭಕ್ತನು ಅಧಿಕನು.

ಇದು ತೋಂಟದದಾರ್ಯರಿಂದ ರಚಿತವಾದ ವೀರಶೈವಮತ ಪ್ರದೀಪಿಕೆಯಲ್ಲಿ ಶಿವಭಕ್ತಿ ಮಹಿಮ ಪ್ರಕರಣವು ಸಂಪೂರ್ಣವು.

---

## ವೇದಾಗಮೈಕ್ಯಾರ್ಥ ಪ್ರತಿಪಾದನ ಪ್ರಕರಣಂ

ಅವ. ವೀರಶೈವಮತಕ್ಕೆ ಕಾಮಿಕಾಗಮ ಮೊದಲಾದ ಶೈವಾಗಮಗಳೇ ಮೂಲವಾಗಿರುವದರಿಂದ ವೀರಶೈವ ಮತವು ವೈದಿಕವಲ್ಲ. ಅವೈದಿಕವಾದ ಆಗಮದಲ್ಲಿ ವೈದಿಕರಿಗೆ ಅಧಿಕಾರವಿಲ್ಲ. (ವೇದಮಾರ್ಗಪ್ರಚ್ಯುತಾನಾಂತಂತ್ರಮಾರ್ಗನಿವೇಶನಂ) ಎಂದರೆ;—ವೇದಮಾರ್ಗದಿಂದ ಜಾರಿದವರಿಗೆ ತಂತ್ರಮಾರ್ಗದಲ್ಲಿ ಪ್ರವೇಶವು. ಎಂಬ ಪ್ರಮಾಣದಿಂದ ಆಗಮಮೂಲಕವಾದ ವೀರಶೈವ ಮತಕ್ಕೆ ಅವೈದಿಕತ್ವವೆಂಬ ವಿಷಯದಲ್ಲಿ ಹೇಳುತ್ತೇನೆ.

ಮೂ ॥ ವೆದೈಕದೆಶವರ್ತಿಭ್ಯಸ್ಸಾಂಖ್ಯಾದಿಭ್ಯೋಮಹಾಮುನೇ। ಸರ್ವವೆದಾನುಸಾರಿತ್ವಾಚ್ಛೈವತಂತ್ರಂವಿಶಿಷ್ಯತೆ॥

ಟೀ ॥ ವೇದದಲ್ಲಿ ಒಂದೊಂದು ಭಾಗವನ್ನು ಮಾತ್ರ ಅನುಸರಿಸಿರುವ ಸಾಂಖ್ಯಯೋಗ ಪಾಂಚರಾತ್ರಗಳಿಗಿಂತಲೂ ಸಕಲವೇದವನ್ನನುಸರಿಸಿರುವ ಶೈವತಂತ್ರನೇ ಅಧಿಕವಾದದ್ದು ಎಂದು ರೇಣುಕಾಚಾರ್ಯರು ಅಗಸ್ತ್ಯಮುನಿಗೆ ನಿರೂಪಿಸಿದರು. ಇದಲ್ಲದೆ.

ಮೂ ॥ ಶೈವತಂತ್ರಮಿತಿಪ್ರೋಕ್ತಂಸಿದ್ಧಾಂತಾಖ್ಯಂಶಿವೋದಿತಂ ॥ ಸರ್ವವೆದಾರ್ಥರೂಪತ್ವಾತ್ಪ್ರಮಾಣಂವೆದವತ್ಸದಾ ॥ ಆಗಮಾಬಹುಧಾಪ್ರೋಕ್ತಾಶ್ಶಿವೆನಪರಮಾತ್ಮನಾ ॥ ಶೈವಂಪಾಶುಪತಂಸೋಮಂಲಾಂಕುಳಂಚೆತಿಭೆದತಃ॥

ಟೀ ॥ ಪರಶಿವನು ಪಾರ್ವತಿಗೆಉಪದೇಶಿಸಿದ ಸಿದ್ಧಾಂತವೆಂಬ ಹೆಸರುಳ್ಳ ಆಗಮವು ಶೈವತಂತ್ರವೆಂದು ಹೇಳಲ್ಪಡುವದು. ಆ ಶೈವ ತಂತ್ರವು ಸಮಸ್ತವೇದದ ಅರ್ಥವಾಗಿರುವದರಿಂದ ವೇದದಂತೆ ಯಾವಾಗಲೂ ಪ್ರಮಾಣವಾದದ್ದು. ಶಿವನು ಆಗಮಗಳನ್ನು ಶೈವವು, ಪಾಶುಪತವು, ಸೋಮವು ಲಾಕುಳವು ಎಂಬ ಭೇದದಿಂದ ಅನೇಕ ಪ್ರಕಾರವಾಗಿ ಹೇಳಿದನು.

ಅವ. ಶೈವಾಗಮ ಭೇದಗಳನ್ನು ನಿರೂಪಿಸುವೆನು.

ಕು. ಇದು ದ್ರವ್ಯ ಶುದ್ಧಿ ಯೆಂದು ಹೇಳಲ್ಪಡುವದು

ಮೂ ॥ ಭಕ್ತೇನಯತ್ಕೃತಂವೇಶ್ಮಲಿಂಗಮುದ್ರಾಸಮನ್ವಿತಂ । ಅಭಕ್ತ ಸ್ಪರ್ಶನಾಭಾವಾದ್ವೇಶ್ಮಶುದ್ಧಿರಿಹೋಚ್ಯತೆ ॥

ಟೀ । ಶಿವಭಕ್ತನಿಂದ ಲಿಂಗಮುದ್ರಾಂಕಿತವಾಗಿ ಮನೆಯನ್ನು ಕಟ್ಟಿಸಬೇಕು. ಆ ಮನೆಗೆ ಭವಿಗಳ ಸ್ಪರ್ಶವಿಲ್ಲದಿದ್ದಲ್ಲಿಅದೇಗೃಹಶುದ್ಧಿಯೆಂದುಹೇಳಲ್ಪಡುವದು

ಮೂ । ಅಭಕ್ತದರ್ಶನಾಭಾವಾತ್ಪಕ್ವಮನ್ನಂವರಾನನೆ ॥ ಶಾಕಂತೈಲಾದಿಕಂಸರ್ವಂಪಾಕಶುದ್ಧಿರಿಹೋಚ್ಯತೆ ।

ಟೀ । ಲಿಂಗಧಾರಣ ಹೀನರಾದ ಭವಿಗಳು ನೋಡದಂತೆ ಅನ್ನ,ಕಾಯಿ ಪಲ್ಯ, ಎಣ್ಣೆ ಮೊದಲಾದದ್ದೆಲ್ಲವನ್ನೂ ಬೇಯಿಸುವದೇ ಪಾಕಶುದ್ಧಿ ಯೆನಿಸುವದು

ಮೂ । ಘೃತಂದಧಿಪಯಸ್ತಕ್ರಂಮಾಕ್ಷಿಕಂವರ್ಜ್ಜಯೆತ್ತತಃ। ತದ್ವರ್ಜನಂಚದೇವೇಶಿರಸಶುದ್ಧಿರಿಹೋಚ್ಯತೆ।

ಟೀ । ಭವಿಗಳು ಮುಟ್ಟಿದ, ತುಪ್ಪ, ಮೊಸರು, ಹಾಲು, ಮಜ್ಜಿಗೆ, ಜೇನು ಮೊದಲಾದ ರಸ ಪದಾರ್ಥಗಳನ್ನು ಬಿಟ್ಟು ಲಿಂಗಧಾರಕಮುಖದಿಂದ ಅವುಗಳನ್ನು ತೆಗೆದುಕೊಳ್ಳುವದೇ ರಸಶುದ್ಧಿಯೆನಿಸುವದು.

ಮೂ । ಲಿಂಗಾರ್ಚನವಿಧೌಭಕ್ತಃಕಾಷ್ಠಮೌನಂಸಮಾಚರೆತ್ । ದತ್ವಾಚಭಾವನಾಂಲಿಂಗೆಭಾವಶುದ್ಧಿರಿಹೋಚ್ಯತೆ ।

ಟೀ । ವೀರಶೈವನಾದವನು ಲಿಂಗ ಪೂಜೆಯಂ ಮಾಡುವ ಸಮಯದಲ್ಲಿ ತನ್ನ ಭಾವನೆಯನ್ನು ಲಿಂಗದಲ್ಲಿಟ್ಟು ಕಾಷ್ಠದಂತೆ ನಿಶ್ಚಲತೆಯಂ ವಹಿಸಿ ಮೌನದಿಂದಿರುವದೇ ಭಾವಶುದ್ಧಿಯೆನಿಸುವದು.

ಮೂ । ಸಮಯಾರಾಧನಂನಿತ್ಯಂಧನಪ್ರಾಣಾಭಿಮಾನಕೈಃ ! ತ್ರಿಸಂಧ್ಯಂ ಧ್ಯಾನತೋದೇವಿಮಾರ್ಗಶುದ್ಧಿರಿಹೋಚ್ಯತೆ।

ಟೀ । ಪ್ರತಿದಿನದಲ್ಲಿಯೂ ದ್ರವ್ಯ, ಪ್ರಾಣ, ಅಭಿಮಾನಗಳಿಂದ ವೀರಶೈವಮತಾವಲಂಬಿಗಳನ್ನು ಆರಾಧಿಸುತ್ತಾ ಹೊತಾರೆ, ಮಧ್ಯಾಹ್ನ ಸಾಯಂಕಾಲಗಳಲ್ಲಿ ಶಿವ ಧ್ಯಾನವಂ ಮಾಡುವದೇ ಮಾರ್ಗಶುದ್ಧಿಯೆನಿಸುವದು.

ಮೂ । ರಾತ್ರೌಮಧ್ಯಮಯಾಮೆತುಸುಪ್ತೆಷ್ವಖಿಲಜಂತುಷು।ಪ್ರೌಢಪ್ರಸಾದಭೋಗಶ್ಚಕಾಲಶುದ್ಧಿರಿಹೋಚ್ಯತೆ।

ಟೀ ॥ ರಾತ್ರಿಯಲ್ಲಿ ಎರಡನೇ ಜಾವದಲ್ಲಿ ಸಕಲ ಪ್ರಾಣಿಗಳೂ ಮಲಗಿಕೊಂಡು ನಿದ್ರೆಹೋಗುತ್ತಿರುವಾಗ; ಭಕ್ತಿಯಿಂದ ಶಿವಲಿಂಗಕ್ಕೆ ಸಮರ್ಪಿಸಲ್ಪಟ್ಟ ಭೋಜ್ಯ ಮೊದಲಾದ ಪ್ರಸಾದವನ್ನು ಸೇವಿಸುವದೇ ಕಾಲಶುದ್ಧಿ ಯೆನಿಸುವದು.

ಮೂ । ವಿನಯಸ್ಸರ್ವಭಕ್ತಾನಾಂ ಕ್ರಿಯತೇಹಿತಯಾಗಿರಾ । ತದ್ವಾಚ
ಶ್ಚಾನುಕೂಲ್ಯಂಚನಯಶುದ್ಧಿರಿಹೋಚ್ಯತೇ ।

ಟೀ । ಭಕ್ತರಾದವರಲ್ಲಿ ಇಂಪಾದ ಮಾತುಗಳಿಂದ ವಿನಯವನ್ನು ತೋರಿಸುತ್ತಾ ಅವರ ಮಾತುಗಳಿಗೆ ಅನುಕೂಲನಾಗಿರುವದೇ ನಯಶುದ್ಧಿ ಯೆನಿಸುವದು.

ಮೂ । ಆಸನೇಶಯನೇಯಾನೇಗಮನಾಗಮನೇಷ್ವಪಿ ॥ ಭಕ್ತೈಸ್ಸಹಸಾಂ
ಗತ್ಯಂಜನಶುದ್ಧಿರಿಹೋಚ್ಯತೇ ।

ಟೀ । ಕೂತುಕೊಳ್ಳುವಲ್ಲಿಯೂ ಮಲಗುವಲ್ಲಿಯೂ ವಾಹನದ ಮೇಲೆ ಕುಳ್ಳಿರುವಲ್ಲಿಯೂ, ಹೋಗುವಲ್ಲಿಯೂ, ಬರುವಲ್ಲಿಯೂ, ನಿಂತುಕೊಳ್ಳುವಲ್ಲಿಯೂ, ಲಿಂಗಧಾರಿಗಳೊಡನೆ ಸಂಬಂಧವು ಜನಶುದ್ಧಿ ಯೆನಿಸುವದು.

ಮೂ । ಭವಿನಾಶಯನಾದ್ಧ್ಯಾನಾತ್ಸಂಪರ್ಕಾತ್ಸಹಭೋಜನಾತ್ । ಸಂಚ
ರಂತಿಮಹಾಘೋರೇನರಕೇಕಾಲಮಕ್ಷಯಂ ।

ಟೀ ॥ ಲಿಂಗಾಂಗಿಗಳಾದವರು ಭವಿಗಳೊಡನೆ ಮಲಗುವದರಿಂದಲೂ, ಅವರೊಡನೆ ಸಂಚರಿಸುವದರಿಂದಲೂ, ಭವಿಸ್ತ್ರೀಯರನ್ನು ರಮಿಸುವದರಿಂದಲೂ, ಅವರ ಸಹಪಂಗ್ತಿಯಲ್ಲಿ ಭೋಜನವಂ ಮಾಡುವದರಿಂದಲೂ, ಅನಂತಕಾಲ ಭಯಂಕರವಾದ ನರಕದಲ್ಲಿ ದುಃಖವನ್ನನುಭವಿಸುವರು.

ಮೂ ॥ ಲಿಂಗಂಚಜಂಗಮಂಚೈವಅವಿನಾಭಾವಚೇತಸಾ । ಅಲೋಕಯಂ
ತಿವಿಬುಧಾಸ್ತೇಜನಾಭಕ್ತಮುಖ್ಯಕಾಃ ॥

ಟೀ । ಲಿಂಗವನ್ನೂ ಜಂಗಮವನ್ನೂ ಅಭೇದ ಬುದ್ಧಿಯಿಂದ ಯಾರು ನೋಡುತ್ತಾರೋ, ಬುದ್ಧಿಶಾಲಿಗಳಾದ ಆ ಜನರೇ ಭಕ್ತರಲ್ಲಿ ಶ್ರೇಷ್ಠರೆನಿಸುವರು.

ಮೂ । ಲಿಂಗೇಚಜಂಗಮೇಚೈವಶಿಲಾಮಾನುಷಮಾನಸಂ । ತ್ಯಜಂತಿಯೇಜ
ನಾಸ್ಸರ್ವೇಭಕ್ತಿಸ್ಥಲವಿಚಾರಿಣಃ ।

ಟೀ । ಯಾರು ಗುರುವಿನಿಂ ಕೊಡಲ್ಪಟ್ಟ ಶಿವಲಿಂಗದಲ್ಲಿ ಶಿಲೆಯೆಂಬ ಬುದ್ಧಿಯನ್ನೂ, ಶಿವದೀಕ್ಷಾಸಂಸ್ಕೃತನಾಗಿಯೂ, ಆಚಾರಸಂಪನ್ನನಾಗಿ

ಯೂ, ಜಿತೇಂದ್ರಿಯನಾಗಿಯೂ, ಪಂಚಮುದ್ರಾಧಾರಿಯಾಗಿಯೂ, ಶಿವ
ಜ್ಞಾನಸಂಪನ್ನನಾಗಿಯೂ, ಇರುವ ಜಂಗಮನಾಮಕನಾದ ಶಿವಯೋಗಿ
ಯಲ್ಲಿ ಮನುಷ್ಯನೆಂಬ ಬುದ್ಧಿಯನ್ನು ಬಿಟ್ಟಿರುವರೋ ಅವರೇ ಭಕ್ತಸ್ಥ
ಲ ವಿಚಾರವುಳ್ಳವರೆನಿಸಿಕೊಳ್ಳುವರು.

ಮೂ ॥ ಉಚ್ಛಿಷ್ಟಂಸಹಭೋಜ್ಯಂಚಚೌರ್ಯಂಜೀವಹಿಂಸನಂ । ಭ
ಕ್ತಾನಾಂಚನಕರ್ತವ್ಯಂಕೃತ್ವಾಚೇತ್ಪಾತಕೀಭವೇತ್ ॥

ಟೀ । ಭಕ್ತರಾದವರು ಗುರು, ಲಿಂಗ, ಜಂಗಮ ಪ್ರಸಾದಗಳನ್ನು
ಹೊರತು ಇತರವಾದ ಎಂಜಲನ್ನು ತಿನ್ನಕೂಡದು. ಒಂದೇ ಪಾತ್ರೆಯಲ್ಲಿ ಇ
ನ್ನೊಬ್ಬರಸಂಗಡ ಊಟವಂ ಮಾಡಲಾಗದು. ಪರದ್ರವ್ಯವನ್ನು ಅಪಹರಿಸ
ಬಾರದು. ಪ್ರಾಣಿಹಿಂಸೆಯನ್ನುಮಾಡಬಾರದು. ಮೀರಿಮಾಡಿದರೆಮಹಾಪಾ
ಪಿಯೆನಿಸಿಕೊಳ್ಳುವನು.

ಮೂ । ಅಕ್ರೋಧೋಗುರುಶುಶ್ರೂಷಾಶೌಚಮಾಹಾರಲಾಘವಂ । ಅಪ್ರ
ಮಾದಶ್ಚ ಪಂಚೈತೆನಿಯಮಾಸ್ಸಂಪ್ರಕೀರ್ತಿತಾಃ ।

ಟೀ । ಕೋಪವಿಲ್ಲದಿರುವಿಕೆ. ಗುರುಸೇವೆ, ನಿರ್ಮಲತ್ವವು, ಮಿತಾ
ಹಾರವು, ಜಾಗರೂಕತೆಯು, ಈ ಐದು ಭಕ್ತನ ನಿಯಮಗಳಾಗಿರುವವು.

ಮೂ । ಅಹಿಂಸಾಸತ್ಯವಚನಂಸಂವಿಭಾಗೋದಮಃಕ್ಷಮಾ ! ಅನುಗ್ರಹಶ್ಚ
ದಾನಂಚಶೀಲಮೇತತ್ಪ್ರಶಸ್ಯತೇ ॥

ಟೀ । ಪರಹಿಂಸೆಯಂಮಾಡದಿರುವದು, ಯಥಾರ್ಥವಚನವನ್ನಾಡು
ವದು, ಇದು ಒಳ್ಳೇದು ಇದು ಕೆಟ್ಟದ್ದು, ಎಂಬವಿಚಾರವು, ಇಂದ್ರಿಯನಿ
ಗ್ರಹವು, ಶಾಂತಿಯು, ಅನುಗ್ರಹವು, ಸತ್ಪಾತ್ರದಾನವು, ಈ ಆರು ಭಕ್ತ
ನಿಗೆ ಶೀಲಗಳೆನಿಸುವವು.

ಮೂ ॥ ಶಿವಭಕ್ತಾಮಹೋತ್ಸಾಹಾಶ್ಶಿವಾರ್ಚನಪರಾಯಣಾಃ । ಸಂ
ತಾಧರ್ಮಸಂಪತ್ತ್ಯಾಸರ್ವಾರ್ಥಾನ್ಸಾಧಯಂತಿತೇ । ಸರ್ವದ್ವಂದ್ವ
ಸಹಾಧೀರಾನಿತ್ಯಮುದ್ಬುದ್ಧಚೇತಸಃ । ಪರೋಪಕಾರನಿರತಾಗು
ರುಶುಶ್ರೂಷಣೇರತಾಃ । ಋಜವೋಮೃದವಸ್ಸ್ವಚ್ಛಾಅನುಕೂ
ಲಾಃಪ್ರಿಯಂವದಾಃ । ಶಾಂತಾಸ್ಸ್ಮಿತಮುಖಾಭದ್ರಾಸಿತ್ಯಂಸ್ವಾ
ಗತವಾದಿನಃ ! ಅಲ್ಪವಾಚಸ್ಸುವಕ್ತಾರಶ್ಶೂರಾಸ್ತ್ಯಾಗವಿಶಾರ
ದಾಃ । ಅಮಾನಿನೋಬುದ್ಧಿಮಂತಸ್ತ್ಯಕ್ತಸ್ಪರ್ಧಾಗತಸ್ಪೃಹಾಃ ।
ಶಿವಾಚಾರಸಮಾಯುಕ್ತಾದಯಾದಾಕ್ಷಿಣ್ಯಗೋಚರಾಃ । ದಂಭ

ಮಾತ್ಸರ್ಯನಿರ್ಮುಕ್ತಾ ಯಾತಥಾತಥ್ಯವಿಭಾಷಿಣಃ। ಸಂವಿಭಾಗಪ
ರಾಃಪ್ರಾಜ್ಞಾಸ್ತ್ವಲುಬ್ಧಾಶ್ಚಾಪ್ಯಕುತ್ಸಿತಾಃ । ನದೀನಾನಾಪಿಮ
ಲಿನಾ ನಚರೋಷವಶಾನುಗಾಃ । ಭವಂತಿಹ್ಯಮಲಾತ್ಮಾನಸ್ಸು
ಸ್ನಿಗ್ಧಾಸ್ಸಾಧುಸೇವಿನಃ ।

ಟೀ॥ ಶಿವಭಕ್ತರಾದವರು, ಸದಾ ಸಂತೋಷಚಿತ್ತರೂ, ಶಿವಾರ್ಚನೆಯಲ್ಲಿ ಆಸಕ್ತರೂ, ಧರ್ಮದಲ್ಲಿ ಬದ್ಧರೂ, ಆಗಿ ಸಕಲ ಪುರುಷಾರ್ಥಗಳನ್ನೂ ಸಾಧಿಸುತ್ತಾರೆ. ಮತ್ತು, ಶೀತೋಷ್ಣಾದಿ ದ್ವಂದ್ವದುಃಖಗಳನ್ನ ಸಹಿಸುವವರೂ, ವಿಪತ್ತುಗಳಲ್ಲಿ ಧೈರ್ಯವನ್ನು ಅವಲಂಬಿಸುವವರೂ, ಯಾವಾಗಲೂ ವಿಕಸಿತವಾದ ಹೃದಯವುಳ್ಳವರೂ, ಪರೋಪಕಾರದಲ್ಲಿ ಪರಾಯಣರೂ; ಗುರುಸೇವೆಯಲ್ಲಿ ತತ್ಪರರೂ, ಕೌಟಿಲ್ಯವಿಲ್ಲದವರೂ, ಮೆತ್ತನೆಯ ಸ್ವಭಾವವುಳ್ಳವರೂ, ನಿರ್ಮಲರೂ, ಜನಗಳಿಗೆ ವಿರೋಧವಂತೋರಿಸದವರೂ, ಪ್ರೀತಿಕರವಾದ ಮಾತುಗಳನ್ನಾಡುವವರೂ, ಶಾಂತಿಗುಣವುಳ್ಳವರೂ, ನಗೆಮೊಗವುಳ್ಳವರೂ, ಮಂಗಳಸ್ವರೂಪರೂ, ಮನೆಗೆ ಬಂದ ಅತಿಥಿ ಅಭ್ಯಾಗತ ಮೊದಲಾದವರ ಸುಖಾಗಮನವನ್ನು ಕೇಳುವವರೂ, ಮಿತಭಾಷಿಗಳೂ, ಒಳ್ಳೆಮಾತುಗಳನ್ನಾಡುವವರೂ; ಶೌರ್ಯವುಳ್ಳವರೂ, ಔದಾರ್ಯಗುಣದಲ್ಲಿ ಸಮರ್ಥರೂ, ಅಹಂಕಾರವಿಲ್ಲದವರೂ, ಬುದ್ಧಿಶಾಲಿಗಳೂ, ಅಸೂಯೆಯಿಲ್ಲದವರೂ, ಆಶೆಯಿಲ್ಲದವರೂ, ದಯೆದಾಕ್ಷಿಣ್ಯವುಳ್ಳವರೂ, ಶಿವಾಚಾರಸಂಪನ್ನರೂ, ಡಂಭ, ಇತರರ ಶ್ರೇಯಸ್ಸಿನಲ್ಲಿ ದ್ವೇಷಪಡುವದು, ಈ ಗುಣಗಳಿಂದ ಬಿಡಲ್ಪಟ್ಟವರೂ, ಸತ್ಯವಚನವನ್ನಾಡುವವರೂ, ನಿತ್ಯಾನಿತ್ಯವಸ್ತುವಿವೇಕವುಳ್ಳವರೂ, ಪ್ರಾಜ್ಞರೂ, ಕೃಪಣರಲ್ಲದವರೂ, ಶ್ಲಾಘಿಸಲ್ಪಟ್ಟವರೂ, ದೈನ್ಯಪಡದವರೂ, ಕೊಳೆಯಿಲ್ಲದವರೂ, ಕೋಪಿಷ್ಠರ ಸಂಗವಿಲ್ಲದವರೂ, ನಿರ್ಮಲವಾದ ಮನಸ್ಸುಳ್ಳವರೂ, ಸ್ನೇಹಪರರೂ, ಸತ್ಪುರುಷರನ್ನು ಆರಾಧಿಸುವವರೂ ಆಗಿರುತ್ತಾರೆ.

ಇದು ತೋಂಟದಾರ್ಯರಿಂ ರಚಿತವಾದ ವೀರಶೈವ
ಪ್ರದೀಪಿಕೆಯೊಳ್ ವೇದಾಗಮಾರ್ಥೈಕ್ಯ
ನಿರೂಪಣವೆಂಬ ಹದಿನಾರನೆಯ
ಪ್ರಕರಣವು ಸಮಾಪ್ತವು.

## ಸತ್ಪಾತ್ರದಾನ ನಿರೂಪಣಂ.

### ಕೂರ್ಮ ಪುರಾಣದಲ್ಲಿ

ಶ್ಲೋ ॥ ನಿತ್ಯಂನೈಮಿತ್ತಿಕಂಕಾಮ್ಯಂದಾನಂತ್ರಿವಿಧಮುಚ್ಯತೇ । ಚತು
ರ್ಥಂವಿಮಲಂಪ್ರೋಕ್ತಂಸರ್ವದಾನೋತ್ತಮೋತ್ತಮಂ ॥

ಟೀ ॥ ನಿತ್ಯವು, ನೈಮಿತ್ತಿಕವು, ಕಾಮ್ಯವು, ಎಂದು ದಾನವು ಮೂರು ಪ್ರಕಾರವು. ಇದರಮೇಲೆ ನಾಲ್ಕನೇದಾದ ವಿಮಲವೆಂಬ ದಾನವು ಸಕಲ ದಾನಗಳಲ್ಲಿಯೂ ಅತಿ ಶ್ರೇಷ್ಠವಾದದ್ದು.

ಮೂ ॥ ಅಹನ್ಯಹನಿಯತ್ಕಿಂಚಿದ್ದೀಯತೇಽನುಪಕಾರಿಣೇ । ಅನುದ್ದಿಶ್ಯಫಲಂ
ತಸ್ಮಾದ್ಬ್ರಾಹ್ಮಣಾಯತುನಿತ್ಯಕಂ । ಯತ್ತುಪಾಪೋಪಶಾಂ
ತ್ಯರ್ಥಂದೀಯತೇವಿದುಷಾಂಕರೇ । ನೈಮಿತ್ತಿಕಂತದುದ್ದಿಷ್ಟಂ
ದಾನಂಸದ್ಭಿರನುತ್ತಮಂ । ಅಪತ್ಯವಿಜಯೈಶ್ವರ್ಯಸ್ವರ್ಗಾರ್ಥಂ
ಯತ್ಪ್ರದೀಯತೇ । ದಾನಂತುಕಾಮ್ಯಮಾಖ್ಯಾತಂಮುನಿಭಿರ್ಧರ್
ಮಚಿಂತಕೈಃ । ಯದೀಶ್ವರಪ್ರೀಣನಾರ್ಥಂಬ್ರಹ್ಮವಿತ್ಸುಪ್ರದೀ
ಯತೇ । ಚೇತಸಾಭಕ್ತಿಯುಕ್ತೇನದಾನಂತದ್ವಿಮಲಂಶುಭಂ ॥

ಟೀ ॥ ಫಲವನ್ನು ಉದ್ದೇಶಿಸದೆ, ಪ್ರತಿದಿನದಲ್ಲಿಯೂ, ತನಗೆ ಉಪಕಾರವನ್ನುಮಾಡಿದ ಬ್ರಾಹ್ಮಣನಿಗೆ ಕೊಡಲ್ಪಡುವ ಯಾವದೊಂದು ವಸ್ತುವೂ ನಿತ್ಯದಾನವೆನಿಸುವದು ಪಾಪಪರಿಹಾರಕ್ಕಾಗಿ ಸಂಕಲ್ಪಿಸಿವಿದ್ವಾಂಸರ ಹಸ್ತದಲ್ಲಿ ಧಾರಾಪೂರ್ವಕವಾಗಿ ಕೊಡಲ್ಪಡುವ ವಸ್ತುವೇ ನೈಮಿತ್ತಿಕದಾನವೆಂದು ಹೇಳಲ್ಪಡುವದು. ಸಂತಾನ, ಜಯ, ಐಶ್ವರ್ಯ, ಸ್ವರ್ಗ ಮುಂತಾದ ಫಲಗಳನ್ನು ಪಡೆಯುವದಕ್ಕೋಸ್ಕರ ಯಾವದಾನವು ಕೊಡಲ್ಪಡುವದೋ ಅದುಕಾಮ್ಯವೆಂದು ಧರ್ಮಜ್ಞರಾದ ಮುನಿಗಳು ಹೇಳಿದರು. ಯಾವದಾನವು ಶಿವಪ್ರೀತ್ಯರ್ಥವಾಗಿ ಭಕ್ತಿಯಿಂ ಕೂಡಿದ ಮನಸ್ಸಿನಿಂದ ಬ್ರಹ್ಮಜ್ಞಾನಿಗಳಿಗೆ ಕೊಡಲ್ಪಡುವದೋ ಆದಾನವೇ ನಿರ್ಮಲದಾನವೆನಿಸುವದು

( ಶಿವಧರ್ಮಪುರಾಣದಲ್ಲಿ )

ಮೂ ॥ ಸರ್ವೇಷಾಮಪಿಪಾತ್ರಾಣಾಮತಿಪಾತ್ರಂಮಹೇಶ್ವರಃ । ನಿತ್ಯಂನೈ
ಮಿತ್ತಿಕಂಕಾಮ್ಯಂವಿಮಲಂಚಚತುರ್ವಿಧಂ । ದಾನಂಪಾತ್ರೇಪ್ರ
ದಾತವ್ಯಂನಾಪಾತ್ರೇಷ್ವಣುಮಾತ್ರಕಂ । ಹರಸ್ಯಪ್ರೀಣನಾ
ರ್ಥಂತುಶಿವಭಕ್ತಾಯದೀಯತೇ । ದಾನಂತದ್ವಿಮಲಂಪ್ರೋಕ್ತಂ
ಕೇವಲಂಮೋಕ್ಷಸಾಧನಂ । ತಸ್ಮಾತ್ಪಾತ್ರತಮಂಜ್ಞಾತ್ವಾಶಿವಭ

ಕ್ತಮಕಲ್ಮಷಂ। ತಸ್ಮೈಸರ್ವಂಪ್ರದಾತವ್ಯಮಕ್ಷಯಂಫಲಮಿಚ್ಛತಾಂ। ಪತನಾತ್ತ್ರಾಯತೆಯಸ್ಮಾದತೀವನರಕಾರ್ಣವಾತ್। ತಸ್ಯಪಾತ್ರಸ್ಯಮಾಹಾತ್ಮ್ಯಾದ್ದಾನಪುಣ್ಯಪಿಚಾಕ್ಷಯಂ। ತಸ್ಮಾತ್ತಸ್ಮೈಸದಾದೇಯಮಪ್ರಮಾಣಫಲಾರ್ಥಿಭಿಃ ।

ಟೀ। ಸಕಲ ಪಾತ್ರಗಳೊಳಗೂ ಮಾಹೇಶ್ವರನೇ ಉತ್ತಮ ಪಾತ್ರವು. ನಿತ್ಯವು, ನೈಮಿತ್ತಿಕವು, ಕಾಮ್ಯವು, ವಿಮಲವು ಎಂಬ ನಾಲ್ಕು ವಿಧ ದಾನವನ್ನು ಸತ್ಪಾತ್ರದಲ್ಲಿ ಕೊಡಬೇಕಲ್ಲದೆ ಅಪಾತ್ರನಲ್ಲಿ ಸ್ವಲ್ಪವನ್ನಾದರೂ ಕೊಡಕೂಡದು ಶಿವಪ್ರೀತಿಯನ್ನು ಉದ್ದೇಶಿಸಿ, ಶಿವಭಕ್ತನಿಗೆ ಕೊಡುವ ದಾನವೇ ವಿಮಲ ದಾನವೆನಿಸುವದು. ಆ ದಾನವೇ ಮೋಕ್ಷಪ್ರದಾಯಕವಾದದ್ದು. ಆದಕಾರಣದಿಂದ ನಾಶರಹಿತವಾದ ಫಲವನ್ನು ಬಯಸುವವರು ಪಾಪರಹಿತನಾದ ಶಿವಭಕ್ತನನ್ನು ಶ್ರೇಷ್ಠವಾದ ಪಾತ್ರವೆಂದು ತಿಳಿದು, ಅವನಿಗೆ ಸಕಲವನ್ನೂ ಕೊಡಬೇಕು. ಮಾಹೇಶ್ವರನೆಂಬ ಪಾತ್ರವು ಪಾಪದಿಂದಲೂ, ನರಕಸಮುದ್ರದಿಂದಲೂ ತಪ್ಪಿಸಿ ಕಾಪಾಡುತ್ತದೆ. ಪಾತ್ರದಲ್ಲಿ ಕೊಟ್ಟ ಪದಾರ್ಥವು ಅಲ್ಪವಾದಾಗ್ಯೂ ಅದರ ಮಹಿಮೆಯಿಂದ ಅಪರಿಮಿತವಾಗುವದು. ಆದಕಾರಣದಿಂದ ಅಪರಿಮಿತವಾದ ಫಲವನ್ನು ಅಪೇಕ್ಷಿಸುವವರು ನಿರಂತರದಲ್ಲಿಯೂ, ಮಾಹೇಶ್ವರನಿಗೆ ದಾನವಂ ಕೊಡಬೇಕು.

( ಶಿವರಹಸ್ಯದಲ್ಲಿ )

ಮೂ ॥ ಗುಣವತ್ಪಾತ್ರಪೂಜಾಯಾಃಪರಂಶಾಸನಪೂಜನಾತ್। ಶಾಸನಂಪೂಜಯೇತ್ತಸ್ಮಾದವಿಚಾರ್ಯಶಿವಾಜ್ಞಯಾ। ಪಾತ್ರಶಾಸನಯೋರ್ಮಧ್ಯೇಶಾಸನಂತುವಿಶಿಷ್ಯತೆ। ತಸ್ಮಾಚ್ಛಾಸನಮೆವಾದೌಪೂಜಯೆತ್ತಂಶಿವಂಯಥಾ ।

ಟೀ। ವೇದಸಂಪನ್ನತಾದಿ ಗುಣಗಳಿಂದ ಕೂಡಿದ ಪಾತ್ರವನ್ನು ಪೂಜಿಸುವದಕ್ಕಿಂತಲೂ, ಶಿವಚಿಹ್ನೆಯನ್ನು ಪೂಜಿಸುವದು ಉತ್ತಮವು ಆದ್ದರಿಂದ ವಿವೇಕಿಗಳಾದವರು ಸಂಶಯಪಡದೆ ಶಿವನ ಆಜ್ಞೆಯನ್ನು ನಂಬಿ ಶಿವಲಾಂಛನವನ್ನೇ ಪೂಜಿಸಬೇಕು. ಪಾತ್ರ, ಚಿಹ್ನೆ, ಈ ಎರಡರೊಳಗೆ ಚಿಹ್ನೆಯೇ ಅಧಿಕವಾದದ್ದು. ಆದ್ದರಿಂದ ಶಿವನನ್ನು ಪೂಜಿಸುವಂತೆ ಪ್ರಥಮದಲ್ಲಿ ಶಿವಚಿಹ್ನಧರರಾದ ಶಿವಭಕ್ತರನ್ನೇ ಪೂಜಿಸಬೇಕು.

( ಆದಿತ್ಯ ಪುರಾಣದಲ್ಲಿ )

ಮೂ ॥ ಯಸ್ತುಮಾಹೇಶ್ವರೋನಿತ್ಯಂಜಾತಿಮಾತ್ರೋಪಜೀವಕಃ । ಉತ್ತಮಂಸರ್ವಪಾತ್ರಾಣಾಂತಸ್ಮೈದತ್ತಂತದಕ್ಷಯಂ । ಶಿವಭಕ್ತಮತಿಕ್ರಮ್ಯಯಚ್ಚಾನ್ಯಸ್ಮೈಪ್ರದೀಯತೇ । ನಿಷ್ಫಲಂತದ್ಭವೇದ್ದಾನಂನರಕಂಚಪ್ರಪದ್ಯತೇ ॥

ಟೀ ॥ ಯಾವ ಮಾಹೇಶ್ವರನು ಸ್ವಜಾತಿಕರ್ಮವನ್ನುಬಿಟ್ಟು, ಜಾತಿಯನ್ನುಮಾತ್ರ ಅವಲಂಬಿಸಿಕೊಂಡಿರುವನೋ ಅವನೇ ಸಕಲ ಪಾತ್ರಗಳೊಳಗೂ ಉತ್ತಮ ಪಾತ್ರವು. ಅವನಿಗೆ ಕೊಟ್ಟದಾನವು ಅನಂತವಾಗುವದು ಶಿವಭಕ್ತನನ್ನು ಉಲ್ಲಂಘಿಸಿ, ಮತ್ತೊಬ್ಬನಿಗೆ ಕೊಡಲ್ಪಡುವ ದಾನವು ನಿಷ್ಫಲವಾಗುವದು. ಅದನ್ನು ಕೊಟ್ಟವನು ನರಕವನ್ನು ಹೊಂದುವನು.

( ಶಿವಧರ್ಮದಲ್ಲಿ )

ಮೂ ॥ ನಮೆಪ್ರಿಯಶ್ಚತುರ್ವೇದೀಮದ್ಭಕ್ತಶ್ಶ್ವಪಚೋಪಿವಾ । ತಸ್ಮೈದೇಯಂತತೋಗ್ರಾಹ್ಯಂಸಚಪೂಜ್ಯೋಯಥಾಹ್ಯಹಂ ।

ಟೀ ॥ ನಾಲ್ಕುವೇದಗಳನ್ನು ಸಾಂಗವಾಗಿ ಓದಿದವನಾದಾಗ್ಯೂ ನನ್ನಲ್ಲಿ ಭಕ್ತಿಯಿಲ್ಲದವನು ನನಗೆ ಪ್ರೀತಿಪಾತ್ರನಲ್ಲ. ನನ್ನಲ್ಲಿ ಭಕ್ತಿಯುಳ್ಳವನು ಶ್ವಪಚನಾದಾಗ್ಯೂ ನನ್ನ ಪ್ರೀತಿಗೆ ಪಾತ್ರನು. ಯಾವದಾನವನ್ನಾದರೂ ಅವನಿಗೇ ಕೊಡಬೇಕು. ಅವನಿಂದಲೇ ತೆಗೆದುಕೊಳ್ಳಬೇಕು. ಆತನು ನನ್ನಂತೆ ಪೂಜಿಸಲ್ಪಡುವದಕ್ಕೆ ಯೋಗ್ಯನಾಗಿರುವನು.

( ಸ್ಕಾಂದಪುರಾಣದಲ್ಲಿ. ಶಿವನು ಷಣ್ಮುಖನಿಗೆ ಹೇಳುತ್ತಾನೆ. )

ಮೂ ॥ ಮದ್ಭಕ್ತಸ್ಸರ್ವದಾಸ್ಕಂದಶ್ವಪಚೋಪಿಮಮಪ್ರಿಯಃ । ನತಸ್ಮಾದಧಿಕಂಕಿಂಚಿದ್ವಿದ್ಯತೆಪಾತ್ರಮುತ್ತಮಂ ॥

ಟೀ ॥ ಎಲೈ ಷಣ್ಮುಖನೇ ನನ್ನಲ್ಲಿ ಭಕ್ತಿಯುಳ್ಳವನು ಶ್ವಪಚನಾದಾಗ್ಯೂ ಯಾವಾಗಲೂ ನನಗೆ ಇಷ್ಟನಾಗಿದ್ದಾನೆ, ಅವನಿಗಿಂತಲೂ ಉತ್ತಮವಾದ ಪಾತ್ರವು ಮತ್ತೊಂದಿಲ್ಲ.

( ಶಿವಧರ್ಮೋತ್ತರದಲ್ಲಿ )

ಮೂ ॥ ವಿಪ್ರಾಣಾಂವೇದವಿದುಷಾಂಕೋಟಿಂಸಂಪೂಜ್ಯಯತ್ಫಲಂ । ಭಿಕ್ಷಾಮಾತ್ರಪ್ರದಾನೇನತತ್ಫಲಂಶಿವಯೋಗಿನೇ ।

ಟೀ ॥ ವೇದಗಳನ್ನು ತಿಳಿದ ಕೋಟಿ ವಿಪ್ರರುಗಳನ್ನು ಪೂಜಿಸಿದರೆ ಯಾವ ಫಲವೋ ಆ ಫಲವು ಶಿವಯೋಗಿಯಾದ ಮಾಹೇಶನಿಗೆ ಭಿಕ್ಷವನ್ನು ಮಾತ್ರ ಕೊಟ್ಟಾಗ್ಯೂ ಲಭಿಸುವದು

[ ಶಿವಪುರಾಣದಲ್ಲಿ ಪಾರ್ವತಿಗೆ ಶಿವನು ಹೇಳುತ್ತಾನೆ ]

ಮೂ ॥ ಕ್ಷೀಯಂತೇಚವರಾರೋಹೇತಪೋಯಜ್ಞಜಪಾದಯಃ । ನಕ್ಷೀಯ ತೇವರಾರೋಹೇಭಕ್ತವಕ್ತ್ರಹುತಂಹವಿಃ ॥

ಟೀ ॥ ಎಲೈ ಪಾರ್ವತಿಯೇ ತಪಸ್ಸು, ಯಜ್ಞ, ಜಪ, ವೊದಲಾದವುಗಳು ನಾಶವಾಗುವವು, ಆದರೆ ಶಿವಭಕ್ತನ ಮುಖವೆಂಬ ಅಗ್ನಿ ಕುಂಡದಲ್ಲಿ ಹೋಮಮಾಡಲ್ಪಟ್ಟ ಹವಿಸ್ಸು ಎಂದಿಗೂ ನಾಶವಾಗುವದಿಲ್ಲ

ಮೂ ॥ ಶಿವಯೋಗೀಗೃಹೇಯಸ್ಯಭಿಕ್ಷಾಂಗೃಹ್ಣಾತಿಸತ್ಕೃತಾಂ । ಕುಲಂ ತಾರಯತೇತೇನಸಪ್ತಸಪ್ತಚಸಪ್ತಚ ॥

ಟೀ ॥ ಅಷ್ಟಾವರಣ ಸಂಪನ್ನನಾದ ಶಿವಯೋಗಿಯು ಯಾವನ ಮನೆಯಲ್ಲಿ ಭಿಕ್ಷೆಯನ್ನು ತೆಗೆದುಕೊಳ್ಳುತ್ತಾನೋ ಅವನ ಇಪ್ಪತ್ತೊಂದು ಕುಲವು ಉದ್ಧರಿಸಲ್ಪಡುವದು.

ಮೂ ॥ ಯದಿಪಾಪರತಃಕ್ರೂರಸ್ಸ್ವಶ್ರಮಾಚಾರವರ್ಜಿತಃ । ಭಕ್ತಿಲೇಶಯುತಸ್ಸಂದೇಮತ್ಪ್ರಿಯಸ್ಸಗಣಾಧಿಕಃ । ತಸ್ಮಾತ್ಪೂಜ್ಯಾನಮಸ್ಕಾರ್ಯಾವರ್ಣಾಶ್ರಮಪರಾಯಣೈಃ । ವರ್ಣಾಶ್ರಮಪರಿಭ್ರಷ್ಟಾಶ್ಶಿವಭಕ್ತಿಪರಾಯಣಃ ॥

ಟೀ ॥ ಎಲೈಷಣ್ಮುಖನೇಪಾಪಕಾರ್ಯಗಳಲ್ಲಿ ಆಸಕ್ತನಾಗಲಿ, ಕ್ರೂರನಾಗಲಿ, ತನ್ನ ಆಶ್ರಮಾಚಾರಗಳನ್ನು ಬಿಟ್ಟಿರುವವನಾಗಲಿ, ನನ್ನಲ್ಲಿ ಸ್ವಲ್ಪವಾದರೂ ಭಕ್ತಿಯುಳ್ಳವನಾಗಿದ್ದರೆ ಅವನೇ ನನ್ನ ಪ್ರೀತಿಗೆಪಾತ್ರನು. ಅವನೇ ಪ್ರಮಥರಲ್ಲಿ ಶ್ರೇಷ್ಠನು. ಆದ್ದರಿಂದ ವರ್ಣಾಶ್ರಮಾಚಾರಗಳಲ್ಲಿ ನಿರತರಾದವರು ಪ್ರಾಕೃತವರ್ಣಾಶ್ರಮಾಚಾರಗಳನ್ನು ಮೀರಿದ ಶಿವಭಕ್ತಿ ಪರಾಯಣರನ್ನು ಪೂಜಿಸಿ ನಮಸ್ಕರಿಸಬೇಕು.

ಮೂ ॥ ಪ್ರಾಣಲಿಂಗಾಂಗಸಂಬಂಧಿಪಾದಪ್ರಕ್ಷಾಲಿತಂಜಲಂ । ಲಿಂಗಾಂಗಸಂಗರಹಿತಃಪಿಬೇತ್ತಸ್ಯಪುಣ್ಯದಂ ॥

ಟೀ ॥ ಲಿಂಗಧಾರಣ ಹೀನರಾದ ಅಪ್ರಾಕೃತರಾದ ಭವಿಗಳು ಲಿಂಗಾಂಗಸಂಬಂಧಿಯಾದ ವೀರಶೈವನ ಪಾದಗಳನ್ನು ತೊಳೆದ ಜಲವನ್ನು ಭಕ್ತಿಯಿಂದ ಪಾನಮಾಡಬೇಕು. ಹಾಗೆ ಮಾಡಿದವನು ವಿಶೇಷ ಪುಣ್ಯವಂ ಪಡೆಯುವನು.

ಮೂ ॥ ದದ್ಯಾನ್ನವಾಸನಂಯಸ್ತುಶಿವಭಕ್ತಾಯಸಾದರಂ । ಧೃತಲಿಂಗಾಯಸಂಪೂರ್ಣಸಸ್ಯಾತ್ಸರ್ವಾಧಿಪೋಭವೇತ್

ಟೀ । ಯಾವನು ಲಿಂಗಧಾರಿಯಾದ ಶಿವಭಕ್ತನಿಗೆ ಭಕ್ತಿಯಿಂದ ನೂತನವಾದ ಆಸನವನ್ನು ಕೊಡುತ್ತಾನೋ ಅವನು ಸಪ್ತದ್ವೀಪಗಳಿಗೂ ಅಧಿಪತಿಯಾಗುವನು.

ಮೂ । ಛತ್ರಂಚೋಪಾನಹೌಯಸ್ತು ಚಾಮರವ್ಯಜನಾನಿಚ । ದದ್ಯಾಲ್ಲಿಂಗಾರ್ಚಕಸ್ಯಾಸಾವೈಂದ್ರಂಪದಮವಾಪ್ನುಯಾತ್ ।

ಟೀ । ಯಾವನು ಲಿಂಗಾರ್ಚನೆಯಲ್ಲಿ ಆಸಕ್ತನಾದ ಲಿಂಗಧಾರಕನಾದ ವೀರಶೈವನಿಗೆ ಕೊಡೆ, ಪಾದುಕೆ, ಚಾಮರ, ಬೀಸಣಿಗೆ ಇವುಗಳ ದಾನವನ್ನು ಮಾಡುತ್ತಾನೋ ಅವನು ಇಂದ್ರಪದವಿಯನ್ನೈದುವನು

ಮೂ । ದದ್ಯಾದನ್ನಂಮಹಾದೇವಭಕ್ತಾಯಶಿವಯೋಗಿನೆ । ಸರ್ವಪಾಪವಿನಿರ್ಮುಕ್ತಶ್ಶಿವಲೋಕೇಮಹೀಯತೆ ।

ಟೀ । ಲಿಂಗಧಾರಕನಾದ ಶಿವಭಕ್ತನಿಗೆ ಯಾವನು ಅನ್ನವನ್ನು ದಾನಮಾಡುತ್ತಾನೋ ಅವನು ಸಕಲಪಾಪಗಳಿಂದಲೂ ಬಿಡಲ್ಪಟ್ಟವನಾಗಿ ದೇಹಾನಂತರದಲ್ಲಿ ಶಿವಲೋಕದಲ್ಲಿ ಮೆರೆಯುವನು.

ಮೂ । ಯಾವಂತ್ಯನ್ನಸ್ಯಸಿಕ್ಥಾನಿದತ್ತಾನಿಶಿವಯೋಗಿನೆ । ತಾವದ್ವರ್ಷಸಹಸ್ರಾಣಿಭವೇಚ್ಛಿವಪುರೆಸುಖೀ ॥

ಟೀ ॥ ಲಿಂಗಧಾರಕನಾದ ವೀರಶೈವನಿಗೆ ಯಾವನಿಂದ ಎಷ್ಟು ಅನ್ನದ ಅಗುಳುಗಳು ಕೊಡಲ್ಪಡುವವೋ ಆತನು ಸಾವಿರವರ್ಷಗಳ ತನಕ ಕೈಲಾಸದಲ್ಲಿ ಸುಖವಾಗಿ ವಾಸಿಸುವನು.

ಮೂ ॥ ಧನಂದದ್ಯಾದ್ಯಥಾಶಕ್ತಿ ಯಃಪುಮಾನ್ ಶಿವಯೋಗಿನೆ । ಸಧನೇಶತ್ವಮಾಪ್ನೋತಿಸರ್ವಭೋಗಸಮನ್ವಿತಂ ॥

ಟೀ । ಯಾವಪುರುಷನು ಲಿಂಗಧಾರಕನಾದ ಮಾಹೇಶ್ವರನಿಗೆ ತನ್ನ ಯೋಗ್ಯತಾನುಸಾರವಾಗಿ ದ್ರವ್ಯದಾನವಂ ಮಾಡುತ್ತಾನೋ ಅವನು ಸಕಲ ಭೋಗಗಳಿಂದ ಕೂಡಿರುವ ಧನಪತಿತ್ವವನ್ನು ಪಡೆಯುತ್ತಾನೆ.

ಮೂ । ವಸ್ತ್ರಂಶೀತಾಪನೋದಾರ್ಥಂಯೋದದ್ಯಾಚ್ಛಿವಯೋಗಿನೆ । ಸಸರ್ವಭೋಗಸಂಯುಕ್ತಂಲಭತೆಬ್ರಹ್ಮಣಃಪದಂ ।

ಟೀ । ಚಳಿಯು ಪರಿಹರಕ್ಕಾಗಿಯಾವನು ಮಾಹೇಶ್ವರನಿಗೆ ವಸ್ತ್ರದಾನವಂ ಮಾಡುವನೋ ಅವನು ಸಕಲ ಸುಖಗಳಿಂದಲೂ ಕೂಡಿದ ಬ್ರಹ್ಮಲೋಕವನ್ನು ಸೇರುವನು

ಮೂ । ಪಯಸ್ವಿನೀಂಸವತ್ಸಾಂಗಾಂಸರ್ವಾಲಂಕಾರಭೂಷಿತಾಂ । ಯೋದ

ದ್ಯಾಚ್ಛಿವಭಕ್ತಾಯಸಗಚ್ಛೇಚ್ಛಿವಸನ್ನಿಧಿಂ॥

ಟೀ । ಯಾವ ಮನುಷ್ಯನು ಹಾಲುಳ್ಳದ್ದಾಗಿಯೂ, ಕರುವುಳ್ಳದ್ದಾಗಿಯೂ, ಇರುವ ಹಸುವನ್ನು ಸಕಲಾಭರಣಗಳಿಂದ ಅಲಂಕರಿಸಿ, ಶಿವಭಕ್ತನಾದ ಮಾಹೇಶ್ವರನಿಗೆ ಕೊಡುತ್ತಾನೋ ಅವನು ದೇಹಾನಂತರದಲ್ಲಿ ಶಿವಸಾಮೀಪ್ಯವನ್ನೈದುವನು.

ಮೂ ॥ ದದ್ಯಾತ್ಪುಷ್ಪಾಣಿಕರ್ಪೂರವಿಮಿಳಿತಂಯೊನುಲೇಪನಂ । ಲಿಂಗಾರ್ಚನರತಾಯೇಸಚಂದ್ರಲೋಕಮವಾಪ್ನುಯಾತ್ ॥

ಟೀ । ಯಾವನು ಲಿಂಗಪೂಜಾನಿರತನಾದ ಶಿವಭಕ್ತನಿಗೋಸ್ಕರ ಪರಿಮಳಪುಷ್ಪಗಳನ್ನೂ, ಪಚ್ಚಕರ್ಪೂರ, ಕಸ್ತೂರಿ, ಕುಂಕುಮಕೇಸರಿ ಮೊದಲಾದವುಗಳಿಂದ ಕೂಡಿದ ಗಂಧವನ್ನು ಕೊಡುತ್ತಾನೋ ಆವನು ಚಂದ್ರಲೋಕವನ್ನೈದುವನು.

ಮೂ ॥ ಸರ್ವಸಸ್ಯಾವೃತಾಂಭೂಮಿಂಭಕ್ತಾಯಶಿವಯೋಗಿನೆ । ಯೊದದ್ಯಾಚ್ಛಿವಸಾಯುಜ್ಯಂಸಯಾತ್ಯತ್ರನಸಂಶಯಃ ॥

ಟೀ । ಯಾವನು ಸಕಲ ಪೈರುಗಳಿಂದ ಭರಿತವಾದ ಭೂಮಿಯನ್ನು ಭಕ್ತಿಸಂಪನ್ನನಾದ ಮಾಹೇಶ್ವರನಿಗೆ ಭಕ್ತಿಯಿಂದಕೊಡುತ್ತಾನೋ ಅವನು ಶಿವಸಾಯುಜ್ಯವನ್ನು ಪಡೆಯುವನು. ಈ ವಿಷಯದಲ್ಲಿ ಸಂಶಯವಿಲ್ಲ.

ಮೂ ॥ ದತ್ತಾಯಾಂಭುವಿಸಂಭೂತಬೀಜಸಂಖ್ಯಾತವತ್ಸರಾನ್ । ಭೂಮಿದಶ್ಯಾಂಭವೇಲೋಕೇಸರ್ವಾನ್ಕಾಮಾನವಾಪ್ನುಯಾತ್ ॥

ಟೀ । ಮಾಹೇಶ್ವರನಿಗೆ ಭೂದಾನವನ್ನು ಮಾಡಿದವನು ಆ ಭೂಮಿಯಲ್ಲಿ ಹುಟ್ಟಿದ ಬೀಜಗಳಷ್ಟು ಸಂವತ್ಸರಗಳ ಪರ್ಯಂತರ ಶಿವಲೋಕದಲ್ಲಿವಾಸಿಸುತ್ತಾ, ಸಕಲ ಮನೋರಥಗಳನ್ನೂ ಪಡೆಯುವನು.

ಮೂ । ಜ್ಞಾನಿನೆಶಿವಭಕ್ತಾಯಜ್ಞಾನಶಾಸ್ತ್ರಸ್ಯಪುಸ್ತಕಂ । ದದ್ಯಾದ್ವಿಪ್ರಾಯಯೋಮರ್ತ್ಯಸ್ಸಸಮ್ಯಕ್ ಜ್ಞಾನವಾನ್ಭವೇತ್ ॥

ಟೀ । ಯಾವನು ಶಿವಭಕ್ತನಾಗಿಯೂ, ಶಿವಜ್ಞಾನಸಂಪನ್ನನಾಗಿಯೂ ಇರುವ ಬ್ರಾಹ್ಮಣನಿಗೆ ವೇದಾಂತಶಾಸ್ತ್ರದ ಪುಸ್ತಕವನ್ನು ಕೊಡುತ್ತಾನೋ ಅವನು ಒಳ್ಳೇಜ್ಞಾನಿಯಾಗುವನು.

ಮೂ ॥ ಕಾರಯಿತ್ವಾಗೃಹಂಸಮ್ಯಕ್ಸರ್ವೋಪಕರಣಾನ್ವಿತಂ। ಲಿಂಗಾಂಗಸಂಗಿನೇದದ್ಯಾದ್ಯಸ್ಸಶೈವಪದಂವ್ರಜೇತ್ ॥

ಟೀ ॥ ಯಾವನು ಸಕಲ ಸಾಮಗ್ರೀಸಹಿತವಾಗಿ ಮನೆಯನ್ನು

ಕಟ್ಟಿಸಿ, ಲಿಂಗಾಂಗಸಂಗಿಯಾದ ಮಾಹೇಶ್ವರನಿಗೆ ದಾನವಂ ಮಾಡುತ್ತಾ ನೋ ಆವನು ಶಿವಲೋಕವನ್ನೈದುವನು.

ಮೂ ॥ ಕಾಷ್ಠಾಸನಂ ತಂತುರಚಿತಾಂ ಶಯ್ಯಾಂ ಖಟ್ವಾಂಚ ಯೋಗಿನೇ । ದದ್ಯಾದ್ಭಕ್ತ್ಯಾಯುಸಪುಮಾನ್ಯಾಂ ಭವಂ ಲೋಕಮಾಪ್ನುಯಾತ್ ॥

ಟೀ ॥ ಅರಳೆಯಿಂದ ಮಾಡಲ್ಪಟ್ಟ ಹಾಸಿಗೆಯನ್ನೂ ಮಂಚವನ್ನೂ ಶಿವಭಕ್ತಿಯುಳ್ಳ ಮಾಹೇಶ್ವರನಿಗೆ ಯಾವನು ಭಕ್ತಿಯಿಂದ ಕೊಡುತ್ತಾ ನೋ ಅವನು ಶಂಭುಲೋಕವನ್ನೈದುವನು.

ಮೂ । ಆತ್ಮನೋಯದಭೀಷ್ಟಂ ತು ತೇನ ದ್ರವ್ಯೇಣ ಪೂಜಯೇತ್ । ಶಿವಭಕ್ತಂ ದ್ವಿಜಾಗ್ರ್ಯಂ ಚ ತಸ್ಮೈ ಶಂಭುಃ ಪ್ರಸೀದತಿ ॥

ಟೀ । ವಿವೇಕಿಯಾದ ಪುರುಷನು ತನಗೆ ಇಷ್ಟವಾದ ಎಲ್ಲಾ ವಸ್ತುಗಳಿಂ ದ್ವಿಜರಿಗಿಂತಲೂ ಶ್ರೇಷ್ಠನಾದ ಶಿವಭಕ್ತನನ್ನು ಪೂಜಿಸಬೇಕು. ಅದರಿಂದ ಭಕ್ತರಿಗೆ ಸುಖಕರನಾದ ಪರಮೇಶ್ವರನು ಪ್ರಸನ್ನನಾಗುತ್ತಾನೆ.

ಮೂ । ಅನ್ನಂ ವಾ ಜಲಮಾತ್ರಂ ವಾ ಯದ್ದತ್ತಂ ಲಿಂಗಧಾರಿಣೇ । ತದನ್ನಂ ಮೇರುಸದೃಶಂ ತಜ್ಜಲಂ ಸಾಗರೋಪಮಂ ॥

ಟೀ ॥ ಲಿಂಗಧಾರಿಯಾದ ಮಾಹೇಶ್ವರನಿಗೆ ಅನ್ನವನ್ನಾದರೂ, ಉದಕವನ್ನಾದರೂ ದಾನವಂ ಮಾಡಿದರೆ, ಆ ಅನ್ನವು ಮೇರುಪರ್ವತಕ್ಕೆ ಸಮಾನವೂ ಆ ಜಲವು ಸಮುದ್ರಕ್ಕೆ ಸಮಾನವೂ ಆಗುವದು.

(ಫಲಸ್ತುತಿ.)

ಸಂಗೃಹ್ಯ ವೇದಾಗಮಾದಿ ಪುರಾಣೇಭ್ಯೋ ಯಥಾಮತಿ ।
ತೋಂಟದಾರ್ಯೇಣ ರಚಿತಾ ವೀರಶೈವ ಪ್ರದೀಪಿಕಾ ॥
ವೀರಶೈವಹಿತಾರ್ಥಂ ಯೋ ರಚಿತಾಮುತ್ತಮಾಮಿಮಾಂ ॥
ಭಕ್ತ್ಯಾ ಲಿಖತಿ ಭೂಯೋಪಿ ಪಠತ್ಯರ್ಥಂ ಗುರೋರ್ಮುಖಾತ್ ।
ಜಾನಾತಿ ಚ ಸಮರ್ತ್ಯೋತ್ರ ಭುಕ್ತ್ವಾ ಭೋಗಾನ್ಯಥೇಪ್ಸಿತಂ ॥
ದೇಹಾಂತೇ ಶಿವಸಾಮೀಪ್ಯಂ ಪ್ರಾಪ್ನೋತ್ಯೇವ ನಸಂಶಯಃ । ೨ ।

---

ಶ್ರೀಮತ್ಪರಶಿವ ಪ್ರಸಾದಾಸಾದಿತ ನಿರ್ಮಲಜ್ಞಾನವೈಭವನಾದ
ತೋಂಟದ ಸಿದ್ಧೇಶ್ವರನೆಂಬಾಚಾರ್ಯನಿಂ ಸಂಗ್ರಹಿಸಲ್ಪಟ್ಟ
ವೀರಶೈವ ಪ್ರದೀಪಿಕೆಯು ಸಂಪೂರ್ಣಮಾದುದು

---

